ಶ್ರೀಃ

ಶ್ರೀ ಕಲ್ಕಿಸಿಂಹ ಭಗವತ್ಪ್ರಬನ್ಧಮಾಲಾ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

ಎಂಬ

## ಸಹಸ್ರಗಾಥಾತ್ಮಕ - ದ್ರಾವಿಡ ದಿವ್ಯಪ್ರಬನ್ಧ



ಶ್ರೀ ಕಲ್ಕಿಸಿಂಹಭಗವದ್ವಿರಚಿತವಾದ—(೧) ಕನ್ನಡಪ್ರತಿಪದಾರ್ಥ

(೨) ಸಂಸ್ಕೃತಪದ್ಯಾತ್ಮಕ—ಸಹಸ್ರಗಾಥಾರತ್ನಾವಳೀ

(೩) ಕನ್ನಡತಾತ್ಪರ್ಯ—ಸಮೇತ

(ದ್ರಮಿಡೋಪನಿಷತ್ಸಂಗತಿ-ದ್ರಮಿಡೋಪನಿಷತ್ತಾತ್ಪರ್ಯರತ್ನಾವಳೀ-ಸಹಿತ)



೫ನೆಯ ಸಂಚಿಕೆ

## ಪಞ್ಚಮ ಶತಕ

(ಸವ್ಯಾಖ್ಯಾನ)

ಬೆಂಗಳೂರು

ವೆ ಬಿ ಸುಬ್ಬಯ್ಯ ಅಂಡ್ ಸನ್ಸ್ ಯವರ

ಎಲೆಕ್ಟ್ರಿಕ್ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು

೧೦ ಸಂಚಿಕೆಗಳುಳ್ಳ
ಸಮಗ್ರ-ಪ್ರಬನ್ಧದ ಕ್ರಯ
ರೂ 6-0-0

1931



ಈ ಸಂಚಿಕೆಯ ಬೆಲೆ
12 ಅಣೆ

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ಶಠಕೋಪಾಯ ನಮಃ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

## (ಪಞ್ಚಮ ಶತಕ)

ಶ್ರೀ ಕಲ್ಕಿಸಿಂಹ ಭಗವದ್ವಿರಚಿತ—ವ್ಯಾಖ್ಯಾನಸಹಿತ.

ಶ್ರೀಮಾನ್ ಜಯತಿ ಕಲ್ಕೀನ್ದ್ರೋ ನಾರಸಿಂಹಃ ಪರಾತ್ಪರಃ ।
ಪರಿತ್ರಾಣಾಯ ಸಾಧೂನಾಂ ಕೃತಾವತರಣೋ ಹರಿಃ ॥

## ಪಞ್ಚಮಶತಕದಲ್ಲಿ—ಪ್ರಥಮದಶಕ.

### (ಕೈಯಾರ್‌ಶಕ್ಕರತ್ತು—)

(ಈ ದಶಕದಲ್ಲಿ—ಕೃಪಾನಿಧಿಯಾದ ಭಗವನ್ತನ ಅನುಭವಪ್ರಕಾರವು ವರ್ಣಿಸಲ್ಪಡುತ್ತದೆ.)

(೧) ಕೈಯಾರ್ ಶಕ್ಕರತ್ತೆನ್ ಕರುಮಾಣಿಕ್ಕಮೇ ಯೆನ್ಱೆನ್ಱು,
ಪೊಯ್ಯೇ ಕೈಮ್ಮೈಶೊಲ್ಲಿ ಪ್ಪುಱಮೇ ಪುಱಮೇ ಯಾಡಿ,
ಮೆಯ್ಯೇ ಪೆಱ್ಱೊೞಿನ್ದೇನ್ ವಿಧಿವಾಯ್ಕ್ಕಿನ್ಱು ಕಾಪ್ಪಾರಾರ್,
ಐಯೋ ಕಣ್ಣಪಿರಾನಱೈಯೋ ವಿನಿಪ್ಪೋನಾಲೇ.

ಪ್ರ|| ಕೈ-ಹಸ್ತದೊಡನೆ, ಆರ್-ಸೇರಿ ಪ್ರಕಾಶಿಸುವ, ಶಕ್ಕರಮ್-ಚಕ್ರವನ್ನು ಧರಿಸಿರುವ, ಎಃ ಕರುಮಾಣಿಕ್ಕಮೇ-ನನ್ನ ನೀಲಮಣಿವರ್ಣನೇ, ಎನ್ನೆನ್ನು-ಎಂದು ಹೇಳಿ ಹೇಳಿ (ನಟಿಸುತ್ತ), ಪೊಯ್ಯೇ-ಮಿಥ್ಯಾಭೂತವಾದ ಪ್ರೀತಿಯನ್ನು ತೋರಿಸುವಂತೆ, ಕೈಮ್ಮೈಶೊಲ್ಲಿ-ಕೃತ್ರಿಮವಚನಗಳನ್ನು ಹೇಳಿ, ಪುಱಮೇ ಪುಱಮೇ-ಬಾಹ್ಯವಿಷಯಗಳಲ್ಲಿ ಒಂದರಮೇಲೆ ಒಂದನ್ನು ಆಶ್ರಯಿಸಿ, ಆಡಿ-ಸರ್ವದಾ ಸಂಚರಿಸುತ್ತಿದ್ದು, ಮೆಯ್ಯೇ-ಪಾರಮಾರ್ಥಿಕ ಪ್ರೇಮಯುಕ್ತರು ಹೊಂದುವ ಸತ್ಫಲವನ್ನೇ, ಪೆಱ್ಱೊೞಿನ್ದೇಃ-ಹೊಂದಿದೆನು. ವಿಧಿ-ಅಪರಿಹಾರ್ಯವಾದ ನಿನ್ನ ಕೃಪೆಯು, ವಾಯ್‌ಕ್ಕಿನ್ಱು-ಈಪ್ರಕಾರ ಫಲಿಸುತ್ತಿರುವುದನ್ನು, ಆರ್-ಯಾರು, ಕಾಪ್ಪಾರ್-ತಡೆದು ಅಡ್ಡಿಮಾಡುವರು? ಕಣ್ಣಾಃ-ಸರ್ವಸುಲಭನಾದ ಶ್ರೀಕೃಷ್ಣರೂಪಿಯಾದ, ಪಿರಾಃ-ನನ್ನ ಸ್ವಾಮಿಯಾದ ನೀನು, ಇನಿ-ಇನ್ನುಮೇಲೆ (ಹೀಗೆ ನಿನ್ನ ಕೃಪೆಯು ನನ್ನಲ್ಲಿ ಫಲಿಸಿದಮೇಲೆ), ಪೋನಾಲೇ-ಬಿಟ್ಟು ಹೋಗಬಲ್ಲೆಯೋ? ಐಯೋ-ಅಯ್ಯೋ!, ಅಪ್ಪೈಯೋ-ಹೋಗುವುದಕ್ಕೆ ಸಾಧ್ಯವಾದರೆ ಹೋಗು-ನೋಡೋಣ (ನೀನು ಹೋಗಲಾರೆಯೆಂದು ಭಾವವು).

( ಸ-ಗಾ-ರ || )—

ಹಸ್ತೇನೋದ್ಧೃತಚಕ್ರ ! ನೀಲಮಣಿವರ್ಣೇತ್ಯೇವ ಮಿಥ್ಯೋಕ್ತಿಭಿ-
ಸ್ಸ್ತುತ್ವಾ ತ್ವಾಮಹಮಸ್ಮಿ ಬಾಹ್ಯವಿಷಯೇಷ್ವೇವಾತ್ರ ಸಕ್ತಸ್ಸದಾ |
ಏವಂ ಕೃತ್ರಿಮಬುದ್ಧಿರಪ್ಯಹಹ ! ಸಮ್ಪ್ರಾಪ್ತೋಽಸ್ಮಿ ಸತ್ಯಂ ಫಲಂ !
ಭಾಗ್ಯಂ ವಾರಯಿತುಂ ಪ್ರಭುಃ ಕ ಇಹ? ಕಿಂ ಕೃಷ್ಣಾಸಿ ಗನ್ತುಂ ಪ್ರಭುಃ? ||

ತಾ|| ("ನಾನು ಕೃತ್ರಿಮೋಕ್ತಿಯಿಂದ ನಿನ್ನಲ್ಲಿ ಪ್ರೀತಿಯನ್ನು ನಟಿಸಿದರೂ ನೀನು ಕೃಪಾಪರವಶನಾಗಿ ಸತ್ಯವಾದ ಫಲವನ್ನೇ ಕೊಟ್ಟು ಇರುತ್ತೀಯೆ. ಇದು ವಿಧಿಪ್ರಾಪ್ತವಾದುದು ಇನ್ನುಮೇಲೆ ಹೇಗೆ ನನ್ನನ್ನು ನೀನು ಬಿಟ್ಟುಹೋಗುವಿ!" — ಎಂದು ಶ್ರೀ ಶಠಾರಿಮುನಿವರ್ಯರು ಶ್ರೀ ಕೃಷ್ಣರೂಪಿಯಾದ ಭಗವನ್ತನನ್ನು ಕುರಿತು ಹೇಳುತ್ತಾರೆ) "ಶ್ರೀಚಕ್ರಪಾಣಿಯಾಗಿಯೂ, ನೀಲಮಣಿವರ್ಣನಾಗಿಯೂ ಇರುವ ನನ್ನ ಸ್ವಾಮಿಯೇ!"—ಎಂದು ಕೃತ್ರಿಮೋಕ್ತಿಗಳಿಂದ ಮಿಥ್ಯಾಭೂತವಾದ ಪ್ರೀತಿಯನ್ನೇ ನಾನು ನಿನ್ನಲ್ಲಿ ತೋರಿಸುತ್ತ, ಬಾಹ್ಯವಿಷಯಗಳಲ್ಲೇ ಅನವರತ ಸಕ್ತನಾಗಿದ್ದರೂ, ನಿನ್ನಲ್ಲಿ ಸತ್ಯವಾದ ಪ್ರೀತಿಯುಳ್ಳವರು ಹೊಂದುವ ಉತ್ತಮ ಫಲವನ್ನೇ ನಾನು ಹೊಂದಿದೆನು ನಿನ್ನ ಕೃಪೆಯು ಅಪರಿಹಾರ್ಯವಾಗಿ (ವಿಧಿರೂಪವಾಗಿ) ಹೀಗೆ ಫಲಿಸುತ್ತಿರುವುದನ್ನು ಯಾರು ತಡೆಯಬಲ್ಲರು? ಸರ್ವಸುಲಭನಾದ

ಶ್ರೀಕೃಷ್ಣನೇ! ಇನ್ನುಮೇಲೆ ನೀನು ನನ್ನನ್ನು ಹೇಗೆ ಬಿಟ್ಟು ಹೋಗಬಲ್ಲೆ? ನೋಡು. (ಎನ್ನುತ್ತಾರೆ.)

(೨) ಪೋ'ನಾಯ್ ಮಾಮರುದಿನ್ನಡುವೇ ಯೆನ್ ಪೊಲ್ಲಾ ಮಣಿಯೇ,

ತೇನೇ ಯಿನ್ನಮುದೇ ಯೆನ್ಱೆನ್ಱೇ ಶಿಲಕೂತ್ತು ಚೊಲ್ಲ,
ತಾನೇಲೆಮ್ಬೆರುಮಾನವನೆನ್ನಾಕಿ ಯೊೞಿನ್ದಾನ್,
ವಾನೇ ಮಾನಿಲಮೇ ಮಱ್ಱು ಮುಱ್ಱುಮೆನ್ನುಳ್ಳನವೇ.

ಪ್ರ|| ಮಾ - ಮಹಾಕಾಯಗಳೊಡನೆ ಅಸುರಾವಿಷ್ಟವಾದ, ಮರುದಿನ್ - ಯಮುಳವೃಕ್ಷಗಳ, ನಡುವೇ-ಮಧ್ಯದಲ್ಲಿ, ಪೋನಾಯ್-ಹೋದವನೇ!, ಪೊಲ್ಲಾ -ಅತ್ಯುಜ್ಜ್ವಲವಾದ, ಎನ್‌ಮಣಿಯೇ-ನನ್ನ ರತ್ನವೇ!, ತೇನೇ-ಜೇನುತುಪ್ಪದಂತೆ ಮಧುರ ರಸಮಯನೇ, ಇನ್ ಅಮುದೇ-ಭೋಗ್ಯವಾದ ಅಮೃತದಂತೆ ಉಜ್ಜೀವನ ರೂಪಿಯಾದವನೇ, ಎನ್ಱೆನ್ಱೇ-ಎಂದು ಒಂದೊಂದಾಗಿ, ಶಿಲಕೂಱ್ಱು-ಕೆಲವು ನಟನೋಕ್ತಿರೂಪವಾದ ಮಾತುಗಳನ್ನು, ಶೊಲ್ಲ-ಹೇಳಲು, ಎಮ್ ಪೆರುಮಾನ್-ನನ್ನ ಸ್ವಾಮಿಯಾದ, ಅವನ್-ಅವನು, ತಾನೇಲ್-ತಾನು ಮಾಡಿದಹಾಗೆಯೇ ಯಥಾರ್ಥವೆಂದು ಭಾವಿಸಿ, ಎನ್-ನನ್ನ ಅಭಿಮಾನದೊಳಗೆ, ಆಕಿಯೊೞಿನ್ದಾನ್-ಅನ್ತರ್ಭೂತನಾಗಿ ಬಿಟ್ಟನು. ವಾನೇ-ಆಕಾಶವೂ, ಮಾನಿಲಮೇ-ಮಹಾಪೃಥಿವಿಯಾದ ಲೀಲಾವಿಭೂತಿಯೂ, ಮಱ್ಱುಮ್-ಮತ್ತು ನಿತ್ಯವಿಭೂತಿಯೂ, ಮುಱ್ಱುಮ್-ಎಲ್ಲವೂ, ಎನ್ ಉಳ್ಳನ-ನನ್ನೊಳಗೆ ಸೇರಿರುವಂತೆ ಆಗಿವೆ.

( ಸ-ಗಾ-ರ || )—

ಹೇ ! ಯುಗ್ಮಾರ್ಜುನಮಧ್ಯಗ ! ಪ್ರಿಯಮಣೇ! ಮೇ ದಿವ್ಯಮಧ್ವಾತ್ಮಕ !
ಶ್ರೀನಾಥಾಮೃತರೂಪಭಾಗಿತಿ ಬಹುಪ್ರೇಮೋಕ್ತಿಭಿಸ್ತಂ ಸ್ತುವನ್ |
ಮಿಥ್ಯಾಽಹಂ ನಟನೈಶ್ಚ ಹನ್ತ ! ಫಲಭಾಙ್ಮಯ್ಯೇವ ನಾಥೋ ಮಮ
ಸ್ವೈರಂ ಭಾತಿ ಧರಾದ್ಯುಲೋಕಪರಮವ್ಯೋಮಾದಿಭಿಶ್ಚಾಖಿಲೈಃ ||

ತಾ|| "ಎಲೈ! ಯಮುಳಾರ್ಜುನವೃಕ್ಷಗಳ ನಡುವೆ ಹೋಗಿ ಅವುಗಳನ್ನು ಮುರಿದವನೇ! ಅತ್ಯುಜ್ಜ್ವಲವಾದ ನನ್ನ ಪ್ರಿಯರತ್ನವೇ! ಮಧುವಿನಂತೆ ನನಗೆ ಮಧುರತಮನೇ! ಅಮೃತದಂತೆ ನನಗೆ ಸಂಜೀವನಭೂತನೇ!"—ಎಂದು ನಾನಾಪ್ರಕಾರಗಳಿಂದ ಕೆಲವು ನಟನೋಕ್ತಿಗಳನ್ನು ನಾನು ಹೇಳಲು, ನನ್ನ ಸ್ವಾಮಿಯಾದ ಅವನು

ಆ ಉಕ್ತಿಗಳನ್ನು ಯಥಾರ್ಥವೆಂದು ಭಾವಿಸಿ, ನನ್ನ ಅಭಿಮಾನದೊಳಗೆಯೇ ತಾನು ತನ್ನ ಲೀಲಾವಿಭೂತಿ-ನಿತ್ಯವಿಭೂತ್ಯಾದಿ ಪರಿವಾರಸಹಿತನಾಗಿ ಸೇರಿಕೊಂಡು ನನಗೆ ಅನುಭಾವ್ಯನಾಗಿರುತ್ತಾನೆ.

(೩) ಉಳ್ಳಿನ ಮಱ್ಱುಳವಾ ಪ್ಪುಱಮೇ, ಶಿಲ ಮಾಯಂ ಶೊಲ್ಲಿ,
ವಳ್ಳಲ್ ಮಣಿವಣ್ಣನೇ ಯೆನ್ಱೆನ್ೞೇ ಯುನ್ನೈಯುಂ
ವಞ್ಚಿಕ್ಕುಮ್,
ಕಳ್ಳಮನಮ್ ತವಿರ್ನ್ದೇ ಯುನ್ನೈ
ಕ್ಕಣ್ಡುಕೊಣ್ಡುಯ್ನ್ದೊೞಿನ್ದೇನ್,
ವೆಳ್ಳತ್ತಣೈಕ್ಕಡನ್ದಾಯಿನಿಯುನ್ನೈ ವಿಟ್ಟೆನ್ಕೊಳ್ವನೇ.

ಪ್ರ॥ ಉಳ್ಳಿನ-ಅನ್ತರ್ಗತವಾದವುಗಳು, ಮಱ್ಱು-ನಿನ್ನನ್ನು ಹೊರತು ಮಿಕ್ಕ ಪ್ರಾಕೃತವಿಷಯಗಳಾಗಿ, ಉಳವಾ-ನಡೆಯುತ್ತಿರಲು, ಪುಱಮೇ-ಖಂಡಾದುಪರಿ ತಲದಲ್ಲಿ ಬಹಿರ್ಭೂತನಾಗಿ, ವಳ್ಳಲ್-ಉದಾರನಾಗಿರುವವನೇ, ಮಣಿವಣ್ಣನೇ-ನೀಲಮಣಿವರ್ಣನೇ, ಎನ್ಱೆನ್ಱು-ಎಂದು ಎಂದು ಅನೇಕಾವೃತ್ತಿ, ಶಿಲಮಾಯಮ್-ಕೆಲವು ಕಪಟೋಕ್ತಿಗಳನ್ನು, ಶೊಲ್ಲಿ-ಹೇಳಿ, ಉನ್ನೈಯುಮ್ - ಸರ್ವಜ್ಞನಾದ ನಿನ್ನನ್ನೂ, ವಞ್ಚಿಕ್ಕುಮ್-ವಞ್ಚಿಸುವಂತೆ, ಕಳ್ಳಮ್-ಕೃತ್ರಿಮ ಸ್ವಭಾವವುಳ್ಳ, ಮನಮ್-ಮನಸ್ಸನ್ನು, ತವಿರ್ನ್ದು-ತ್ಯಜಿಸಿ, ಉನ್ನೈ-ನಿನ್ನನ್ನು, ಕಣ್ಡುಕೊಣ್ಡು-ಸಾಕ್ಷಾತ್ಕರಿಸಿ, ಉಯ್ನ್ದೊೞಿನ್ದೇನ್ - ಉಜ್ಜೀವಿಸಿದೆನು. ವೆಳ್ಳಮ್-ಕ್ಷೀರ ಸಮುದ್ರದಲ್ಲಿ, ಅಣೈಕ್ಕಿಡನ್ದಾಯ್-ಶಯನಮಾಡಿರುವವನೇ, ಇನಿ-ನಿನ್ನ ಕೃಪೆಯು ಫಲಿಸಿದಮೇಲೆ, ಉನ್ನೈವಿಟ್ಟು-ನಿನ್ನನ್ನು ಬಿಟ್ಟು, ಎನ್ಕೊಳ್ವನ್-(ನಶ್ವರವಾದ) ಯಾವುದನ್ನು ನಾನು ಅಂಗೀಕರಿಸುವೆನು?

( ಸ-ಗಾ-ರ ॥ )—

ಕ್ಷುದ್ರೇಷ್ವೇವ ಕಿಲೇತರೇಷು ವಿಷಯೇಷ್ವಾಸೀನ್ಮತಿರ್ಮೇ ಹರೇ !
ಮಿಥ್ಯಾಽಹಂ ನಟನೈರುದಾರಮಣಿವರ್ಣೇತ್ಯೇವ ಚ ತ್ವಾಂ ಸ್ತುವನ್ |
ಸರ್ವಜ್ಞಸ್ಯ ಚ ವಞ್ಚಕೋಽಭವಮಹೋ ! ತಾಂ ದುರ್ದಶಾಂ ಸನ್ತ್ಯಜನ್
ಧನ್ಯೋಽಹಂ ತವ ದರ್ಶನೇನ ಹಿ ಸುಧಾಮ್ಭೋಧೀಶ್ವರ ! ನಾನ್ಯದ್ಭಜೇ ||

ತಾ॥ ನಾನು ಕ್ಷುದ್ರವಿಷಯಗಳಲ್ಲಿ ಸಕ್ತಚಿತ್ತನಾಗಿದ್ದರೂ ನಿನ್ನನ್ನು ಮಿಥ್ಯಾ ಸ್ತೋತ್ರಮಾಡಲುದ್ಯುಕ್ತನಾಗಿ—"ಉದಾರಸ್ವಭಾವನೇ ! ಮಣಿವರ್ಣನೇ !"—

ಎಂದು ಅನೇಕಾವೃತ್ತಿ ಕಪಟೋಕ್ತಿಗಳಂ ಹೇಳಿ ನಿನ್ನನ್ನು ವಂಚಿಸುತ್ತಿದ್ದು, ಕ್ರಮೇಣ ನನ್ನ ಕೃತ್ರಿಮ ಸ್ವಭಾವವನ್ನು ಬಿಟ್ಟು, ನಿನ್ನನ್ನು ಸಾಕ್ಷಾತ್ಕರಿಸಿ ಉಜ್ಜೀವಿಸಿದೆನು. ಕ್ಷೀರಾರ್ಣವಶಾಯಿಯಾದ ಸ್ವಾಮಿಯೇ! ಈಪ್ರಕಾರ ನಿನ್ನ ಕೃಪೆಯು ಫಲಿಸಿದಮೇಲೆ ನಾನು ನಿನ್ನನ್ನು ಬಿಟ್ಟು ಇನ್ನು ಯಾವವಸ್ತುವನ್ನು ಅಪೇಕ್ಷಿಸುವೆನು?

(೪) ಎಱ್ಕೊಳ್ವನುನ್ನೈವಿಟ್ಟೆನ್ನುಮ್, ವಾಶಕಙ್ಗಳ್
ಶೊಲ್ಲಿಯುಮ್,
ವಱ್ಕಳ್ವನೇಱ್ ಮನತ್ತೈ ವಲಿತ್ತು ಕ್ಕಣ್ಣನೀರ್ ಕರನ್ದು,
ನಿಱ್ಕಣ್ ನೆರುಙ್ಗವೈತ್ತೇ ಯೆನದಾವಿಯೈ ನೀಕ್ಕಕಿಲ್ಲೇಱ್,
ಎಱ್ಕಣ್ ಮಲಿನಮಱುತ್ತೆನ್ನೈ ಕ್ಕೂವಿಯರುಳಾಯ್
ಕಣ್ಣನೇ.

ಪ್ರ|| ಉನ್ನೈ-ನಿನ್ನನ್ನು, ವಿಟ್ಟು-ಬಿಟ್ಟು, ಎಱ್-ಇನ್ನು ಯಾವ ವಸ್ತುವನ್ನು, ಕೊಳ್ವೇಱ್-ನಾನು ಸ್ವೀಕರಿಸುವೆನು ?, ಎನ್ನುಮ್-ಎಂಬ, ವಾಶಕಙ್ಗಳ್-ಉಕ್ತಿಗಳನ್ನು, ಶೊಲ್ಲಿಯುಮ್-ಹೇಳಿಯೂ, ವಲ್-(ಅನಾದಿಸಿದ್ಧವಾಗಿ ಆತ್ಮಾಪಹಾರವಂ ಮಾಡಿ) ಪ್ರಬಲವಾದ ಪಾಪವುಳ್ಳ, ಕಳ್ವನೇಱ್ - ಕೃತ್ರಿಮಬುದ್ಧಿಯುಳ್ಳ ನಾನು, ಮನತ್ತೈ-ನನ್ನ ಮನಸ್ಸನ್ನು, ವಲಿತ್ತು-ಚೆನ್ನಾಗಿ ವಶೀಕರಿಸಿ, ಕಣ್ಣನೀರ್-ಕಣ್ಣುನೀರನ್ನು, ಕರನ್ದು-(ವಿಷಯ ವಾಸನಾವೃತ್ತಿಯಿಂದ) ಬದಲಾಯಿಸಿ, ಮನತ್ತೈ-ಆ ನನ್ನ ಮನಸ್ಸನ್ನು, ನಿಱ್ಕಣ್-ನಿನ್ನ ಮೇಲೆಯೇ, ನೆರುಙ್ಗವೈತ್ತು-ಸ್ಥಿರವಾಗಿ ನಿಲ್ಲಿಸಿ, ಎನದು ಆವಿಯೈ-ನನ್ನ ಆತ್ಮತತ್ವವನ್ನು, ನೀಕ್ಕಕಿಲ್ಲೇಱ್-(ಸಂಸಾರಬನ್ಧದಿಂದ) ನಿವೃತ್ತವಾಗುವಂತೆ ಮಾಡುವುದಿಲ್ಲ. (ಇದಕ್ಕೆ ಕಾರಣಭೂತವಾದ) ಎಱ್ಕಣ್ ಮಲಿನಮ್-ನನ್ನ ಅವಿದ್ಯಾದಿ ದೋಷವನ್ನು, ಅಱುತ್ತು - ಭೇದಿಸಿ, ಎನ್ನೈ - ಅಶಕ್ತನಾದ ನನ್ನನ್ನು, ಕಣ್ಣನೇ - (ಶೋಕಾಕ್ರಾನ್ತರಾದವರನ್ನು- "ಮಾಶುಚಃ" ಎಂದು ಸಮಾಧಾನಪಡಿಸುವ) ಕೃಷ್ಣನೇ !, ಕೂವಿಯರುಳಾಯ್-(ನಿನ್ನ ಬಳಿಗೆ) ಕರೆದುಕೋ.

( ಸ-ಗಾ-ರ || )—

ಕಿಂ ಕಾಂಕ್ಷೇಽದ್ಯ ವಿನಾ ಭವನ್ತಮಿತಿ ಚ ಸ್ತೋತ್ರಂ ವೃಷಾ ತೇ ಸ್ವಯಂ
ಕುರ್ವಱ್ ವಞ್ಚಕ ಆಸಮುದ್ಯ ಮನಸಿ ಸ್ಥೈರ್ಯೇಣ ಚಾಶ್ರುಸ್ರುವೈಃ |
ನಾತ್ಮಾನಂ ಹಿ ನಿವಾರಯಾಮಿ ವಿಷಯಾನ್ಮದ್ದೃಷ್ಟಿಮಾಲಿನ್ಯಹಾ
ತ್ವಂ ಮಾಮಾಹ್ವಯ ಕೃಷ್ಣ ! ನಾನ್ಯಶರಣೋಽಸ್ಮೀತ್ಯೇವ ಸತ್ಯಂ ಬ್ರುವೇ||

ತಾ॥ "ನಿನ್ನನ್ನು ಬಿಟ್ಟು ನಾನು ಇನ್ನು ಯಾವ ವಸ್ತುವನ್ನು ಅಪೇಕ್ಷಿಸುವೆನು?"—ಎಂಬ ಉಕ್ತಿಗಳನ್ನು ಹೇಳಿಯೂ, ಮಹಾ ಕೃತ್ರಿಮಬುದ್ಧಿಯುಳ್ಳ ನಾನು ನನ್ನ ಮನಸ್ಸನ್ನು ವಶೀಕರಿಸಿ, ಕಣ್ಣನೀರನ್ನು ಸದ್ವಿಷಯದಲ್ಲಿ ಸುರಿದು, ನಿನ್ನಲ್ಲೇ ನನ್ನ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿ, ನನ್ನ ಆತ್ಮೋಜ್ಜೀವನವನ್ನು ಪಡೆಯುವುದಿಲ್ಲ. ಇದಕ್ಕೆ ಕಾರಣಭೂತವಾದ ನನ್ನ ಅವಿದ್ಯಾದಿ ದೋಷವನ್ನು ನೀನೇ ಭೇದಿಸಿ, ಎಲೈ ಶ್ರೀಕೃಷ್ಣನೇ! ನನ್ನನ್ನು ನಿನ್ನ ಬಳಿಗೆ ಕರೆದುಕೋ.

(೫) ಕಣ್ಣಪಿರಾನ್ಯೆ ವಿಣ್ಣೋರ್ ಕರುಮಾಣಿಕ್ಕತ್ತೈ ಯಮುದ್ದೈ
ನಣ್ಣಿಯುಮ್ ನಣ್ಣಕಿಲ್ಲೇನ್ ನಡುವೇಯೋರುಡಮ್ಬಿಲಿಟ್ಟು,
ತಿಣ್ಣಮ್ಅೞುನ್ದ ಕ್ಕಟ್ಟಿ ಪ್ಪಲಶೆಯ್ವಿನ್ವೈ ವನ್ಕಯಿಱ್ಱಾಲ್,
ಪುಣ್ಣೈಮಱೈತ್ತುವರಿನ್ದೆನ್ನೈ ಪ್ಪೋರ ವೈತ್ತಾಯ್ ಪುಱಮೇ.

ಪ್ರ॥ ಕಣ್ಣನ್-ಕೃಷ್ಣನಾಗಿ (ಅವತರಿಸಿ), ಪಿರಾನ್ಯೆ-(ಮಾಮೇಕಂ ಶರಣಂ ವ್ರಜ-ಎಂದು ಹೇಳಿ) ಉಪಕರಿಸಿದ ಸ್ವಾಮಿಯನ್ನು, ವಿಣ್ಣೋರ್-ನಿತ್ಯಸೂರಿಗಳಿಗೆ, ಕರುಮಾಣಿಕ್ಕತ್ತೈ-ನೀಲಮಣಿವರ್ಣನಾಗಿ ದರ್ಶನೀಯನಾದವನನ್ನು, ಅಮುದ್ದೈ-ಅಮೃತಸ್ವರೂಪನಾದವನನ್ನು, ನಣ್ಣಿಯುಮ್ - ಸಮೀಪಿಸಿ ಆಶ್ರಯಿಸಿಯೂ, ನಣ್ಣಕಿಲ್ಲೇನ್-(ಭೋಗಾಲಾಭದಿಂದ) ಆಶ್ರಯಿಸದೆ ಇರುವವರಂತೆಯೇ ಆದೆನು. (ಇದಕ್ಕೆ ಕಾರಣವೇನೆಂದರೆ-) ನಡುವೇ-ಜೀವಾತ್ಮ-ಪರಮಾತ್ಮರ ಮಧ್ಯೇ, ಓರ್ ಉಡಮ್ಬಿಲ್ - ಒಂದು ಶರೀರದಲ್ಲಿ, ಇಟ್ಟು-ನನ್ನನ್ನು ಇಟ್ಟು, ಪಲಶೆಯ್ವಿನ್ವೈ-ಅನೇಕವಿಧವಾಗಿ ಮಾಡಲ್ಪಟ್ಟ ಕರ್ಮಗಳೆಂಬ, ವನ್ಕಯಿಱ್ಱಾಲ್-ಮಹಾ ಪಾಶಗಳಿಂದ, ತಿಣ್ಣಮ್-ದೃಢವಾಗಿ, ಅೞುನ್ದಕಟ್ಟಿ-ತಪ್ಪಿಸಿಕೊಳ್ಳದಂತೆ ಕಟ್ಟಿ, ಪುಣ್ಣೈ ಮಱೈತ್ತು - ಆನ್ತರದೋಷವನ್ನು ಕಾಣದಂತೆ, ವರಿನ್ದು-ಸುತ್ತಲೂ ಬನ್ಧಿಸಿ-ಎನ್ನೈ-ನನ್ನನ್ನು, ಪುಱಮೇ-ಬಹ್ಯವಿಷಯದಲ್ಲೇ (ಸಂಸಾರದಲ್ಲೇ), ಪೋರ ವೈತ್ತಾಯ್ ಮಗ್ನವಾಗುವಂತೆ ಇಟ್ಟಿರುತ್ತೀಯೆ. (ನಿನಗೆ ಇಷ್ಟವಾದರೆ ನನ್ನನ್ನು ನೀನು ಈ ಬನ್ಧದಿಂದ ಬಿಡಿಸಬಹುದು—ಎಂದು ಭಾವವು)

( ಸ-ಗಾ-ರ ॥ )—

**ಕೃಷ್ಣಂ ತ್ವಾಂ ಪ್ರಭುಮಚ್ಯುತಂ ದಿವಿ ಮಹಾಸೂರೀನ್ದ್ರಸೇವ್ಯಂ ಶುಭಂ**
**ಮಾಣಿಕ್ಯಂ ಮಧುರಾಮೃತಂ ಚ ಮನಸಾ ಪ್ರಾಪ್ಯಾಪಿ ನ ಪ್ರಾಪ್ನುಯಾಮ್ ।**
**ಮಧ್ಯೇ ಮಾಮಿಹ ದೇಹಬನ್ಧಕಲಿತಂ ಕೃತ್ವಾ ಮಹಾಪಾತಕೈಃ**
**ಪಾಶೈರ್ಮಾಂ ವ್ರಣಪೀಡಿತಂ ಚ ಪರಿತಸ್ತಿಷ್ಠನ್ ಬಹಿರ್ಮಾಂ ನ್ಯಧಾಃ ॥**

ತಾ|| ಕೃಷ್ಣರೂಪಿಯಾದ ಸ್ವಾಮಿಯಾಗಿಯೂ, ದಿವ್ಯಸೂರಿ ಸಂಸೇವ್ಯನಾಗಿಯೂ, ನೀಲಮಣಿವರ್ಣನಾಗಿಯೂ ಅಮೃತಸ್ವರೂಪನಾಗಿಯೂ ಇರುವ ನಿನ್ನನ್ನು ನಾನು ಆಶ್ರಯಿಸಿದರೂ ಆಶ್ರಯಿಸಲಿಲ್ಲವೆಂದೇ ಹೇಳಬೇಕಾಗಿದೆ. ಇದಕ್ಕೆ ಕಾರಣವೇನೆಂದರೆ—ನಿನಗೂ ನನಗೂ ನಡುವೆ ಪ್ರತಿಬನ್ಧಕವಾಗಿ ಈ ನನ್ನ ಶರೀರವನ್ನು ಕಲ್ಪಿಸಿ ಇದರಲ್ಲಿ ನನ್ನನ್ನು ಇಟ್ಟು, ನಾನಾ ಕರ್ಮಪಾಶಗಳಿಂದ ದೃಢವಾಗಿ ಕಟ್ಟಿ, ಅನ್ತರದೋಷವು ತಿಳಿಯದಂತೆ ಮುಚ್ಚಿ ಇಟ್ಟು, ನನ್ನನ್ನು ಈ ಸಂಸಾರಾಮ್ಬುಧಿಯಲ್ಲೇ ಮಗ್ನನಾಗುವಂತೆ ಇಟ್ಟಿರುತ್ತೀಯೆ. (ನಿನಗೆ ಕೃಪೆಯುಂಟಾದರೆ ನನ್ನನ್ನು ಈ ಬನ್ಧದಿಂದ ಬಿಡಿಸಬಹುದು.)

(೬) ಪುಱಮಱ ಕ್ಕಟ್ಟಿಕ್ಕೊಣ್ಡಿರುವಲ್ವಿನೈಯಾರ್
ಕುಮೈಕ್ಕುಮ್,
ಮುಱ್ಱಮುಱ್ಱಾಕ್ಕೈ ಪ್ಪುಕಲೊೞಿಯ
ಕ್ಕಣ್ಡುಕೊಣ್ಡೊೞಿನ್ದೇನ್,
ನಿಱಮುಡೈ ನಾಲ್ತಡನ್ತೋಳ್ ಶೆಯ್ಯವಾಯ್
ಶೆಯ್ಯತಾಮರೈಕ್ಕಣ್,
ಅಱಮುಯಲಾೞಿಯಙ್ಗೈ ಕ್ಕರುಮೇನಿ
ಯಮ್ಮಾನ್ ತನ್ನೈಯೇ.

ಪ್ರ|| ಪುಱಮ್—ಹೊರಗೆ ಯಾವುದೂ, ಅಱ—ತಿಳಿಯದಂತೆ, ಕಟ್ಟಿಕ್ಕೊಣ್ಡು—ಬನ್ಧಿಸಿ, ಇರು – (ಪುಣ್ಯಪಾಪರೂಪವಾಗಿ) ಎರಡು ಪ್ರಕಾರವಾದ, ವಲ್ವಿನೈಯಾರ್—ಪ್ರಬಲವಾದ ಕರ್ಮಗಳುಳ್ಳವರು, ಕುಮೈಕ್ಕುಮ್- ಪೀಡಿಸುವ ಸ್ಥಲವಾದ, ಮುಱ್ಱಮುಱ್ಱ-ದೇಪಾದಿ ಜಾತಿ ಕ್ರಮವಿಶಿಷ್ಟವಾದ, ಆಕ್ಕೈ-ಶರೀರದಲ್ಲಿ, ಪುಕಲ್-ಪ್ರವೇಶವನ್ನು, ಒೞಿಯ-ತಪ್ಪಿಸುವಂತೆ, ನಿಱಮ್ – ದರ್ಶನೀಯವಾದ ರೂಪವನ್ನು, ಉಡೈ-ವಡೆದಿರುವ, ನಾಲ್ ತಡಮ್‌ತೋಳ್ – ನಾಲ್ಕು ಸುವೃತ್ತವಾದ ಬಾಹುಗಳನ್ನೂ, ಶೆಯ್ಯವಾಯ್- ಕೆಂಪಾಗಿರುವ ಬಾಯಿಯನ್ನೂ, ಶೆಯ್ಯತಾಮರೈಕ್ಕಣ್—ಕೆಂಪಾದ ತಾವರೆಯಂತಿರುವ ಕಣ್ಣುಗಳನ್ನೂ, ಅಱಮ್ ಮುಯಲ್ ಆೞಿ-ರಕ್ಷಣ ಧರ್ಮದಲ್ಲಿ ಸಕ್ತವಾದ ಚಕ್ರವನ್ನು ಧರಿಸಿ, ಅಮ್ ಕೈ—ರಮ್ಯವಾಗಿರುವ ಹಸ್ತವನ್ನೂ (ಪಡೆದಿರುವ), ಕರುಮೇನಿ ಅಮ್ಮಾನ್ ತನ್ನೈ—ಶ್ಯಾಮಲವರ್ಣನಾದ ಸ್ವಾಮಿಯನ್ನು, ಕಣ್ಡುಕೊಣ್ಡು ಒೞಿನ್ದೇನ್—ಸಾಕ್ಷಾತ್ಕರಿಸಿ ಧನ್ಯನಾದೆನು.

( ಸ–ಗಾ–ರ || )—

ಸರ್ವತ್ರಾಪಿ ಚ ಮಾಂ ನಿಬದ್ಧ್ಯ ಹಿ ಬಹಿರ್ದ್ವನ್ದ್ವಾದಿಭಿಃ ಪಾತಕೈ-
ಸ್ಸನ್ತಪ್ತಂ ಚ ಶರೀರಸನ್ತತಿರಹೋ ! ಹನ್ತ ! ವ್ಯಥಾತ್ತಾಂ ದಶಾಮ್ |
ಅದ್ಯಾತೀತ್ಯ ಚತುರ್ಭುಜಂ ಮಣಿನಿಭಂ ಬಿಮ್ಬಾಧರಂ ತ್ವಾಂ ಹರಿಂ
ಪದ್ಮಾಕ್ಷಂ ಶುಭಚಕ್ರಪಾಣಿಮತುಲಂ ದೃಷ್ಟ್ವಾಽಸ್ಮಿ ಧನ್ಯಃ ಪುಮಾನ್ ||

ತಾ|| ಸುತ್ತಲೂ ನನ್ನನ್ನು ಬನ್ಧಿಸಿ ಪುಣ್ಯಪಾಪರೂಪ ದ್ವಿವಿಧ ಕರ್ಮವಶ್ಯರಿಂದ ಪೀಡಿಸಲ್ಪಡಲು ಆಸ್ಪದವಾದ (ದೇವಾದಿ ಜಾತಿವಿಶಿಷ್ಟವಾದ) ಈ ಶರೀರದಲ್ಲಿ ಪ್ರವೇಶವನ್ನು ನನಗೆ ತಪ್ಪಿಸುವಂತೆ, ಶ್ಯಾಮಳವರ್ಣನಾದ ನಿನ್ನ ದಿವ್ಯರೂಪ ವನ್ನೂ, ಚತುರ್ಭುಜಗಳನ್ನೂ, ಬಿಮ್ಬಾಧರವನ್ನೂ, ಲೋಚನಪದ್ಮಗಳನ್ನೂ, ರಕ್ಷಣೋದ್ಯುಕ್ತವಾದ ಚಕ್ರವನ್ನು ಧರಿಸಿರುವ ಹಸ್ತವನ್ನೂ ನೋಡಿ ನಾನು ಧನ್ಯ ನಾದೆನು (ನನಗೆ ಇನ್ನುಮೇಲೆ ಶರೀರ ಸಮ್ಬನ್ಧವು ಇಲ್ಲವೆಂದು ತೋರುವಂತೆ ನಿನ್ನ ವಿಗ್ರಹ ಸೌನ್ದರ್ಯವನ್ನು ನಾನು ಅನುಭವಿಸಿ ಕೃತಾರ್ಥನಾದೆನು—ಎಂದು ಭಾವವು.)

(೭) ಅವ್ವಾನಾೞಿಪ್ಪಿರಾನವನೆಙ್ಙಡತ್ತಾನ್ ಯಾನಾರ್,
ಎಮ್ಮಾ ಪಾವಿಯರ್ಕ್ಕುಮ್ ವಿದಿವಾಯ್ಕ್ಕಿನ್ಱು
ವಾಯ್ಕ್ಕುಮ್ಕಣ್ಡೀರ್,
ಕೈಮ್ಮಾ ತುನ್ಬೊೞಿತ್ತಾಯೆನ್ಱು ಕೈತಲೈಪೂಶಲಿಟ್ಟೇ,
ಮೆಯ್ಮ್ಮಾಲಾಯೊೞಿನ್ದೇನೆಮ್ಬಿರಾನುಮೆನ್ಮೇಲಾನೇ.

ಪ್ರ|| ಆೞಿ–ಚಕ್ರಹಸ್ತನಾದ, ಪಿರಾನ್–ಮಹೋಪಕಾರಕನಾದ, ಅಮ್ಮಾನ್–ಸ್ವಾಮಿಯಾದ, ಅವನ್–ಅವನು, ಎಙ್ಙಡತ್ತಾನ್–ಎಲ್ಲಿಯವನು ?, ಯಾನ್–ನಾನು, ಆರ್–ಎಷ್ಟರವನು ? ಕೈಮ್ಮಾ–ಗಜೇನ್ದ್ರನ, ತುನ್ಬು–ಕ್ಲೇಶವನ್ನು, ಒೞಿತ್ತಾಯ್–ನಾಶಪಡಿಸಿದವನೇ !, ಎನ್ಱು–ಎಂದು, ಕೈ–ಹಸ್ತವು, ತಲೈ–ತಲೆಯಲ್ಲಿರುವಂತೆ, ಪೂಶಲಿಟ್ಟೇ–ಉದ್ಘೋಷಿಸಿಯೇ, ಮೆಯ್ಮ್ಮಾಲ್–ಪಾರಮಾರ್ಥಿಕಪ್ರೇಮವುಳ್ಳವನಾಗಿ, ಆಯೊೞಿನ್ದೇನ್–ಆಗಿಬಿಟ್ಟೆನು. ಎಮ್ಪಿರಾನ್–ನನ್ನ (ಮಹೋಪಕಾರಕ) ಸ್ವಾಮಿಯೂ, ಎನ್ಮೇಲಾನ್–ನನ್ನಮೇಲೆ ಆಶೆಯುಳ್ಳವನಾದನು. (ಆದುದರಿಂದ) ಎ–ಮಾ–ಪಾವಿಯರ್ಕ್ಕುಮ್ – ಎಷ್ಟು ಮಹಾಪಾಪಗಳನ್ನು ಮಾಡಿದವರಿಗೂ, ವಿದಿ–ಭಗವತ್ಕೃಪಾರೂಪವಾದ ವಿಧಿಯು, ವಾಯ್ಕ್ಕಿನ್ಱು–ಫಲಿಸುವ ಕಾಲದಲ್ಲಿ, ವಾಯ್ಕ್ಕುಮ್ ಕಣ್ಡೀರ್– ಫಲಿಸಿಯೇ ಫಲಿಸುವುದು, ಕಾಣಿರಿ.

ಶ್ರೀಃ

ಶ್ರೀ ಕಲ್ಕಿಸಿಂಹ ಭಗವತ್ಪ್ರಬನ್ಧಮಾಲಾ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

ಎಂಬ

## ಸಹಸ್ರಗಾಥಾತ್ಮಕ - ದ್ರಾವಿಡ ದಿವ್ಯಪ್ರಬನ್ಧ



ಶ್ರೀ ಕಲ್ಕಿಸಿಂಹಭಗವದ್ವಿರಚಿತವಾದ—(೧) ಕನ್ನಡಪ್ರತಿಪದಾರ್ಥ

(೨) ಸಂಸ್ಕೃತಪದ್ಯಾತ್ಮಕ—ಸಹಸ್ರಗಾಥಾರತ್ನಾವಳೀ

(೩) ಕನ್ನಡತಾತ್ಪರ್ಯ—ಸಮೇತ

(ದ್ರಮಿಡೋಪನಿಷತ್ಸಂಗತಿ-ದ್ರಮಿಡೋಪನಿಷತ್ತಾತ್ಪರ್ಯರತ್ನಾವಳೀ-ಸಹಿತ)



೫ನೆಯ ಸಂಚಿಕೆ

## ಪಞ್ಚಮ ಶತಕ

(ಸವ್ಯಾಖ್ಯಾನ)

ಬೆಂಗಳೂರು

ವೆ ಬಿ ಸುಬ್ಬಯ್ಯ ಅಂಡ್ ಸನ್ಸ್ ಯವರ

ಎಲೆಕ್ಟ್ರಿಕ್ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು

೧೦ ಸಂಚಿಕೆಗಳುಳ್ಳ
ಸಮಗ್ರ–ಪ್ರಬನ್ಧದ ಕ್ರಯ
ರೂ **6-0-0**

1931



ಈ ಸಂಚಿಕೆಯ ಬೆಲೆ
**12** ಆಣೆ

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ಶಠಕೋಪಾಯ ನಮಃ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

## (ಪಞ್ಚಮ ಶತಕ)

ಶ್ರೀ ಕಲ್ಕಿಸಿಂಹ ಭಗವದ್ವಿರಚಿತ—ವ್ಯಾಖ್ಯಾನಸಹಿತ.

ಶ್ರೀಮಾನ್ ಜಯತಿ ಕಲ್ಕೀನ್ದ್ರೋ ನಾರಸಿಂಹಃ ಪರಾತ್ಪರಃ ।
ಪರಿತ್ರಾಣಾಯ ಸಾಧೂನಾಂ ಕೃತಾವತರಣೋ ಹರಿಃ ॥

## ಪಞ್ಚಮಶತಕದಲ್ಲಿ—ಪ್ರಥಮದಶಕ.

(ಕೈಯಾರ್‌ಶಕ್ಕರತ್ತು—)

(ಈ ದಶಕದಲ್ಲಿ—ಕೃಪಾನಿಧಿಯಾದ ಭಗವನ್ತನ ಅನುಭವಪ್ರಕಾರವು ವರ್ಣಿಸಲ್ಪಡುತ್ತದೆ.)

(೧) ಕೈಯಾರ್ ಶಕ್ಕರತ್ತೆನ್ ಕರುಮಾಣಿಕ್ಕಮೇ ಯೆನ್ಱೆನ್ಱು,
ಪೊಯ್ಯೇ ಕೈಮ್ಮೈಶೊಲ್ಲಿ ಪ್ಪುಱಮೇ ಪುಱಮೇ ಯಾಡಿ,
ಮೆಯ್ಯೇ ಪೆಱ್ಱೊೞಿನ್ದೇನ್ ವಿಧಿವಾಯ್‌ಕ್ಕಿನ್ಱು ಕಾಪ್ಪಾರಾರ್,
ಐಯೋ, ಕಣ್ಣಪಿರಾನ್ ಅಱೈಯೋ ಇನಿಪ್ಪೋನಾಲೇ.

ಪ್ರ|| ಕೈ-ಹಸ್ತದೊಡನೆ, ಆರ್-ಸೇರಿ ಪ್ರಕಾಶಿಸುವ, ಶಕ್ಕರಮ್-ಚಕ್ರವನ್ನು ಧರಿಸಿರುವ, ಎೞ ಕರುಮಾಣಿಕ್ಕಮೇ-ನನ್ನ ನೀಲಮಣಿವರ್ಣನೇ, ಎನ್ಱೆನ್ಱು-ಎಂದು ಹೇಳಿ ಹೇಳಿ (ನಟಿಸುತ್ತ), ಪೊಯ್ಯೇ-ಮಿಥ್ಯಾಭೂತವಾದ ಪ್ರೀತಿಯನ್ನು ತೋರಿಸುವಂತೆ, ಕೈಮ್ಮೈಶೊಲ್ಲಿ-ಕೃತ್ರಿಮವಚನಗಳನ್ನು ಹೇಳಿ, ಪುಱಮೇ ಪುಱಮೇ-ಬಾಹ್ಯವಿಷಯಗಳಲ್ಲಿ ಒಂದರಮೇಲೆ ಒಂದನ್ನು ಆಶ್ರಯಿಸಿ, ಆಡಿ-ಸರ್ವದಾ ಸಂಚರಿಸುತ್ತಿದ್ದು, ಮೆಯ್ಯೇ-ಪಾರಮಾರ್ಥಿಕ ಪ್ರೇಮಯುಕ್ತರು ಹೊಂದುವ ಸತ್ಫಲವನ್ನೇ, ಪೆಱ್ಱೊೞಿನ್ದೇನ್-ಹೊಂದಿದೆನು. ವಿಧಿ-ಅಪರಿಹಾರ್ಯವಾದ ನಿನ್ನ ಕೃಪೆಯು, ವಾಯ್ಕ್ಕಿನ್ಱು-ಈಪ್ರಕಾರ ಫಲಿಸುತ್ತಿರುವುದನ್ನು, ಆರ್-ಯಾರು, ಕಾಪ್ಪಾರ್-ತಡೆದು ಅಡ್ಡಿಮಾಡುವರು? ಕಣ್ಣಾ-ಸರ್ವಸುಲಭನಾದ ಶ್ರೀಕೃಷ್ಣರೂಪಿಯಾದ, ಪಿರಾನ್-ನನ್ನ ಸ್ವಾಮಿಯಾದ ನೀನು, ಇನಿ-ಇನ್ನುಮೇಲೆ (ಹೀಗೆ ನಿನ್ನ ಕೃಪೆಯು ನನ್ನಲ್ಲಿ ಫಲಿಸಿದಮೇಲೆ), ಪೋನಾಲೇ-ಬಿಟ್ಟು ಹೋಗಬಲ್ಲೆಯೋ? ಐಯೋ-ಅಯ್ಯೋ!, ಅಪ್ಪ್ಯಯೋ-ಹೋಗುವುದಕ್ಕೆ ಸಾಧ್ಯವಾದರೆ ಹೋಗು-ನೋಡೋಣ (ನೀನು ಹೋಗಲಾರೆಯೆಂದು ಭಾವವು).

( ಸ-ಗಾ-ರ || )—

ಹಸ್ತೇನೋದ್ಧೃತಚಕ್ರ ! ನೀಲಮಣಿವರ್ಣೇತ್ಯೇವ ಮಿಥ್ಯೋಕ್ತಿಭಿ-<br>ಸ್ಸ್ತುತ್ವಾ ತ್ವಾಮಹಮಸ್ಮಿ ಬಾಹ್ಯವಿಷಯೇಷ್ವೇವಾತ್ರ ಸಕ್ತಸ್ಸದಾ |<br>ಏವಂ ಕೃತ್ರಿಮಬುದ್ಧಿರಪ್ಯಹಹ ! ಸಮ್ಪ್ರಾಪ್ತೋಽಸ್ಮಿ ಸತ್ಯಂ ಫಲಂ !<br>ಭಾಗ್ಯಂ ವಾರಯಿತುಂ ಪ್ರಭುಃ ಕ ಇಹ? ಕಿಂ ಕೃಷ್ಣಾಸಿ ಗನ್ತುಂ ಪ್ರಭುಃ? ||

ತಾ|| ("ನಾನು ಕೃತ್ರಿಮೋಕ್ತಿಯಿಂದ ನಿನ್ನಲ್ಲಿ ಪ್ರೀತಿಯನ್ನು ನಟಿಸಿದರೂ ನೀನು ಕೃಪಾಪರವಶನಾಗಿ ಸತ್ಯವಾದ ಫಲವನ್ನೇ ಕೊಟ್ಟು ಇರುತ್ತೀಯೆ. ಇದು ವಿಧಿಪ್ರಾಪ್ತವಾದುದು ಇನ್ನುಮೇಲೆ ಹೇಗೆ ನನ್ನನ್ನು ನೀನು ಬಿಟ್ಟುಹೋಗುವಿ?" — ಎಂದು ಶ್ರೀ ಶಠಾರಿಮುನಿವರ್ಯರು ಶ್ರೀ ಕೃಷ್ಣರೂಪಿಯಾದ ಭಗವನ್ತನನ್ನು ಕುರಿತು ಹೇಳುತ್ತಾರೆ) "ಶ್ರೀಚಕ್ರಪಾಣಿಯಾಗಿಯೂ, ನೀಲಮಣಿವರ್ಣನಾಗಿಯೂ ಇರುವ ನನ್ನ ಸ್ವಾಮಿಯೇ!"—ಎಂದು ಕೃತ್ರಿಮೋಕ್ತಿಗಳಿಂದ ಮಿಥ್ಯಾಭೂತವಾದ ಪ್ರೀತಿಯನ್ನೇ ನಾನು ನಿನ್ನಲ್ಲಿ ತೋರಿಸುತ್ತ, ಬಾಹ್ಯವಿಷಯಗಳಲ್ಲೇ ಅನವರತ ಸಕ್ತನಾಗಿದ್ದರೂ, ನಿನ್ನಲ್ಲಿ ಸತ್ಯವಾದ ಪ್ರೀತಿಯುಳ್ಳವರು ಹೊಂದುವ ಉತ್ತಮ ಫಲವನ್ನೇ ನಾನು ಹೊಂದಿದೆನು ನಿನ್ನ ಕೃಪೆಯು ಅಪರಿಹಾರ್ಯವಾಗಿ (ವಿಧಿರೂಪವಾಗಿ) ಹೀಗೆ ಫಲಿಸುತ್ತಿರುವುದನ್ನು ಯಾರು ತಡೆಯಬಲ್ಲರು? ಸರ್ವಸುಲಭನಾದ

ಶ್ರೀಕೃಷ್ಣನೇ! ಇನ್ನುಮೇಲೆ ನೀನು ನನ್ನನ್ನು ಹೇಗೆ ಬಿಟ್ಟು ಹೋಗಬಲ್ಲೆ? ನೋಡು. (ಎನ್ನುತ್ತಾರೆ.)

(೨) ಪೋ'ನಾಯ್ ಮಾಮರುದಿನ್ನಡುವೇ ಯೆನ್ ಪೊಲ್ಲಾ
ಮಣಿಯೇ,

ತೇನೇ ಯಿನ್ನಮುದೇ ಯೆನ್ನೆನ್ನೇ ಶಿಲಕೂತ್ತು ಚೊಲ್ಲ,
ತಾನೇಲೆಮ್ಬೆರುಮಾನವನೆನ್ನಾಕಿ ಯೊಳಿನ್ದಾನ್,
ವಾನೇ ಮಾನಿಲಮೇ ಮಱ್ಱು ಮುಱ್ಱುಮೆನ್ನುಳ್ಳನವೇ.

ಪ್ರ|| ಮಾ – ಮಹಾಕಾಯಗಳೊಡನೆ ಅಸುರಾವಿಷ್ಟವಾದ, ಮರುದಿನ್ – ಯಮುಳವೃಕ್ಷಗಳ, ನಡುವೇ–ಮಧ್ಯದಲ್ಲಿ, ಪೋನಾಯ್–ಹೋದವನೇ!, ಪೊಲ್ಲಾ –ಅತ್ಯುಜ್ಜ್ವಲವಾದ, ಎನ್ಮಣಿಯೇ–ನನ್ನ ರತ್ನವೇ!, ತೇನೇ-ಜೇನುತುಪ್ಪದಂತೆ ಮಧುರ ರಸಮಯನೇ, ಇನ್ ಅಮುದೇ–ಭೋಗ್ಯವಾದ ಅಮೃತದಂತೆ ಉಜ್ಜೀವನ ರೂಪಿಯಾದವನೇ, ಎನ್ನೆನ್ನೇ–ಎಂದು ಒಂದೊಂದಾಗಿ, ಶಿಲಕೂಱ್ಱು–ಕೆಲವು ನಟನೋಕ್ತಿರೂಪವಾದ ಮಾತುಗಳನ್ನು, ಶೊಲ್ಲ–ಹೇಳಲು, ಎಮ್ ಪೆರುಮಾನ್–ನನ್ನ ಸ್ವಾಮಿಯಾದ, ಅವನ್–ಅವನು, ತಾನೇಲ್–ತಾನು ಮಾಡಿದಹಾಗೆಯೇ ಯಥಾರ್ಥವೆಂದು ಭಾವಿಸಿ, ಎನ್–ನನ್ನ ಅಭಿಮಾನದೊಳಗೆ, ಆಕಿಯೊಳಿನ್ದಾನ್–ಅನ್ತರ್ಭೂತನಾಗಿ ಬಿಟ್ಟನು. ವಾನೇ–ಆಕಾಶವೂ, ಮಾನಿಲಮೇ–ಮಹಾಪೃಥಿವಿಯಾದ ಲೀಲಾವಿಭೂತಿಯೂ, ಮಱ್ಱುಮ್–ಮತ್ತು ನಿತ್ಯವಿಭೂತಿಯೂ, ಮುಱ್ಱುಮ್–ಎಲ್ಲವೂ, ಎನ್ ಉಳ್ಳನ–ನನ್ನೊಳಗೆ ಸೇರಿರುವಂತೆ ಆಗಿವೆ.

( ಸ–ಗಾ–ರ || )—

ಹೇ! ಯುಗ್ಮಾರ್ಜುನಮಧ್ಯಗ! ಪ್ರಿಯಮಣೇ! ಮೇ ದಿವ್ಯಮಧ್ವಾತ್ಮಕ!
ಶ್ರೀನಾಥಾಮೃತರೂಪಭಾಗಿತಿ ಬಹುಪ್ರೇಮೋಕ್ತಿಭಿಸ್ತ್ವಂ ಸ್ತುವನ್ |
ಮಿಥ್ಯಾಽಹಂ ನಟನೈಶ್ಚ ಹನ್ತ! ಫಲಭಾಙ್ಮಯ್ಯೇವ ನಾಥೋ ಮಮ
ಸ್ವೈರಂ ಭಾತಿ ಧರಾದ್ಯುಲೋಕಪರಮವ್ಯೋಮಾದಿಭಿಶ್ಚಾಖಿಲೈಃ ||

ತಾ|| "ಎಲೈ! ಯಮುಳಾರ್ಜುನವೃಕ್ಷಗಳ ನಡುವೆ ಹೋಗಿ ಅವುಗಳನ್ನು ಮುರಿದವನೇ! ಅತ್ಯುಜ್ಜ್ವಲವಾದ ನನ್ನ ಪ್ರಿಯರತ್ನವೇ! ಮಧುವಿನಂತೆ ನನಗೆ ಮಧುರತಮನೇ! ಅಮೃತದಂತೆ ನನಗೆ ಸಂಜೀವನಭೂತನೇ!"—ಎಂದು ನಾನಾಪ್ರಕಾರಗಳಿಂದ ಕೆಲವು ನಟನೋಕ್ತಿಗಳನ್ನು ನಾನು ಹೇಳಲು, ನನ್ನ ಸ್ವಾಮಿಯಾದ ಅವನು

ಆ ಉಕ್ತಿಗಳನ್ನು ಯಥಾರ್ಥವೆಂದು ಭಾವಿಸಿ, ನನ್ನ ಅಭಿಮಾನದೊಳಗೆಯೇ ತಾನು ತನ್ನ ಲೀಲಾವಿಭೂತಿ-ನಿತ್ಯವಿಭೂತ್ಯಾದಿ ಪರಿವಾರಸಹಿತನಾಗಿ ಸೇರಿಕೊಂಡು ನನಗೆ ಅನುಭಾವ್ಯನಾಗಿರುತ್ತಾನೆ.

(೩) ಉಳ್ಳನ ಮಱ್ಱುಳವಾ ಪ್ಪುಱಮೇ, ಶಿಲಮಾಯಂ ಶೊಲ್ಲಿ,
ವಳ್ಳಲ್ ಮಣಿವಣ್ಣನೇ ಯೆನ್ಱೆನ್ಱೇ ಯುನ್ನೈಯುಂ ವಞ್ಚಿಕ್ಕುಮ್,
ಕಳ್ಳಮನಮ್ ತವಿರ್ನ್ದೇ ಯುನ್ನೈ ಕ್ಕಣ್ಡುಕೊಣ್ಡುಯ್ನ್ದೊಳಿನ್ದೇನ್,
ವೆಳ್ಳತ್ತಣೈಕ್ಕಿಡನ್ದಾಯಿನಿಯುನ್ನೈ ವಿಟ್ಟೆನ್ಕೊಳ್ವನೇ.

ಪ್ರ॥ ಉಳ್ಳನ-ಅನ್ತರ್ಗತವಾದವುಗಳು, ಮಱ್ಱು-ನಿನ್ನನ್ನು ಹೊರತು ಮಿಕ್ಕ ಪ್ರಾಕೃತವಿಷಯಗಳಾಗಿ, ಉಳವಾ-ನಡೆಯುತ್ತಿರಲು, ಪುಱಮೇ-ಖಂಡಾದುಪರಿ ತಲದಲ್ಲಿ ಬಹಿರ್ಭೂತನಾಗಿ, ವಳ್ಳಲ್-ಉದಾರನಾಗಿರುವವನೇ, ಮಣಿವಣ್ಣನೇ-ನೀಲಮಣಿವರ್ಣನೇ, ಎನ್ಱೆನ್ಱು-ಎಂದು ಎಂದು ಅನೇಕಾವೃತ್ತಿ, ಶಿಲಮಾಯಮ್-ಕೆಲವು ಕಪಟೋಕ್ತಿಗಳನ್ನು, ಶೊಲ್ಲಿ-ಹೇಳಿ, ಉನ್ನೈಯುಮ್ - ಸರ್ವಜ್ಞನಾದ ನಿನ್ನನ್ನೂ, ವಞ್ಚಿಕ್ಕುಮ್-ವಞ್ಚಿಸುವಂತೆ, ಕಳ್ಳಮ್-ಕೃತ್ರಿಮ ಸ್ವಭಾವವುಳ್ಳ, ಮನಮ್-ಮನಸ್ಸನ್ನು, ತವಿರ್ನ್ದು-ತ್ಯಜಿಸಿ, ಉನ್ನೈ-ನಿನ್ನನ್ನು, ಕಣ್ಡುಕೊಣ್ಡು -ಸಾಕ್ಷಾತ್ಕರಿಸಿ, ಉಯ್ನ್ದೊಳಿನ್ದೇನ್ - ಉಜ್ಜೀವಿಸಿದೆನು. ವೆಳ್ಳಮ್-ಕ್ಷೀರ ಸಮುದ್ರದಲ್ಲಿ, ಅಣೈಕ್ಕಿಡನ್ದಾಯ್-ಶಯನಮಾಡಿರುವವನೇ, ಇನಿ-ನಿನ್ನ ಕೃಷಿಯು ಫಲಿಸಿದಮೇಲೆ, ಉನ್ನೈವಿಟ್ಟು-ನಿನ್ನನ್ನು ಬಿಟ್ಟು, ಎನ್ಕೊಳ್ವನ್-(ನಶ್ವರವಾದ) ಯಾವುದನ್ನು ನಾನು ಅಂಗೀಕರಿಸುವೆನು?

( ಸ-ಗಾ-ರ ॥ )—

ಕ್ಷುದ್ರೇಷ್ವೇವ ಕಿಲೇತರೇಷು ವಿಷಯೇಷ್ವಾಸೀನ್ಮತಿರ್ಮೇ ಹರೇ !
ಮಿಥ್ಯಾಽಹಂ ನಟನ್ನೈರುದಾರಮಣಿವರ್ಣೇತ್ಯೇವ ಚ ತ್ವಾಂ ಸ್ತುವನ್ ।
ಸರ್ವಜ್ಞಸ್ಯ ಚ ವಞ್ಚಕೋಽಭವಮಹೋ ! ತಾಂ ದುರ್ದಶಾಂ ಸನ್ತ್ಯಜನ್
ಧನ್ಯೋಽಹಂ ತವ ದರ್ಶನೇನ ಹಿ ಸುಧಾಮ್ಭೋಧೀಶ್ವ! ನಾನ್ಯದ್ಭಜೇ ॥

ತಾ॥ ನಾನು ಕ್ಷುದ್ರವಿಷಯಗಳಲ್ಲಿ ಸಕ್ತಚಿತ್ತನಾಗಿದ್ದರೂ ನಿನ್ನನ್ನು ಮಿಥ್ಯಾ ಸ್ತೋತ್ರಮಾಡಲುದ್ಯುಕ್ತನಾಗಿ—"ಉದಾರಸ್ವಭಾವನೇ ! ಮಣಿವರ್ಣನೇ !"—

ಎಂದು ಅನೇಕಾವೃತ್ತಿ ಕಪಟೋಕ್ತಿಗಳಂ ಹೇಳಿ ನಿನ್ನನ್ನು ವಂಚಿಸುತ್ತಿದ್ದು, ಕ್ರಮೇಣ ನನ್ನ ಕೃತ್ರಿಮ ಸ್ವಭಾವವನ್ನು ಬಿಟ್ಟು, ನಿನ್ನನ್ನು ಸಾಕ್ಷಾತ್ಕರಿಸಿ ಉಜ್ಜೀವಿಸಿದೆನು. ಕ್ಷೀರಾರ್ಣವಶಾಯಿಯಾದ ಸ್ವಾಮಿಯೇ! ಈಪ್ರಕಾರ ನಿನ್ನ ಕೃಷಿಯು ಫಲಿಸಿದಮೇಲೆ ನಾನು ನಿನ್ನನ್ನು ಬಿಟ್ಟು ಇನ್ನು ಯಾವವಸ್ತುವನ್ನು ಅಪೇಕ್ಷಿಸುವೆನು?

(೪) ಎಕ್ಕೊಳ್ವನುನ್ನೈವಿಟ್ಟೆನ್ನುಮ್, ವಾಶಕಙ್ಗಳ್
ಶೊಲ್ಲಿಯುಮ್,
ವಲ್ಕಳ್ವನೇಕ್ ಮನತ್ತೈ ವಲಿತ್ತು ಕ್ಕಣ್ಣನೀರ್ ಕರನ್ದು,
ನಿಕ್ಕಣ್ ನೆರುಙ್ಗವೈತ್ತೇ ಯೆನದಾವಿಯೈ ನೀಕ್ಕಕಿಲ್ಲೇಕ್,
ಎಕ್ಕಣ್ ಮಲಿನಮರುತ್ತೆನ್ನೈ ಕ್ಕೂವಿಯರುಳಾಯ್
ಕಣ್ಣನೇ.

ಪ್ರ|| ಉನ್ನೈ–ನಿನ್ನನ್ನು, ವಿಟ್ಟು–ಬಿಟ್ಟು, ಎ–ಇನ್ನು ಯಾವ ವಸ್ತುವನ್ನು, ಕೊಳ್ವ–ನಾನು ಸ್ವೀಕರಿಸುವೆನು ?, ಎನ್ನುಮ್-ಎಂಬ, ವಾಶಕಙ್ಗಳ್–ಉಕ್ತಿಗಳನ್ನು, ಶೊಲ್ಲಿಯುಮ್–ಹೇಳಿಯೂ, ವಲ್-(ಅನಾದಿಸಿದ್ಧವಾಗಿ ಆತ್ಮಾಪಹಾರವಂ ಮಾಡಿ) ಪ್ರಬಲವಾದ ಪಾಪವುಳ್ಳ, ಕಳ್ವನೇಕ – ಕೃತ್ರಿಮಬುದ್ಧಿಯುಳ್ಳ ನಾನು, ಮನತ್ತೈ–ನನ್ನ ಮನಸ್ಸನ್ನು, ವಲಿತ್ತು–ಚೆನ್ನಾಗಿ ವಶೀಕರಿಸಿ, ಕಣ್ಣನೀರ್–ಕಣ್ಣನೀರನ್ನು, ಕರನ್ದು–(ವಿಷಯ ವಾಸನಾವೃತ್ತಿಯಿಂದ) ಬದಲಾಯಿಸಿ, ಮನತ್ತೈ–ಆ ನನ್ನ ಮನಸ್ಸನ್ನು, ನಿಕ್ಕಣ್–ನಿನ್ನ ಮೇಲೆಯೇ, ನೆರುಙ್ಗವೈತ್ತು–ಸ್ಥಿರವಾಗಿ ನಿಲ್ಲಿಸಿ, ಎನದು ಆವಿಯೈ–ನನ್ನ ಆತ್ಮತತ್ವವನ್ನು, ನೀಕ್ಕಕಿಲ್ಲೇಕ–(ಸಂಸಾರಬನ್ಧದಿಂದ) ನಿವೃತ್ತವಾಗುವಂತೆ ಮಾಡುವುದಿಲ್ಲ. (ಇದಕ್ಕೆ ಕಾರಣಭೂತವಾದ) ಎಕ್ಕಣ್ ಮಲಿನಮ್–ನನ್ನ ಅವಿದ್ಯಾದಿ ದೋಷವನ್ನು, ಅಱುತ್ತು – ಛೇದಿಸಿ, ಎನ್ನೈ – ಅಶಕ್ತನಾದ ನನ್ನನ್ನು, ಕಣ್ಣನೇ – (ಶೋಕಾಕ್ರಾನ್ತರಾದವರನ್ನು– "ಮಾಶುಚಃ" ಎಂದು ಸಮಾಧಾನಪಡಿಸುವ) ಕೃಷ್ಣನೇ !, ಕೂವಿಯರುಳಾಯ್–(ನಿನ್ನ ಬಳಿಗೆ) ಕರೆದುಕೋ.

( ಸ–ಗಾ–ರ || )—

ಕಿಂ ಕಾಂಕ್ಷೇಽದ್ಯ ವಿನಾ ಭವನ್ತಮಿತಿ ಚ ಸ್ತೋತ್ರಂ ಮೃಷಾ ತೇ ಸ್ವಯಂ
ಕುರ್ವಕ ವಞ್ಚಕ ಆಸಮುದ್ಯ ಮನಸಿ ಸ್ಥೈರ್ಯೇಣ ಚಾಶ್ರುಸ್ರವೈಃ |
ನಾತ್ಮಾನಂ ಹಿ ನಿವಾರಯಾಮಿ ವಿಷಯಾನ್ಮದ್ದುಷ್ಟಿಮಾಲಿನ್ಯಹಾ
ತ್ವಂ ಮಾಮಾಹ್ವಯ ಕೃಷ್ಣ ! ನಾನ್ಯಶರಣೋಽಸ್ಮೀತ್ಯೇವ ಸತ್ಯಂ ಬ್ರುವೇ||

ತಾ|| “ನಿನ್ನನ್ನು ಬಿಟ್ಟು ನಾನು ಇನ್ನು ಯಾವ ವಸ್ತುವನ್ನು ಅಪೇಕ್ಷಿಸುವೆನು ? ”—ಎಂಬ ಉಕ್ತಿಗಳನ್ನು ಹೇಳಿಯೂ, ಮಹಾ ಕೃತ್ರಿಮಬುದ್ಧಿಯುಳ್ಳ ನಾನು ನನ್ನ ಮನಸ್ಸನ್ನು ವಶೀಕರಿಸಿ, ಕಣ್ಣೀರನ್ನು ಸದ್ವಿಷಯದಲ್ಲಿ ಸುರಿದು, ನಿನ್ನಲ್ಲೇ ನನ್ನ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿ, ನನ್ನ ಆತ್ಮೋಜ್ಜೀವನವನ್ನು ಪಡೆಯುವುದಿಲ್ಲ. ಇದಕ್ಕೆ ಕಾರಣಭೂತವಾದ ನನ್ನ ಅವಿದ್ಯಾದಿ ದೋಷವನ್ನು ನೀನೇ ಛೇದಿಸಿ, ಎಲೈ ಶ್ರೀಕೃಷ್ಣನೇ ! ನನ್ನನ್ನು ನಿನ್ನ ಬಳಿಗೆ ಕರೆದುಕೋ.

(೫) ಕಣ್ಣಪಿರಾನೈ ವಿಣ್ಣೋರ್ ಕರುಮಾಣಿಕ್ಕತ್ತೈ ಯಮುದೈ
ನಣ್ಣಿಯುಮ್ ನಣ್ಣಗಿಲ್ಲೇನ್ ನಡುವೇಯೋರುಡಮ್ಬಿಲಿಟ್ಟು,
ತಿಣ್ಣಮ್ಮೞುನ್ದಕ್ಕಟ್ಟಿ ಪ್ಪಲಶೆಯ್ವಿನೈ ವಲ್ಕಯಿಱ್ಱಾಲ್,
ಪುಣ್ಣೈಮಱೈಯವರಿನ್ದೆನ್ನೈಪ್ಪೋರವೈತ್ತಾಯ್ ಪುಱಮೇ.

ಪ್ರ|| ಕಣ್ಣನ್–ಕೃಷ್ಣನಾಗಿ (ಅವತರಿಸಿ), ಪಿರಾನೈ–(ಮಾಮೇಕಂ ಶರಣಂ ವ್ರಜ–ಎಂದು ಹೇಳಿ) ಉಪಕರಿಸಿದ ಸ್ವಾಮಿಯನ್ನು, ವಿಣ್ಣೋರ್–ನಿತ್ಯಸೂರಿಗಳಿಗೆ, ಕರುಮಾಣಿಕ್ಕತ್ತೈ–ನೀಲಮಣಿವರ್ಣನಾಗಿ ದರ್ಶನೀಯನಾದವನನ್ನು, ಅಮುದೈ–ಅಮೃತಸ್ವರೂಪನಾದವನನ್ನು, ನಣ್ಣಿಯುಮ್ – ಸಮೀಪಿಸಿ ಆಶ್ರಯಿಸಿಯೂ, ನಣ್ಣಗಿಲ್ಲೇನ್–(ಭೋಗಾಲಾಭದಿಂದ) ಆಶ್ರಯಿಸದೆ ಇರುವವರಂತೆಯೇ ಆದೆನು. (ಇದಕ್ಕೆ ಕಾರಣವೇನೆಂದರೆ–) ನಡುವೇ–ಜೀವಾತ್ಮ–ಪರಮಾತ್ಮರ ಮಧ್ಯೇ, ಓರ್ ಉಡಮ್ಬಿಲ್ – ಒಂದು ಶರೀರದಲ್ಲಿ, ಇಟ್ಟು–ನನ್ನನ್ನು ಇಟ್ಟು, ಪಲಶೆಯ್ವಿನೈ–ಅನೇಕವಿಧವಾಗಿ ಮಾಡಲ್ಪಟ್ಟ ಕರ್ಮಗಳೆಂಬ, ವಲ್ಕಯಿಱ್ಱಾಲ್–ಮಹಾ ಪಾಶಗಳಿಂದ, ತಿಣ್ಣಮ್–ದೃಢವಾಗಿ, ಅೞುನ್ದಕಟ್ಟಿ–ತಪ್ಪಿಸಿಕೊಳ್ಳದಂತೆ ಕಟ್ಟಿ, ಪುಣ್ಣೈ ಮಱೈಯ – ಅನ್ತರದೋಷವನ್ನು ಕಾಣದಂತೆ, ವರಿನ್ದು–ಸುತ್ತಲೂ ಬನ್ಧಿಸಿ–ಎನ್ನೈ–ನನ್ನನ್ನು, ಪುಱಮೇ–ಬಹ್ಯವಿಷಯದಲ್ಲೇ (ಸಂಸಾರದಲ್ಲೇ), ಪೋರವೈತ್ತಾಯ್ ಮಗ್ನವಾಗುವಂತೆ ಇಟ್ಟಿರುತ್ತೀಯೆ. (ನಿನಗೆ ಇಷ್ಟವಾದರೆ ನನ್ನನ್ನು ನೀನು ಈ ಬನ್ಧದಿಂದ ಬಿಡಿಸಬಹುದು—ಎಂದು ಭಾವವು)

( ಸ–ಗಾ–ರ || )—

**ಕೃಷ್ಣಂ ತ್ವಾಂ ಪ್ರಭುಮಚ್ಯುತಂ ದಿವಿ ಮಹಾಸೂರೀನ್ದ್ರಸೇವ್ಯಂ ಶುಭಂ**
**ಮಾಣಿಕ್ಯಂ ಮಧುರಾಮೃತಂ ಚ ಮನಸಾ ಪ್ರಾಪ್ಯಾಪಿ ನ ಪ್ರಾಪ್ನುಯಾಮ್ |**
**ಮಧ್ಯೇ ಮಾಮಿಹ ದೇಹಬನ್ಧಕಲಿತಂ ಕೃತ್ವಾ ಮಹಾಪಾತಕೈಃ**
**ಪಾಶೈರ್ಮಾಂ ವ್ರಣಪೀಡಿತಂ ಚ ಪರಿತಸ್ತಿಷ್ಠನ್ ಬಹಿರ್ಮಾಂ ನ್ಯಧಾಃ ||**

ತಾ|| ಕೃಷ್ಣರೂಪಿಯಾದ ಸ್ವಾಮಿಯಾಗಿಯೂ, ದಿವ್ಯಸೂರಿ ಸಂಸೇವ್ಯನಾಗಿಯೂ, ನೀಲಮಣಿವರ್ಣನಾಗಿಯೂ ಅಮೃತಸ್ವರೂಪನಾಗಿಯೂ ಇರುವ ನಿನ್ನನ್ನು ನಾನು ಆಶ್ರಯಿಸಿದರೂ ಆಶ್ರಯಿಸಲಿಲ್ಲವೆಂದೇ ಹೇಳಬೇಕಾಗಿದೆ. ಇದಕ್ಕೆ ಕಾರಣವೇನೆಂದರೆ—ನಿನಗೂ ನನಗೂ ನಡುವೆ ಪ್ರತಿಬನ್ಧಕವಾಗಿ ಈ ನನ್ನ ಶರೀರವನ್ನು ಕಲ್ಪಿಸಿ ಇದರಲ್ಲಿ ನನ್ನನ್ನು ಇಟ್ಟು, ನಾನಾ ಕರ್ಮಪಾಶಗಳಿಂದ ದೃಢವಾಗಿ ಕಟ್ಟಿ, ಅನ್ತರದೋಷವು ತಿಳಿಯದಂತೆ ಮುಚ್ಚಿ ಇಟ್ಟು, ನನ್ನನ್ನು ಈ ಸಂಸಾರಾಮ್ಬುಧಿಯಲ್ಲೇ ಮಗ್ನನಾಗುವಂತೆ ಇಟ್ಟಿರುತ್ತೀಯೆ. (ನಿನಗೆ ಕೃಪೆಯುಂಟಾದರೆ ನನ್ನನ್ನು ಈ ಬನ್ಧದಿಂದ ಬಿಡಿಸಬಹುದು.)

(೬) ಪುಱಮಱಕ್ಕಟ್ಟಿಕ್ಕೊಣ್ಡಿರುವಲ್ವಿನೈಯಾರ್
ಕುಮೈಕ್ಕುಮ್,
ಮುಱೈಮುಱೈ ಯಾಕ್ಕೈ ಪ್ಪುಕಲೊೞಿಯ
ಕ್ಕಣ್ಡುಕೊಣ್ಡೊೞಿನ್ದೇನ್,
ನಿಱಮುಡೈ ನಾಲ್ತಡನ್ದೋಳ್ ಶೆಯ್ಯವಾಯ್
ಶೆಯ್ಯತಾಮರೈಕ್ಕಣ್,
ಅಱಮುಯಲಾೞಿಯಙ್ಗೈಕ್ಕರುಮೇನಿ
ಯಮ್ಮಾನ್ತನ್ನೈಯೇ.

ಪ್ರ|| ಪುಱಮ್—ಹೊರಗೆ ಯಾವುದೂ, ಅಱ—ತಿಳಿಯದಂತೆ, ಕಟ್ಟಿಕ್ಕೊಣ್ಡು—ಬನ್ಧಿಸಿ, ಇರು—(ಪುಣ್ಯಪಾಪರೂಪವಾಗಿ) ಎರಡು ಪ್ರಕಾರವಾದ, ವಲ್ವಿನೈಯಾರ್—ಪ್ರಬಲವಾದ ಕರ್ಮಗಳುಳ್ಳವರು, ಕುಮೈಕ್ಕುಮ್—ಪೀಡಿಸುವ ಸ್ಥಲವಾದ, ಮುಱೈಮುಱೈ—ದೇವಾದಿ ಜಾತಿ ಕ್ರಮವಿಶಿಷ್ಟವಾದ, ಆಕ್ಕೈ—ಶರೀರದಲ್ಲಿ, ಪುಕಲ್—ಪ್ರವೇಶವನ್ನು, ಒೞಿಯ—ತಪ್ಪಿಸುವಂತೆ, ನಿಱಮ್—ದರ್ಶನೀಯವಾದ ರೂಪವನ್ನು, ಉಡೈ—ಪಡೆದಿರುವ, ನಾಲ್ ತಡಮ್ತೋಳ್—ನಾಲ್ಕು ಸುವೃತ್ತವಾದ ಬಾಹುಗಳನ್ನೂ, ಶೆಯ್ಯವಾಯ್—ಕೆಂಪಾಗಿರುವ ಬಾಯಿಯನ್ನೂ, ಶೆಯ್ಯತಾಮರೈಕ್ಕಣ್—ಕೆಂಪಾದ ತಾವರೆಯಂತಿರುವ ಕಣ್ಣುಗಳನ್ನೂ, ಅಱಮ್ ಮುಯಲ್ ಆೞಿ—ರಕ್ಷಣ ಧರ್ಮದಲ್ಲಿ ಸಕ್ತವಾದ ಚಕ್ರವನ್ನು ಧರಿಸಿ, ಅಮ್ ಕೈ—ರಮ್ಯವಾಗಿರುವ ಹಸ್ತವನ್ನೂ (ಪಡೆದಿರುವ), ಕರುಮೇನಿ ಅಮ್ಮಾನ್ ತನ್ನೈ—ಶ್ಯಾಮಲವರ್ಣನಾದ ಸ್ವಾಮಿಯನ್ನು, ಕಣ್ಡುಕೊಣ್ಡು ಒೞಿನ್ದೇನ್—ಸಾಕ್ಷಾತ್ಕರಿಸಿ ಧನ್ಯನಾದೆನು.

( ಸ–ಗಾ–ರ || )—

ಸರ್ವತ್ರಾಪಿ ಚ ಮಾಂ ನಿಬಧ್ಯ ಹಿ ಬಹಿರ್ದ್ವನ್ದ್ವಾದಿಭಿಃ ಪಾತಕೈ-
ಸ್ಸನ್ತಪ್ತಂ ಚ ಶರೀರಸನ್ತತಿರಹೋ ! ಹನ್ತ ! ವ್ಯಥಾತ್ತಾಂ ದಶಾಮ್ |
ಅದ್ಯಾತೀತ್ಯ ಚತುರ್ಭುಜಂ ಮಣಿನಿಭಂ ಬಿಮ್ಬಾಧರಂ ತ್ವಾಂ ಹರಿಂ
ಪದ್ಮಾಕ್ಷಂ ಶುಭಚಕ್ರಪಾಣಿಮತುಲಂ ದೃಷ್ಟ್ವಾಽಸ್ಮಿ ಧನ್ಯಃ ಪುಮಾನ್ ||

ತಾ|| ಸುತ್ತಲೂ ನನ್ನನ್ನು ಬನ್ಧಿಸಿ ಪುಣ್ಯಪಾಪರೂಪ ದ್ವಿವಿಧ ಕರ್ಮವಶ್ಯರಿಂದ ಪೀಡಿಸಲ್ಪಡಲು ಆಸ್ಪದವಾದ (ದೇವಾದಿ ಜಾತಿವಿಶಿಷ್ಟವಾದ) ಈ ಶರೀರದಲ್ಲಿ ಪ್ರವೇಶವನ್ನು ನನಗೆ ತಪ್ಪಿಸುವಂತೆ, ಶ್ಯಾಮಳವರ್ಣನಾದ ನಿನ್ನ ದಿವ್ಯರೂಪವನ್ನೂ, ಚತುರ್ಭುಜಗಳನ್ನೂ, ಬಿಮ್ಬಾಧರವನ್ನೂ, ಲೋಚನಪದ್ಮಗಳನ್ನೂ, ರಕ್ಷಣೋದ್ಯುಕ್ತವಾದ ಚಕ್ರವನ್ನು ಧರಿಸಿರುವ ಹಸ್ತವನ್ನೂ ನೋಡಿ ನಾನು ಧನ್ಯನಾದೆನು (ನನಗೆ ಇನ್ನುಮೇಲೆ ಶರೀರ ಸಮ್ಬನ್ಧವು ಇಲ್ಲವೆಂದು ತೋರುವಂತೆ ನಿನ್ನ ವಿಗ್ರಹ ಸೌನ್ದರ್ಯವನ್ನು ನಾನು ಅನುಭವಿಸಿ ಕೃತಾರ್ಥನಾದೆನು— ಎಂದು ಭಾವವು.)

(೭) ಅಮ್ಮಾನಾ಴ಿಪ್ಪಿರಾನವನೆವ್ವಿಡತ್ತಾನ್ ಯಾನಾರ್,
ಎಮ್ಮಾ ಪಾವಿಯರ್ಕ್ಕುಮ್ ವಿದಿವಾಯ್ಕ್ಕಿನ್ರು
ವಾಯ್ಕ್ಕುಮ್ ಕಣ್ಡೀರ್,
ಕೈಮ್ಮಾ ತುನ್ಬೊೞಿತ್ತಾಯೆನ್ರು ಕೈತಲೈಪೂಶಲಿಟ್ಟೇ,
ಮೆಯ್ಮ್ಮಾಲಾಯೊೞಿನ್ದೇನೆಮ್ಬಿರಾನುಮೆನ್ಮೇಲಾನೇ.

ಪ್ರ|| ಆೞಿ–ಚಕ್ರಹಸ್ತನಾದ, ಪಿರಾನ್–ಮಹೋಪಕಾರಕನಾದ, ಅಮ್ಮಾನ್–ಸ್ವಾಮಿಯಾದ, ಅವನ್–ಅವನು, ಎವ್ವಿಡತ್ತಾನ್–ಎಲ್ಲಿಯವನು ?, ಯಾನ್–ನಾನು, ಆರ್–ಎಷ್ಟರವನು ? ಕೈಮ್ಮಾ–ಗಜೇನ್ದ್ರನ, ತುನ್ಬು–ಕ್ಲೇಶವನ್ನು, ಒೞಿತ್ತಾಯ್–ನಾಶಪಡಿಸಿದವನೇ !, ಎನ್ರು–ಎಂದು, ಕೈ–ಹಸ್ತವು, ತಲೈ–ತಲೆಯಲ್ಲಿರುವಂತೆ, ಪೂಶಲಿಟ್ಟೇ–ಉದ್ಘೋಷಿಸಿಯೇ, ಮೆಯ್ಮ್ಮಾಲ್–ಪಾರಮಾರ್ಥಿಕಪ್ರೇಮವುಳ್ಳವನಾಗಿ, ಆಯೊೞಿನ್ದೇನ್–ಆಗಿಬಿಟ್ಟೆನು. ಎಮ್ಪಿರಾನ್–ನನ್ನ (ಮಹೋಪಕಾರಕ) ಸ್ವಾಮಿಯೂ, ಎನ್ಮೇಲಾನ್–ನನ್ನಮೇಲೆ ಆಶೆಯುಳ್ಳವನಾದನು. (ಆದುದರಿಂದ) ಎ–ಮಾ–ಪಾವಿಯರ್ಕ್ಕುಮ್ – ಎಷ್ಟು ಮಹಾಪಾಪಗಳನ್ನು ಮಾಡಿದವರಿಗೂ, ವಿದಿ–ಭಗವತ್ಕೃಪಾರೂಪವಾದ ವಿಧಿಯು, ವಾಯ್ಕ್ಕಿನ್ರು–ಫಲಿಸುವ ಕಾಲದಲ್ಲಿ, ವಾಯ್ಕ್ಕುಮ್ ಕಣ್ಡೀರ್– ಫಲಿಸಿಯೇ ಫಲಿಸುವುದು, ಕಾಣಿರಿ.

( ಸ-ಗಾ-ರ || )—

ಚಕ್ರೀ ಸ ಪ್ರಭುರಿನ್ದಿರಾಪತಿರಹೋ ! ಶೂರೀನ್ದ್ರನಾಥಃ ಕ್ವವಾ ?
ಕ್ವಾಹಂ ? ಹಸ್ತಿಮಹಾರ್ತಿನಾಶನಕರೇತ್ಯೇವಂ ಕಿಲೋದ್ಘೋಷಯನ್ |
ತದ್ಭಕ್ತಿಂ ಪರಮಾಂ ಗತೋಽಸ್ಮಿ ಸುದೃಢಾಂ ಸತ್ಯಾಂ ಸ ನಾಥೋ ಮಯಿ
ಪ್ರೀತಶ್ಚಾಸ್ತಿ ! ವಿಧೇರನುಗ್ರಹಬಲಾತ್ ಸ್ಯಾತ್ಸದ್ಗತಿಶ್ಚಾಘಿನಾಮ್ ||

ತಾ|| ಚಕ್ರಹಸ್ತನಾದ ಸ್ವಾಮಿಯು ಎಷ್ಟು ಮಹತ್ತಮನಾದವನು ? ನಾನು ಎಷ್ಟು ನಿಕೃಷ್ಟನಾದವನು ? (ನಮ್ಮಿಬ್ಬರಿಗೂ ಎಷ್ಟು ತಾರತಮ್ಯವಿದೆ ?) "ಗಜೇನ್ದ್ರನ ಕ್ಲೇಶನಾಶಕನೆ !"—ಎಂದು ಉದ್ಘೋಷಿಸಿ ಮೊರೆಯಿಟ್ಟು (ವೃಥಾ ನಟನದಿಂದಲೂ ಕೂಡ) ನಾನು ಅವನಲ್ಲಿ ಸತ್ಯವಾದ ಪ್ರೀತಿಯುಳ್ಳವನಾದೆನು ನನ್ನ ಸ್ವಾಮಿಯೂ ಕೂಡ ನನ್ನಲ್ಲಿ ಪ್ರೀತಿಯುಕ್ತನಾದನು ಆದುದರಿಂದ ಎಷ್ಟು ಮಹಾಪಾಪಗಳನ್ನು ಮಾಡಿದವರಿಗೂ ಕೂಡ ಭಗವತ್ಕೃಪೆಯು ಫಲಿಸುವಾಗ, ಯಾವ ಅಡ್ಡಿಯೂ ಇಲ್ಲದೆ ಫಲಿಸಿಯೇ ಫಲಿಸುವುದು—ಇದು ಸತ್ಯ

(೮) ಮೇಲಾತ್ತೇವರ್ಕಳುಮ್ ನಿಲತ್ತೇವರುಮ್ ಮೇವಿ
ತ್ತೊೞುಮ್,
ಮಾಲ್ ಆರ್ ವನ್ದಿನನಾಳಡಿಯೇನ್ ಮನತ್ತೇ ಮನ್ನಿನಾರ್,
ಶೇಲೇಯ್ ಕಣ್ಣಿಯರುಮ್ ಪೆರುಂಶೆಲ್ವಮುಮ್
ನನ್ಮಕ್ಕಳುಮ್,
ಮೇಲಾತಾಯ್ ತನ್ದೈಯುಮವರೇ ಯಿನಿ ಯಾವಾರೇ.

ಪ್ರ|| ಮೇಲಾಮ್-ಸರ್ವೋತ್ಕೃಷ್ಟರಾದ, ತೇವರ್ಕಳುಮ್-ನಿತ್ಯಸೂರಿಗಳೂ, ನಿಲಮ್-ಈ ಭೂಲೋಕದಲ್ಲಿರುವ, ತೇವರುಮ್-ಭಾಗವತರೂ, ಮೇವಿ-ಏಕೀಭವಿಸಿ (ಸೇರಿ), ತೊೞುಮ್-ಅನುಭವಿಸುವಂತಹ, ಮಾಲಾರ್-ಸರ್ವಾಧಿಕನಾದ ಸರ್ವೇಶ್ವರನು, ಇನಸಾಳ್-ಈಗ, ವನ್ದು-ಬಂದು, ಅಡಿಯೇನ್-ದಾಸಭೂತನಾದ ನನ್ನ, ಮನತ್ತೇ-ಮನಸ್ಸಿನಲ್ಲಿ, ಮನ್ನಿನಾರ್-ಸುಪ್ರತಿಷ್ಠಿತನಾದನು. ಇನಿ-ಇನ್ನು ಮೇಲೆ, ಶೇಲೇಯ್‌ಕಣ್ಣಿಯರುಮ್-ರಮಣೀಯನೇತ್ರರಾದ ಸ್ತ್ರೀಗಳೂ, ಪೆರುಮ್ ಶೆಲ್ವಮುಮ್-ಮಹಾಸಮ್ಪತ್ತೂ, ನಲ್ ಮಕ್ಕಳುಮ್-ಶ್ಲಾಘ್ಯರಾದ ಪುತ್ರರೂ, ಮೇಲಾಮ್-ಪ್ರಿಯಹಿತಪರರಾಗಿ ಮಹೋನ್ನತರಾದ, ತಾಯ್‌ತನ್ದೈಯುಮ್-ಮಾತಾಪಿತೃಗಳೂ, ಅವರೇ-ಆ ಸರ್ವೇಶ್ವರನೇ, ಆವಾರೇ-ಆಗಿ ನಿಲ್ಲುವನಷ್ಟೆ. !

( ಸ-ಗಾ-ರ || )—

**ದಿವ್ಯಾಸ್ಸೂರಿಗಣಾಶ್ಚ ಭಕ್ತನಿವಹಾ ಭೂಮ್ಯಾಂ ಯಮೇವಾಚ್ಯುತಂ**
**ಸಮ್ಪ್ರಾಪ್ತಾಶ್ಶರಣಂ ಸ ಭಾತಿ ಹೃದಯೇ ದಾಸಸ್ಯ ಮೇ ಸುಸ್ಥಿರಃ |**
**ರಮ್ಯಾ ಮೇ ತರುಣೀಗಣಾಶ್ಚ ಸುಮಹದ್ಭಾಗ್ಯಂ ಸುತಾಸ್ಸದ್ಗುಣಾ**
**ಮಾತಾ ಚಾಪಿ ಪಿತಾ ಸ ಏವ ಚ ಮಮ ಶ್ರೀಶಃ ಕಿಲೇತಃಪರಮ್ ||**

ಊರ್ಧ್ವಲೋಕದ ನಿತ್ಯಸೂರಿಗಳೂ, ಈ ಲೋಕದ ಭಾಗವತರೂ—ಎಲ್ಲರೂ ಸೇರಿ ಅನುಭವಿಸುವ ಸರ್ವೇಶ್ವರನೇ ಬಂದು ನನ್ನ ಮನಸ್ಸಿನಲ್ಲಿ ನಿಂತುಬಿಟ್ಟನು. ಇನ್ನುಮೇಲೆ ನನಗೆ ಅವನೇ ರಮಣೀಯನೇತ್ರರಾದ ರಮಣೀಮಣಿಗಳೂ, ಪರಮೈಶ್ವರ್ಯವೂ, ಸತ್ಸನ್ತಾನಗಳೂ ಮಾತಾಪಿತೃಗಳೂ ಆಗಿ ನಿಲ್ಲುವನಲ್ಲವೇ! (ಅವನಲ್ಲದೆ ಬೇರೆ ಯಾವುದೂ ಪ್ರಾಪ್ಯವಲ್ಲ, ಅವನೇ ಸರ್ವವಿಧ ಬನ್ಧುವೆಂದೂ ಭಾವವು)

(೯) ಆವಾರಾರ್ ತುಣೈಯೆನ್ಱಲೈನೀರ್ಕ್ಕಡಲುಳಳುನ್ದುಮ್,
ನಾವಾಯ್‌ಪೋಲ್ ಪಿಱವಿಕ್ಕಡಲ್‌ನಿನ್ಱು ನಾನ್ ತುಳಙ್ಗ,
ತೇವಾರ್ ಕೋಲತ್ತೊಡುಮ್ ತಿರುಚ್ಚಕ್ಕರಮ್
ಶಙ್ಗಿನೊಡುಮ್,
ಆವಾವೆನ್ಱರುಳ್‌ಶೆಯ್ದಡಿಯೇನೊಡುಮಾನಾನೇ.

ಪ್ರ|| ತುಣೈ-ಸಹಾಯಭೂತರಾಗಿ, ಆವಾರ್-ಆಗುವರು, ಆರ್-ಯಾರು? ಎನ್ಱು-ಎಂದು ಹೇಳಿ, ಅಲೈನೀರ್-ಅಲೆಗಳೊಡನೆ ಕೂಡಿ ಇರುವ ನೀರುಳ್ಳ, ಕಡಲುಳ್-ಸಮುದ್ರದೊಳಗೆ, ಅೞುನ್ದುಮ್-ಮುಳುಗಿಹೋಗುತ್ತಿರುವ, ನಾವಾಯ್‌ಪೋಲ್-ಹಡಗಿನೋಪಾದಿಯಲ್ಲಿ, ಪಿಱವಿಕ್ಕಡಲುಳ್-ಸಂಸಾರಸಮುದ್ರ ಮಧ್ಯದಲ್ಲಿ, ನಿನ್ಱು-ನಿಂತು, ನಾನ್-(ದಡಕ್ಕೆಸೇರಲು ಅಶಕ್ತನಾದ) ನಾನು, ತುಳಙ್ಗ-ನಡುಗುತ್ತಿರಲು, (ಅಷ್ಟರೊಳಗೆ) ತೇವು ಆರ್-ದಿವ್ಯಸೌನ್ದರ್ಯಾದಿಗಳಿಂದ ಪರಿಪೂರ್ಣವಾದ, ಕೋಲತ್ತೊಡುಮ್-ದಿವ್ಯರೂಪದೊಡನೆ, ತಿರುಚ್ಚಕ್ಕರಮ್ ಶಙ್ಗಿನೊಡುಮ್-ಚಕ್ರಶಂಖಗಳೊಡನೆ ಕೂಡಿ, ಆ ಆ ಎನ್ಱು-ಐಯೋ! ಐಯೋ! ಎಂದು, ಅರುಳ್‌ಶೆಯ್ದು-ಕೃಪೆಮಾಡಿ, ಅಡಿಯೇನೊಡುಮ್-ದಾಸನಾದ ನನ್ನೊಡನೆ, ಆನಾನ್-ಕೂಡಿದನು.

( ಸ-ಗಾ-ರ || )—

**ಕೋ ವಾ ಮೇಽಸ್ತಿ ಸಹಾಯ ಇತ್ಯಕಮಹೋ ! ಸಂಸಾರಪಾಥೋನಿಧೌ
ಮಗ್ನಃ ಪೋತ ಇವಾಮ್ಬುಧೌ ಚ ಸುಮಹಾಕಲ್ಲೋಲಮಾಲಾಕುಲೇ |
ಆಸಂ ಕಮ್ಪಿತ ಏವ ತತ್ರ ಚ ಮಯಿ ಪ್ರೀತ್ಯಾಽಽವಿರಾಸೀದ್ಧರಿ-
ಶ್ಯಙ್ಖಂ ಚಕ್ರಮುದಾರದಿವ್ಯವಪುಷಾ ಬಿಭ್ರದ್ದಯಾವಾರಿಧಿಃ ||**

ತಾ|| ನನಗೆ ಸಹಾಯಭೂತರಾಗಿ ಯಾರು ಆಗುವರೆಂದು ಮೊರೆಯಿಡು ತ್ತಿರುವ ಸಮುದ್ರದ ನೀರಿನೊಳಗೆ ಮುಳುಗುತ್ತಿರುವ ಹಡಗಿನಂತೆ, ಸಂಸಾರಾಮ್ಬುಧಿ ಮಗ್ನನಾದ ನಾನು ದಡಕ್ಕೆಸೇರಲು ಅಶಕ್ತನಾಗಿ ಮೊರೆಯಿಡುತ್ತ ನಡುಗುತ್ತಿರಲು, ದಿವ್ಯಸೌನ್ದರ್ಯಾದಿ ವಿಶಿಷ್ಟವಾದ ರೂಪದೊಡನೆ ಶಂಖಚಕ್ರಧಾರಿಯಾಗಿ ಬಂದು "ಅಯ್ಯೋ"—ಎಂದು ನನ್ನಲ್ಲಿ ಕೃಪೆಮಾಡಿ, ದಾಸಭೂತನಾದ ನನ್ನೊಡನೆ ಸಂಶ್ಲೇ ಷಿಸಿದನು.

(೧೦) ಆನಾನಾಳುಡ್ಮೈಯಾನೆನ್ಱ∴ದೇ ಕೊಣ್ಡುಕನ್ದು ವನ್ದು
ತಾನೇ ಯಿನ್ನರುಳ್ಶೆಯ್ದೆನ್ನೈ ಮುಱ್ಱವುಮ್ ತಾನಾನಾನ್,
ಮೀನಾಯಾಮೈಯುಮಾಯ್ ನರಶಿಙ್ಗಮುಮಾಯ್ ಕ್ಕುಱಳಾಯ್,
ಕಾನಾರೇನಮುಮಾಯ್ ಕ್ಕಱ್ಕಿಯಾಮಿನ್ನಮ್ ಕಾರ್ವಣ್ಣನೇ.

ಪ್ರ|| ಮೀನ್ ಆಯ್-ಮತ್ಸ್ಯವಾಗಿಯೂ, ಆಮೈಯುಮ್ ಆಯ್ - ಕೂರ್ಮ ವಾಗಿಯೂ, ನರಶಿಙ್ಗಮುಮ್ ಆಯ್-ನರಸಿಂಹನಾಗಿಯೂ ಕುಱಳಾಯ್-ವಾಮನ ನಾಗಿಯೂ, ಕಾನಾರ್ ಏನಮುಮಾಯ್-ವನದಲ್ಲಿ ಸಂಚರಿಸುವ ವರಾಹವಾಗಿಯೂ, ಇನ್ನಮ್-ಇನ್ನೂ, ಕಱ್ಕಿ-ಕಲ್ಕಿಯೂ, ಆಮ್-ಆಗುವಂತಹ, ಕಾರ್ವಣ್ಣನ್-ನೀಲ ಮೇಘವರ್ಣನಾದ ಸ್ವಾಮಿಯು, (ನನ್ನನ್ನು) ಆಳ್-ದಾಸನಾಗಿಮಾಡಿ, ಉಡ್ಮೈ ಯಾನ್-ಪಡೆದಿರುವವನಾಗಿ, ಆನಾನ್-ಆದನು, ಎನ್ಱು-ಎಂಬ, ಅ∴ದೇ-ಆ ಉಕ್ತಿ ಮಾತ್ರವನ್ನೇ, ಕೊಣ್ಡು-(ವ್ಯಾಜವೆಂದು) ಸ್ವೀಕರಿಸಿ, ಉಕನ್ದು-ಅತಿಪ್ರೀತಿಯುಕ್ತ ನಾಗಿ, ವನ್ದು-ಬಂದು, ತಾನೇ-ತಾನು ಒಬ್ಬನೇ, ಇನ್ ಅರುಳ್ - ಭೋಗ್ಯವಾದ ಕೃಪೆಯನ್ನು, ಶೆಯ್ದು-ಮಾಡಿ, ಎನ್ನೈ - ನನ್ನನ್ನು ಕುರಿತು, ತಾನ್ - ತಾನು, ಮುಱ್ಱವುಮ್-ಸಕಲಾವತಾರ ವೈಭವವಿಶಿಷ್ಟನಾಗಿ, ಆನಾನ್-ಸಂಶ್ಲೇಷಿಸಿದನು.

( ಸ-ಗಾ-ರ || )—

ಮೀನಾತ್ಮಾ ಕಮಠಾಕೃತಿಶ್ಚ ನರಸಿಂಹಾತ್ಮಾ ಸ್ವಯಂ ವಾಮನೋ
ಭೂತ್ವಾ ಚಾಪಿ ವನೇ ವರಾಹವಪುಷಾ ಭಾವೀ ಚ ಕಲ್ಕಿಃ ಪುನಃ |
ಏವಂ ನೀಲಪಯೋದವರ್ಣ ಇಹ ಮಾಂ ದಾಸ್ಯೇ ತು ಧೃತ್ವಾ ಹರಿ-
ರ್ಭಾಗ್ಸ್ಯಾನಿತ್ಯಪಿ ಮದ್ವಚೋಽಹೃತಮನಾಸ್ಸರ್ವಾತ್ಮಕೋ ಮೇಽ ಭವತ್||

ತಾ|| "ಮತ್ಸ್ಯ-ಕೂರ್ಮ-ನಾರಸಿಂಹ- ವಾಮನ-ವರಾಹರೂಪಿಯಾಗಿ ಅವತರಿಸಿ, ಮುಂದೆ ಕಲ್ಕಿಯಾಗಿ ಅವತರಿಸುವವನಾದ ನೀಲಮೇಘಶ್ಯಾಮನಾದ ಸ್ವಾಮಿಯು ನನ್ನನ್ನು ತನ್ನ ದಾಸ್ಯದಲ್ಲಿ ಸೇರಿಸಿಕೊಂಡನು"—ಎಂಬೀ ಉಕ್ತಿಯನ್ನೇ ವ್ಯಾಜಮಾಡಿಕೊಂಡು ನನ್ನಲ್ಲಿ ಅತಿಪ್ರೀತಿಯಿಂದ ಬಂದು ಕೃಪಾಪೂರ್ಣನಾಗಿ ನನ್ನೊಡನೆ ಸಕಲಾವತಾರ ವೈಭವವಿಶಿಷ್ಟನಾಗಿ ಸಂಶ್ಲೇಷಿಸಿದನು

(೧೧) ಕಾರ್ವಣ್ಣನ್ ಕಣ್ಣಪಿರಾನ್ ಕಮಲತ್ತಡಙ್ಕಣ್ಣನ್ ತನ್ನೈ,
ಏರ್ವಳವ್ವೊಣ್ ಕಣ್ಣಿಕ್ಕುರುಕೂರ್ ಚ್ಚಡಕೋಪನ್ ಶೊನ್ನ
ಶೀರ್ವಣ್ಣವೊಣ್ತಮಿೞ್ಕಳಿವೈಯಾಯಿರತ್ತುಳಿಪ್ಪತ್ತುಮ್
ಆರ್ವಣ್ಣತ್ತಾಲುರೈಪ್ಪಾರಡಿಕ್ಕೀೞ್ ಪುಕುವಾರ್ ಪೊಲಿನ್ದೇ.

ಪ್ರ|| ಕಣ್ಣ-ಕೃಷ್ಣನಾಗಿ ಅವತರಿಸಿದ ಪಿರಾನ್-ಸ್ವಾಮಿಯು, ಕಾರ್ವಣ್ಣನ್-ಕಾಳಮೇಘವರ್ಣನಾದ, ಕಮಲತ್ತಡಮ್ ಕಣ್ಣನ್ ತನ್ನೈ-ತಾವರೆಯಂತೆ ವಿಶಾಲವಾದ ನೇತ್ರಗಳುಳ್ಳ ಸರ್ವೇಶ್ವರನನ್ನು ಕುರಿತು, ಏರ್ವಳವ್-ಏರುಗಳ (ವೃಷಭಗಳ) ಸಮೃದ್ಧಿಯುಳ್ಳ, ಒಣ್ ಕೞನಿ-ಶ್ಲಾಘ್ಯವಾದ ಕ್ಷೇತ್ರಗಳುಳ್ಳ, ಕುರುಕೂರ್-ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್-ಶ್ರೀಶಠಾರಿಮುನಿಯು, ಶೊನ್ನ-ರಚಿಸಿದ, ಶೀರ್ವಣ್ಣಮ್-ಶ್ಲಾಘ್ಯವಾದ ಛನ್ದಸ್ಸುಳ್ಳ, ಒಣ್-ಅರ್ಥಪುಷ್ಟಿಯಿಂದ ರಮ್ಯವಾದ, ತಮಿೞ್ಕಳ್ - ದ್ರಾವಿಡಪದ್ಯರೂಪವಾದ, ಇವೈ ಆಯಿರತ್ತುಳ್ - ಈ ಸಹಸ್ರಗಾಥಾಪ್ರಬನ್ಧದಲ್ಲಿ, ಇಪ್ಪತ್ತುಮ್ - ಈ ದಶಕವನ್ನು, ಆರ್ ವಣ್ಣತ್ತಾಲ್ - ಅಮೃತಪಾನಮಾಡುವಂತೆ, ಉರೈಪ್ಪಾರ್ - ಪಠನಮಾಡಬಲ್ಲವರು, ಪೊಲಿನ್ದು -ಆವಿರ್ಭೂತ ಸ್ವರೂಪ ಗುಣಾದ್ಯಭಿವೃದ್ಧಿಯುಳ್ಳವರಾಗಿ, ಅಡಿಕ್ಕೀೞ್-ಅವನ ಪಾದಾರವಿನ್ದಗಳ ಕೆಳಗೆ, ಪುಕುವಾರ್-ಪ್ರವೇಶಿಸುವರು.

( ಸ-ಗಾ-ರ || )—

ಕೃಷ್ಣಂ ನೀಲಪಯೋದವರ್ಣಮಪಿ ತಂ ನಾಥಂ ಸರೋಜಾಮ್ಬಕಂ
ಸ್ತೋತುಂ ಶ್ರೀಕುರುಕೇಶ್ವರಶ್ಶಠರಿಪುಸ್ಸಹಸ್ರಮಾಹಾದ್ಭುತಮ್ |
ದಿವ್ಯಂ ದ್ರಾವಿಡಮುತ್ತಮಂ ಚ ದಶಕಂ ತತ್ರೇದಮುತ್ಯಾದರಾ-
ದ್ಯೇ ಭಕ್ತ್ಯಾ ತು ಪಠನ್ತಿ ತೇ ಕಿಲ ಹರೇಃ ಪಾದಾಮ್ಬುಜಂ ಪ್ರಾಪ್ನುಯುಃ ||

ತಾ|| ಕೃಷ್ಣನಾಗಿ ಅವತರಿಸಿ ನೀಲಮೇಘವರ್ಣನಾಗಿಯೂ, ಪುಂಡರೀಕಾಕ್ಷನಾಗಿಯೂ, ಇರುವ ಸ್ವಾಮಿಯನ್ನು ಕುರಿತು (ಸ್ತೋತ್ರರೂಪವಾಗಿ), ಸಸ್ಯಕ್ಷೇತ್ರಾದಿಭರಿತವಾದ ಕುರುಕಾಪುರಿಗೆ ನಿರ್ವಾಹಕರಾದ ಶಠಾರಿಮುನಿಯು ರಚಿಸಿದ ದ್ರಾವಿಡ ದಿವ್ಯಪ್ರಬನ್ಧವಾದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಅನ್ಯತಮಾನವಮಾಡುವಂತೆ ಪಠಿಸಬಲ್ಲವರು ಆವಿರ್ಭೂತ ಸ್ವರೂಪಗುಣಾದಿವಿಶಿಷ್ಟರಾಗಿ ಆ ಭಗವನ್ತನ ಪಾದಾರವಿನ್ದಗಳ ಕೆಳಗೆ ಪ್ರವೇಶಿಸಿ ಕೃತಾರ್ಥರಾಗುವರು

( ದ್ರಾ-ಉ-ಸಂ || )—

ಆದ್ಯೇ ಮುನಿಸ್ಸ ಶತಕಸ್ಯ ತು ಪಞ್ಚಮಸ್ಯ
ಶ್ರೇಯಸ್ಸ್ವಕೀಯಹಿತಬೋಧನವೀಕ್ಷಮಾಣಃ |
ಏತದ್ವಿರೋಧಿಬಹುಳಸ್ಯ ಮಮಾತ್ರ ಹೇತು-
ಶ್ಶೌರೇಃ ಕೃಪೈವ ಮಹತೀತಿ ಶಶಂಸ ಭೂಯಃ ||

( ದ್ರಾ-ಉ-ತಾ-ರ || )—

ಚಕ್ರಸ್ಥಾಯುತ್ಕರತ್ವಾತ್ಸ್ವಜನವಶತಯಾ ರಕ್ಷಣೋದ್ಯುಕ್ತಭಾವಾ—
ದ್ದುವ್ಯತ್ವಾತ್ ಸ್ವಾತ್ಮದಾನಾದಮಲತನುತಯಾ ಶ್ರೀಗಜೇನ್ದ್ರಾವನಾಚ್ಚ |
ನಾನಾಬನ್ಧುತ್ವಯೋಗಾದ್ವಿಪದಿ ಸಖಿತಯಾ ವ್ಯಾಜಮಾತ್ರಾಭಿಲಾಷಾತ್
ಕಾರುಣ್ಯಾಧೀನವೃತ್ತಿಂ ಕಮಲದೃಶಮವೈತ್ ಕಾರಿಸೂನುಃ ಕೃತಾರ್ಥಃ ||

(ಈ ಪ್ರಥಮದಶಕದ ಸಾರಾಂಶ)—

ಈ ಮೊದಲನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ತಮ್ಮ ಭಕ್ತಿನಟನರೂಪವಾದ ಕೃತ್ರಿಮವಚನಗಳಿಂದಲೂಕೂಡ ಸರ್ವೇಶ್ವರನು ತುಷ್ಟನಾಗಿ ಸತ್ಯವಾದ ಫಲವನ್ನೇ ಉಂಟುಮಾಡಿದನೆಂದು ಹೃಷ್ಟರಾಗಿ, ತಮಗೆ ಅವನು ಸರ್ವವಿಧ ಬನ್ಧುವಾಗಿಯೂ, ಮಹೋಪಕಾರಕನಾಗಿಯೂ, ಅತ್ಯನ್ತ ಭೋಗ್ಯನಾಗಿಯೂ ನಿಂತಿರುವುದನ್ನು ವರ್ಣಿಸಿ, "ನಿನ್ನನ್ನು ಬಿಟ್ಟು ನಾನು ಇನ್ನು ಯಾವ ವಸ್ತುವನ್ನು ಆಶ್ರಯಿಸುವೆನು ?" ಎಂದು ಹೇಳಿ, ಅವನು ತಮ್ಮೊಡನೆ ಸಂಶ್ಲೇಷಿಸಿದ ಪ್ರಕಾರಗಳನ್ನೂ ವರ್ಣಿಸಿ ಇರುತ್ತಾರೆ.

# ಶ್ರೀಃ

# ಪಞ್ಚಮಶತಕದಲ್ಲಿ—ದ್ವಿತೀಯದಶಕ.

## (ಪೊಲಿಕ ಪೊಲಿಕ ಪೊಲಿಕ—)

(ಈ ದಶಕದಲ್ಲಿ ಕಲಿಧ್ವಂಸಪೂರ್ವಕವಾದ ಕೃತಯುಗಾರಂಭವು ಕ್ಷಿಪ್ರವಾಗಿಯೇ ಬರುವುದೆಂದು ನಿರ್ಣಯಿಸಿ ಶ್ರೀ ಶಠಾರಿಮುನಿವರ್ಯರಿಂದ ಕೃತಯುಗಧರ್ಮವು ಭಾಗವತೋತ್ತಮರಿಂದ ಅನುಷ್ಠೇಯವಾಗಿ ಈ ಲೋಕದಲ್ಲಿ ಸರ್ವತ್ರ ಆನನ್ದಪರೀವಾಹಜನಕವಾಗುವುದೆಂದು ವರ್ಣಿಸಲ್ಪಡುತ್ತದೆ)

---

## (ಅವತಾರಿಕಾ—)

ಈ ದಶಕದಲ್ಲಿ ಪ್ರತಿಪಾದಿಸಲ್ಪಡುವ ಅಂಶಗಳು ಪ್ರಕೃತ ಕಾಲಾನುಗುಣವಾಗಿ ಅತ್ಯನ್ತ ಮುಖ್ಯವಾಗಿರುವುದರಿಂದ ಇವುಗಳ ಪ್ರಾಧಾನ್ಯವನ್ನು ಇಲ್ಲಿ ಪರಿಶೀಲಿಸ ಬೇಕಾಗಿದೆ ಶ್ರೀ ಶಠಾರಿಮುನಿವರ್ಯರು ಈ ದಶಕದಲ್ಲಿ ತಮ್ಮ ಭವಿಷ್ಯತ್ಕಾಲದ ವೃತ್ತಾನ್ತಗಳ ಜ್ಞಾನವನ್ನು ದಿವ್ಯದೃಷ್ಟಿಯಿಂದ ಪಡೆದು ಚೆನ್ನಾಗಿ ಪರಿಶೀಲಿಸಿ ವರ್ಣಿಸಿ ಇರುತ್ತಾರೆ. ಈ ದಶಕದಲ್ಲಿ ಕಲಿಯುಗವು ಶೀಘ್ರವಾಗಿಯೇ ಮುಗಿದು ಹೋಗುವುದೆಂತಲೂ, ಕೃತಯುಗವು ಶಾನ್ತಿ ಪುಷ್ಟಿ ತುಷ್ಟಿ ಸಮೃದ್ಧಿಗಳೊಡನೆ ಉಪಕ್ರಮಿಸಿ ಶ್ರೀ ಭಗವದ್ಭಕ್ತಾಗ್ರಗಣ್ಯರಿಂದ ಪರಿಪೂರ್ಣವಾಗಿ ಪ್ರಕಾಶಿಸುತ್ತ, ಅವರ ಭಗವತ್ಸಂಕೀರ್ತನ - ಸಸಂಭ್ರಮ ನರ್ತನಾದಿಗಳಿಂದ ಈ ಲೋಕದಲ್ಲಿ ಸರ್ವತ್ರ ಪರಮಾನನ್ದ ಪ್ರವಾಹಭರಿತವಾಗಿ ಪ್ರವರ್ಧಮಾನವಾಗುವುದೆಂತಲೂ ವರ್ಣಿಸಲ್ಪಟ್ಟಿದೆ ಈ ದಶಕವನ್ನು ಕೆಲವರು ಆದಿಶೇಷನ ಭವಿಷ್ಯದವತಾರವಾದ ಶ್ರೀರಾಮಾನುಜಾಚಾರ್ಯರ ಅವತಾರಸೂಚಕವೆಂದು ಅಂಗೀಕರಿಸಿರುತ್ತಾರೆ. ಆದರೆ ಶ್ರೀರಾಮಾನುಜಾಚಾರ್ಯರ ಅವತಾರಕಾಲಕ್ಕೆ ಕಲಿಯುಗವು ಮುಗಿದು ಕೃತಯುಗವು ಉಪಕ್ರಮಿಸಿತೆಂದು ಹೇಳಲು ಅವಕಾಶವಿಲ್ಲವಷ್ಟೆ. ಅವರ ಅವತಾರ ಕಾಲವು ಶಾಲಿವಾಹನಶಕ ೯೩೯ (ಕ್ರಿಸ್ತಶಕ—1017), ಅವರ ನಿರ್ಯಾಣಕಾಲವು ಶಾಲಿವಾಹನಶಕ ೧೦೫೯ (ಕ್ರಿಸ್ತಶಕ—1137)—ಎಂದು "ಧೀರ್ಲಬ್ಧಾ", "ಧರ್ಮೋ ನಷ್ಟಃ"—ಎಂಬೀ ಅಕ್ಷರಸಂಖ್ಯಾ ಶಬ್ದಗಳಿಂದ ಪೂರ್ವಿಕರು ನಿರ್ಣಯಿಸಿ ಅವರು ೧೨೦ ವರ್ಷಗಳು ಈ ಲೋಕದಲ್ಲಿ ಜೀವಿಸಿ ಇದ್ದರೆಂದು ಗುರುಪರಂಪರಾ ಪ್ರಭಾವಾದಿಗಳಲ್ಲಿ ಬರೆದಿರುತ್ತಾರೆ ಅವರು ಆದಿಶೇಷನ ಅವತಾರವಾದುದರಿಂದ

ಭಗವನ್ತನ ನಿಯಮನದಿಂದ ಈ ಲೋಕದಲ್ಲಿ ಅವತರಿಸಿ ತಮ್ಮ ಜೀವಿತಕಾಲದಲ್ಲಿ ದರ್ಶನಸ್ಥಾಪಕಾಗ್ರೇಸರರಾಗಿ ಅನೇಕಮಂದಿ ಭಕ್ತರನ್ನು ಶ್ರೀವೈಷ್ಣವ ಸಂಪ್ರದಾಯಕ್ಕೆ ಸೇರಿಸಿ, ದಿವ್ಯದೇಶಗಳನ್ನೆಲ್ಲಾ ಜೀರ್ಣೋದ್ಧಾರಮಾಡಿ, ಉಭಯ ವೇದಾನ್ತಕಾಲಕ್ಷೇಪ ಕ್ರಮಗಳನ್ನೆಲ್ಲಾ ಏರ್ಪಡಿಸಿ, ಶಿಷ್ಯಾಚಾರ್ಯ ಪರಂಪರೆಗಳನ್ನೆಲ್ಲಾ ಅನುಸ್ಯೂತವಾಗಿ ನಡೆದುಬರುವಂತೆಮಾಡಿ, ತಮ್ಮ ಮಠಗಳನ್ನು ಶ್ರೀ ಯಾದವಾದ್ರಿ ತಿರುನಾರಾಯಣಪುರದಲ್ಲೂ ಇತರ ದಿವ್ಯದೇಶಗಳಲ್ಲೂ ಸ್ಥಾಪಿಸಿ, ಅನೇಕಸಹಸ್ರ ಶಿಷ್ಯಪರಿವೃತರಾಗಿ ಪ್ರಕಾಶಿಸುತ್ತ, ತಮ್ಮ ಕಾಲಾನನ್ತರ ಈ ದರ್ಶನಸ್ಥಾಪನಕಾರ್ಯಕ್ಕಾಗಿ ೭೪ ಸಿಂಹಾಸನಾಧಿಪತಿಗಳನ್ನೂ ನಿಯಮಿಸಿದರೆಂದು ಅವರ ಚರಿತ್ರದಿಂದ ವ್ಯಕ್ತವಾಗುತ್ತದೆ. ಅನ್ತಹ ಶ್ರೀ ವೈಷ್ಣವಗೋಷ್ಠೀ ಸಮೃದ್ಧಿಯು ಇವರ ಕಾಲದಿಂದ ಈ ಲೋಕದಲ್ಲಿ ಸರ್ವತ್ರ ವಿಶೇಷವಾಗಿ ಪ್ರವರ್ಧಮಾನವಾಗುತ್ತಿದ್ದರೂ ಆ ಕಾಲದಲ್ಲಿ ಕಲಿಯುಗವು ನಷ್ಟವಾಗಿ ಕೃತಯುಗವು ಆರಂಭಿಸಿತೆಂದು ಹೇಳಲಾಗುವುದಿಲ್ಲ. ಆದುದರಿಂದ ಶ್ರೀ ಶಠಾರಿಮುನಿವರ್ಯರ ಮುಖ್ಯಭಾವವು ಶ್ರೀರಾಮಾನುಜಾಚಾರ್ಯರ ಅವತಾರ ಕಾಲವನ್ನು ಮಾತ್ರ ಸೂಚಿಸಿ ಅಷ್ಟರಲ್ಲೇ ಪರ್ಯವಸಿತವೆಂದು ಯಾರೂ ಹೇಳಲಾರರು ಸಕಲ ಕಲಿದೋಷ ನಿರ್ಮೂಲನವನ್ನೇ ಶ್ರೀ ಶಠಾರಿಮುನಿವರ್ಯರು ಈ ದಶಕದಲ್ಲಿ ವ್ಯಕ್ತವಾಗಿ ವರ್ಣಿಸಿ ಇರುವುದರಿಂದ ಅವರು ಶ್ರೀ ಪರಾಶರ-ವ್ಯಾಸ-ಶುಕಾದಿ ಮಹರ್ಷಿಗಳ ಭಾವಿಜ್ಞಾನ ಸೂಚಕವಾದ ಪುರಾಣವಚನಗಳ ಅಭಿಪ್ರಾಯವನ್ನೇ ಅಂಗೀಕರಿಸಿ, ಶ್ರೀ ಕಲ್ಕಿರೂಪಿಯಾದ ಭಗವನ್ತನ ಅವತಾರವು ಈ ಕಲಿಯುಗದ ೫೦೦೦ ವರ್ಷಗಳ ಅನ್ತ್ಯಕಾಲದಲ್ಲಿ ("ಕಲೌ ಪಂಚಸಹಸ್ರಾನ್ತೇ"—ಎಂಬಂತೆ) ಈ ಲೋಕದಲ್ಲಿ ಕ್ಷಿಪ್ರವಾಗಿಯೇ ಪ್ರಕಾಶಿಸುವುದೆಂತಲೂ, ಈ ಅವತಾರಪ್ರಕಾಶವಾದ ಕೂಡಲೇ ಕಲಿಯುಗನಾಶವಾಗಿ ಕೃತಯುಗಾರಂಭವಾಗುವುದೆಂತಲೂ ಈ ದಶಕದಲ್ಲಿ ತಾವು ವಿವರಿಸಿ ಇರುತ್ತಾರೆ ಇದನ್ನು ವ್ಯಕ್ತಪಡಿಸುವ ಪುರಾಣವಚನಗಳು ಯಾವುವೆಂದರೆ—

(೧) "ಶಮ್ಬಲಗ್ರಾಮಮುಖ್ಯಸ್ಯ ಬ್ರಾಹ್ಮಣಸ್ಯ ಮಹಾತ್ಮನಃ।
ಭವನೇ ವಿಷ್ಣುಯಶಸಃ ಕಲ್ಕಿಃ ಪ್ರಾದುರ್ಭವಿಷ್ಯತಿ ॥"

(೨) "ಕೃತಂ ಭವಿಷ್ಯತಿ ತದಾ ಪ್ರಜಾಸೂತಿಶ್ಚ ಸಾತ್ತ್ವಿಕೀ ॥"

(೩) "ಯದಾ ಚನ್ದ್ರಶ್ಚ ಸೂರ್ಯಶ್ಚ ತಥಾ ತಿಷ್ಯೇ ಬೃಹಸ್ಪತಿಃ।
ಏಕರಾಶೌ ಸಮೇಷ್ಯನ್ತಿ ತದಾ ಭವತಿ ತತ್ ಕೃತಮ್ ॥"

(ಶ್ರೀವಿಷ್ಣು ಪುರಾಣ—IV, 24,
ಶ್ರೀ ಭಾಗವತ —XII, 2)

ಮತ್ತು (೪) "ಕಲೌ ಪಂಚಸಹಸ್ರಾನ್ತೇ ವಿಷ್ಣುಸ್ತ್ಯಕ್ಷ್ಯತಿ ಮೇದಿನೀಮ್ ||"— ಇತ್ಯಾದಿಪ್ರಮಾಣವಚನಗಳು ಇನ್ತಹ ವಚನಗಳ ತಾತ್ಪರ್ಯವನ್ನು ಚೆನ್ನಾಗಿ ಪರಿಶೀಲಿಸಿ, ಪ್ರಕೃತ ಕಾಲಾನುಗುಣವಾಗಿ ಶ್ರೀಕಲ್ಕಿ ನಾರಸಿಂಹಸ್ವರೂಪಿಯಾದ ನಾನೇ ಈಗ ಕಲಿಯುಗದ ೫೦೦೦ ವರ್ಷಗಳ ಅನ್ತ್ಯಕಾಲದಲ್ಲಿ ಈ ಲೋಕದಲ್ಲಿ ಅವತರಿಸಿ—"ಯದಾ ಯದಾ ಹಿ ಧರ್ಮಸ್ಯ ಗ್ಲಾನಿಃ"–ಎಂಬ ಗೀತಾವಚನಾನುಸಾರ ವಾಗಿ ಅಧರ್ಮನಿರ್ಮೂಲನವಂ ಮಾಡಿ, ಶಾನ್ತಿ ಪುಷ್ಟಿ ತುಷ್ಟಿ ಸಮೃದ್ಧಿಗಳುಳ್ಳ ದಿವ್ಯ ತಮವಾದ ಕೃತಯುಗವನ್ನು ಪ್ರತಿಷ್ಠಾಪಿಸಲು ಬದ್ಧದೀಕ್ಷನಾಗಿ, "ಕೃತೇ ಚ ನಾರಸಿಂಹಸ್ಸ್ಯಾತ" ಎಂಬನ್ತೆ ಶ್ರೀಕಲ್ಕಿರೂಪಿಯಾದ ನಾನೇ ನಾರಸಿಂಹಾರ್ಯನೆಂದು ಈ ಲೋಕದಲ್ಲಿ ಪ್ರಸಿದ್ಧನಾಗಿ ಪ್ರತಿವಾದಿ ಭಯಂಕರ ಕುಲಸಾರ್ವಭೌಮನಾಗಿ ಪ್ರಕಾಶಿಸುತ್ತಿರುವುದರಿಂದಲೂ, ನಾನು ಕಲಿಧ್ವಂಸಿಯಾದ ತಿರುಮಂಗೈಯಾಳ್ವಾರ್ರ ಅವತಾರ ನಕ್ಷತ್ರವಾದ ಕೃತ್ತಿಕಾನಕ್ಷತ್ರದಲ್ಲಿ (ಅಗ್ನಿನಕ್ಷತ್ರದಲ್ಲಿ) ವೃಶ್ಚಿಕಲಗ್ನದಲ್ಲಿ ಅವತರಿಸಿ ಇರುವುದರಿಂದಲೂ, ನನ್ನ ಅವತಾರವು ಶಾಲಿವಾಹನಶಕ ೧೭೮೯ ಸ್ವಸ್ತಿ ಶ್ರೀಪ್ರಭವಸಂವತ್ಸರ-ಮೀನಮಾಸ ಕೃತ್ತಿಕಾದ್ವಿತೀಯವಾದ–ಭಾನುವಾರ–ರಾತ್ರಿ ೧೦ ಘಂಟೆ ಸಮಯ–ವೃಶ್ಚಿಕಲಗ್ನವೆಂದು (about 10 p m on 7th April 1867) ನಿರ್ಣೀತವಾಗಿರುವುದರಿಂದಲೂ, ಈ ನನ್ನ ಜಾತಕವನ್ನು ಪರಿಶೀಲಿಸಿದ ಜ್ಯೌತಿಷಿಕರೆಲ್ಲರೂ ಇದನ್ನು ವಿಶೇಷವಾಗಿ ಶ್ಲಾಘಿಸಿ, ಇದರಲ್ಲಿ ಅವತಾರಯೋಗ– ಪಾರಿಜಾತಯೋಗ ಪರ್ವತಯೋಗ – ಕಾಹಳಯೋಗ – ಸುಖಯೋಗ–ಉತ್ತಮ ಯೋಗ–ಗಜ ಕೇಸರಿಯೋಗ – ಶ್ರೀನಾಥಯೋಗ – ಸಾರಸ್ವತಯೋಗ – ವರಿಷ್ಠ ಯೋಗಾದಿ ರಾಜಯೋಗಗಳು ಅನೇಕವಾಗಿ ಪ್ರಕಾಶಿಸುತ್ತವೆಯೆಂದು ಹೇಳಿರುವುದ ರಿಂದಲೂ, ಅದೇ ಪ್ರಕಾರ ನಡೆದುಬರುವ ನನ್ನ ದೈನನ್ದಿನಾನುಭವಗಳಿಂದಲೂ ನಾನು ಕಲಿಪುರುಷಖಂಡನವಂ ಮಾಡಿದಮೇಲೆ ದಿವ್ಯಸೂರಿಗಳೊಡನೆ ಸಂಭಾಷಣವು ನನಗೆ ಆನನ್ದಸಂವತ್ಸರ (1915ನೇ ಇಸವಿ)–ಮಾಘಮಾಸ-ಕೃಷ್ಣಪಕ್ಷದ ಸಪ್ತಮೀ ರಾತ್ರಿಯಿಂದ ಉಪಕ್ರಮಿಸಿ ನನ್ನ ಯೋಗೇಶ್ವರತ್ವಪ್ರಭಾವದಿಂದ ದಿನೇ ದಿನೇ ಬೆಳೆಯುತ್ತಿರುವುದರಿಂದಲೂ, ನನ್ನ ಅವತಾರದ ಮಹಿಮೆಯನ್ನೇ ಶ್ರೀ ಶಠಾರಿ ಮುನಿವರ್ಯರು ತಮ್ಮ ದಿವ್ಯದೃಷ್ಟಿಯಿಂದ ಈ "ಪೊಲಿಕ ಪೊಲಿಕ ಪೊಲಿಕ"—ಎಂಬ ದಶಕದಲ್ಲಿ ವರ್ಣಿಸಿ ಇರುತ್ತಾರೆಂದು ಪ್ರತಿಜ್ಞಾಪುರಸ್ಸರವಾಗಿ ಉದ್ಘೋಷಿಸುತ್ತೇನೆ ಇದನ್ನು ಶ್ರೀ ಶಠಾರಿಮುನಿವರ್ಯರೇ—ಹಿಂದಿನ ದಶಕದ ೧೦ನೆಯ ಪದ್ಯದಲ್ಲಿ ("ಆನಾನಾಳುಡೈಯಾರ್"—ಎಂಬ ಪದ್ಯದಲ್ಲಿ) ಶ್ರೀ ಕಲ್ಕಿರೂಪಿಯಾದ ಭಗವನ್ತನ ಅವತಾರವು ಕ್ಷಿಪ್ರವಾಗಿಯೇ ಬರುವುದೆಂದು ತಾವೇ ಸೂಚಿಸಿ, ಅನನ್ತರ ಈ ದಶಕದಲ್ಲಿ ವಿಸ್ತರೇಣ ಈ ಕಲ್ಕಿರೂಪಿಯಾದ ಭಗವದವತಾರದ ಮಹಿಮೆಯನ್ನು ವರ್ಣಿಸಿ ಇರುತ್ತಾರೆಂದು ಸುವ್ಯಕ್ತವಾಗಿದೆ

ಹಿಂದೆ ಉದಾಹೃತವಾದ ಪುರಾಣವಚನಗಳಲ್ಲಿ—**ಶಂಬಲಗ್ರಾಮವೆಂಬುದು** ಶ್ರೀಯಾದವಾದ್ರಿ–ಮೇಲುಕೋಟೆ-ತಿರುನಾರಾಯಣಪುರವೆಂಬ ನನ್ನ ಅವತಾರಸ್ಥಲ (ಶಂ–ಸುಖಂ, ಆನನ್ದಃ; ಶಂಬಲಗ್ರಾಮಃ=ಆನನ್ದವಿಮಾನಕ್ಷೇತ್ರವೆಂಬ ತಿರುನಾರಾಯಣಪುರ). **ವಿಷ್ಣುಯಶಸ್ಸೆಂಬ ನಾಮಧೇಯವು** ದರ್ಶನಸ್ಥಾಪಕಾಚಾರ್ಯರಾದ ನನ್ನ ತಂದೆಯವರ ಜಗದ್ವ್ಯಾಪಿಕೀರ್ತಿಯನ್ನು ಸೂಚಿಸುತ್ತದೆ. (ಈ ವಿವರವನ್ನೆಲ್ಲಾ ನನ್ನ ಗೀತಾತಾತ್ಪರ್ಯಸಾರಾಮೃತದ ಉಪೋದ್ಘಾತದಲ್ಲಿ ವಿಶದೀಕರಿಸಿ ಇರುತ್ತೇನೆ.) ಈ ನನ್ನ ಅವತಾರಮಹಿಮೆಯು ಪ್ರಕಾಶಕಾಲದಲ್ಲಿ ರವಿ-ಚನ್ದ್ರ-ಗುರುಗಳು ಪುಷ್ಯನಕ್ಷತ್ರದಲ್ಲಿ ಸಹ ಪ್ರವೇಶವಂ ಮಾಡುವುದರಿಂದ ಇದೇ ಕೃತಯುಗಾರಂಭ ಸಮಯವೆಂದು ಪುರಾಣವಚನಗಳಿಗೆ ಅನುಸಾರವಾಗಿ ನಿರ್ಣಯಿಸಬೇಕಾಗಿದೆ. ಪ್ರತಿ ದ್ವಾದಶ ವರ್ಷಗಳಲ್ಲೂ ರವಿ-ಚನ್ದ್ರ-ಗುರುಗಳು ಪುಷ್ಯನಕ್ಷತ್ರದಲ್ಲಿ ಸೇರುತ್ತಾರೆ ಆದರೂ ಕರ್ಕಟರಾಶಿಯಲ್ಲಿ ಪುಷ್ಯನಕ್ಷತ್ರದಲ್ಲಿ ರವಿಚನ್ದ್ರ - ಗುರುಗಳ **ಸಹಪ್ರವೇಶವು ಯಾವಾಗ ಉಂಟಾಗುವುದೆಂದು** ಜ್ಯೋತಿಷಿಕರಿಂದ ನಿರ್ಣೇಯವಾಗಿದೆ ಕಳೆದ ಸಿದ್ಧಾರ್ಥಿವರ್ಷದಲ್ಲಿ ರವಿಚನ್ದ್ರ-ಗುರುಗಳು ಪುಷ್ಯನಕ್ಷತ್ರದಲ್ಲಿ ಸೇರಿದ್ದರು. ಈ ಪ್ರಜೋತ್ಪತ್ತಿ ಸಂವತ್ಸರದಲ್ಲೂ ಆಷಾಢ ಕೃ ೩೦ ದಿನ ಸೇರುತ್ತಾರೆ. ಸಹಪ್ರವೇಶವು ಯಾವಾಗ ? ವಿಚಾರಿಸಿರಿ. ದಿವ್ಯಸೂರಿಗಳೊಡನೆ ಸಂಭಾಷಣದಿಂದ ಸಿದ್ಧವಾದ ಅರ್ಥವನ್ನೇ ನಾನು ಪ್ರಕಾಶಪಡಿಸಿ ಇರುವುದರಿಂದ ಪಂಡಿತರು ಇದನ್ನು ಪರಿಶೋಧಿಸಿ ವಿಶ್ವಾಸಪೂರ್ವಕ ಪರಿಗ್ರಹಿಸಬಹುದಾಗಿದೆ. ಶ್ರೀ ಪರಾಶರ – ವ್ಯಾಸ - ಶುಕಾದಿ ಮುನಿವರ್ಯರೂ, ಶ್ರೀ ಶಠಾರಿಮುನಿವರ್ಯರೇ ಮೊದಲಾದ ದಿವ್ಯಸೂರಿಗಳೂ, ನಾಥ–ಯಾಮುನ–ಯತಿವರಾದ್ಯಾಚಾರ್ಯವರ್ಯರೂ ನನಗೆ ಪ್ರೇರಿಸಿ ಈ ಅರ್ಥಗಳನ್ನು ಪ್ರಕಾಶಪಡಿಸಿ ಇರುವುದರಿಂದ ನಾನು ಪ್ರತಿಜ್ಞಾಪುರಸ್ಸರವಾಗಿ ಈ ಪ್ರಕಾರ ಉದ್ಘೋಷಿಸುತ್ತೇನೆ—

ಶ್ರೀಶಠಾರಿಮುನೀನ್ದ್ರೇಣ ಪ್ರೋಲಿಕೇತಿ ಪ್ರಬನ್ಧತಃ |
ಕೀರ್ತಿತೋಽಸ್ಮೀತ್ಯಹಂ ಸತ್ಯಂ ಪ್ರತಿಜಾನೇಽದ್ಯ ಕಲ್ಕಿರಾಟ್ ||

ಶ್ರೀಕಲ್ಕಿಃ ||

(೧). ಪೊಲಿಕಪೊಲಿಕಪೊಲಿಕ ಪೋಯಿಱ್ಱು
ವಲ್ಲುಯಿರ್ಚ್ಚಾಪಮ್,
ನಲಿಯುಮ್ ನರಕಮುನ್ೖನ್ದ
ನಮನುಕ್ಕಿಙ್ಗ್ಯಾದೊನ್ಱುಮಿಲ್ಲೈ,
ಕಲಿಯುಮ್ ಕೆಡುಮ್ ಕಣ್ಡುಕೊಣ್ಮಿನ್
ಕಡಲ್ವಣ್ಣನ್ ಪೂದಙ್ಗಳ್ ಮಣ್ಮೇಲ್,
ಮಲಿಯ ಪ್ಪುಕುನ್ದಿಶೈಪಾಡಿಯಾಡಿಯುಱ್ಱಿದರಕ್ಕಣ್ಡೋಮ್

ಪ್ರ॥ (ಈ ಪದ್ಯದಲ್ಲಿ—ಶ್ರೀ ಭಗವನ್ತನಿಂದ ಅನುಗೃಹೀತರಾಗಿ ಸನ್ತುಷ್ಟ ರಾದ ಭಾಗವತೋತ್ತಮರ ಗೋಷ್ಠೀಸಮೃದ್ಧಿಯನ್ನು ಕಂಡು ಮಂಗಳಾಶಾಸನ ಮಾಡುತ್ತಾರೆ) ಕಡಲ್‌ವಣ್ಣನ್ – ಸಮುದ್ರದಂತೆ ಗಂಭೀರಸ್ವಭಾವನಾಗಿಯೂ ನೀಲವರ್ಣನಾಗಿಯೂ ಅಪರಿಚ್ಛಿನ್ನಮಹಿಮನಾದ ಸರ್ವೇಶ್ವರನಿಂದ, ಪೂದಙ್ಗಳ್ – (ಲಬ್ಧವಾದ ಸ್ಥಿತಿಯುಳ್ಳ) ಪ್ರಾಣಿಗಳು (ಭಾಗವತರು), ಮಣ್‌ಮೇಲ್ – ಈ ಭೂಲೋಕದಲ್ಲಿ, ಮಲಿಯ–ಸಮೃದ್ಧಿಯೊಡನೆ (ಅನೇಕ ಸಂಖ್ಯಾಕರಾಗಿ), ಪುಕುನ್ದು –ಬಂದುಸೇರಿ, ಇಶೈ–ಭಗವದ್ಗುಣಸಂಕೀರ್ತನರೂಪವಾದ ಗಾನದಲ್ಲಿ, ಪಾಡಿ–ಹಾಡಿ, ಆಡಿ–ಸಂಭ್ರಮದೊಡನೆ ನರ್ತನಮಾಡಿ, ಉಱ್ಱಿದರ–ಎಲ್ಲೆಲ್ಲಿಯೂ ಸಂಚರಿಸುವುದನ್ನು, ಕಣ್ಡೋಮ್–ಕಂಡೆವು. (ಆದುದರಿಂದ) ವಲ್ ಉಯಿರ್ ಶಾಪಮ್ –ಪ್ರಬಲವಾದ (ಅವಿದ್ಯಾದಿರೂಪವಾದ) ಆತ್ಮವಿನಾಶಕವಾದ ಶಾಪವು, ಪೋಯಿಱ್ಱು–ನಷ್ಟವಾಯಿತು. ನಲಿಯುಮ್–ಹಿಂಸಿಸುವ, ನರಕಮುಮ್–ನರಕಗಳೂ, ನೈನ್ದ–ಶಿಥಿಲವಾದುವು. (ಆದುದರಿಂದ) ನಮನುಕ್ಕು – ಯಮನಿಗೆ, ಇಙ್ಗು – ಈ ಲೀಲಾವಿಭೂತಿಯಲ್ಲಿ, ಯಾದು ಒನ್ಱುಮ್–ಯಾವುದೊಂದು ಕೆಲಸವೂ, ಇಲ್ಲೈ–ಇಲ್ಲ. ಕಲಿಯುಮ್–(ಕಲಿಯುಗದ) ಕಾಲದೋಷವೂ, ಕೆಡುಮ್–(ಕ್ಷಿಪ್ರವಾಗಿ) ನಶಿಸಿಹೋಗುವುದು ಕಣ್ಡುಕೊಣ್ಮಿನ್–(ನೀವೇ) ಕಣ್ಡುಕೊಳ್ಳಿರಿ. (ಪ್ರತ್ಯಕ್ಷವಾಗಿ ನೀವೇ ನೋಡುವಿರಿ—ಎಂದು ಭಾವವು)

( ಸ–ಗಾ. ೮ ॥ )—

ಸ್ವಸ್ತಿ! ಸ್ವಸ್ತಿ! ಭವತ್ವನಾರತಮಪಿ ಸ್ವಸ್ತ್ಯಸ್ತು ನಿತ್ಯಂ ಸತಾಂ
ವಿಷ್ಣೋಸ್ಸದ್ಗುಣಸಾಗರಸ್ಯ ಸುಗುಣಾನ್ ಗಾಯನ್ತಿ ನೃತ್ಯನ್ತಿ ತೇ ।
ಭೂಮ್ಯಾಮತ್ರ ಮಹಾಶಯಾಸ್ತು ಪರಿತಃ! ಪಾಪಂ ಪ್ರಣಷ್ಟಂ ಸ್ವಯಂ!
ನೈವ ಸ್ಯಾದಿಹ ನಾರಕಂ ! ನ ಚ ಯಮೋ ! ನಶ್ಯೇತ್ ಕಲಿಃ ಪಶ್ಯತ ॥

ತಾ|| ಸಮುದ್ರದಂತೆ ಗಂಭೀರಸ್ವಭಾವನಾಗಿಯೂ, ನೀಲವರ್ಣನಾಗಿಯೂ ಅಪರಿಚ್ಛಿನ್ನಮಹಿಮನಾದ ಸರ್ವೇಶ್ವರನ ಅನುಗ್ರಹಕ್ಕೆ ಪಾತ್ರರಾದ ಭಾಗವತರು ಈ ಲೋಕದಲ್ಲಿ ಅಪರಿಮಿತಸಂಖ್ಯಾಕರಾಗಿ ಬಂದು ನೇರಿ ಭಗವದ್ಗುಣಾನುಭವ ರೂಪವಾದ ಗಾನವಂ ಮಾಡಿ ಸಂಭ್ರಮದಿಂದ ನರ್ತನದೊಡನೆ ಎಲ್ಲೆಲ್ಲಿಯೂ ಸಂಚರಿಸುತ್ತಿರುವುದನ್ನು ನಾವು ಕಂಡೆವು ಅವಿದ್ಯಾದಿರೂಪವಾದ ಮಹಾಶಾಪವು (ಚೇತನರಿಗೆ ಅಧೋಗತಿಯನ್ನು ಉಂಟುಮಾಡುತ್ತಿದ್ದುದು) ಈಗ ನಷ್ಟವಾಯಿತು. ಪಾಪಿಗಳನ್ನು ಹಿಂಸಿಸುವ ನರಕಗಳೆಲ್ಲಾ (ಅಲ್ಲಿಗೆ ಯಾರೂ ಹೋಗದೆ ಇರುವುದ ರಿಂದ) ಶಿಥಿಲವಾದುವು. ಯಮನಿಗೆ ಈ ಲೀಲಾವಿಭೂತಿಯಲ್ಲಿ ಕರ್ತವ್ಯಾಂಶವೇ ಇಲ್ಲ ಕಲಿಯುಗದ ಕಾಲದೋಷವೂ ನಿಶ್ಶೇಷವಾಗಿ ನಷ್ಟವಾಗಿಹೋಗುವುದು ನೀವೇ ಪ್ರತ್ಯಕ್ಷವಾಗಿ ಕಾಣುವಿರಿ— (ಎಂದು ಶ್ರೀ ಶಠಾರಿಮುನಿವರ್ಯರ ಚಿತ್ತದಲ್ಲಿ ಇದೆಲ್ಲಾ ಅನುಭವದ ಭಾವನೆಯಿಂದ ಭವಿಷ್ಯದರ್ಥಸೂಚಕ).

(೨) ಕಣ್ಡೋಮ್ ಕಣ್ಡೋಮ್ ಕಣ್ಡೋಮ್

ಕಣ್ಣುಕ್ಕಿನಿಯನ ಕಣ್ಡೋಮ್,

ತೊಣ್ಡೀರೆಲ್ಲೀರುಮ್ ವಾರೀರ್ ತೊಳುದುತೊಳುದು

ನಿನ್ಱಾರ್‌ತ್ತುಮ್,

ವಣ್ಡಾರ್ ತಣ್ಣಮ್‌ತುೞಾಯಾನ್ ಮಾದವನ್

ಪೂದಙ್ಗಳ್ ಮಣ್ಮೇಲ್,

ಪಣ್‌ತಾನ್ ಪಾಡಿನಿನ್ಱಾಡಿ ಪ್ಪರನ್ದು ತಿರಿಕಿನ್ಱನವೇ.

ಪ್ರ|| ವಣ್ಡು–ಭ್ರಮರಗಳಿಂದ, ಆರ್–ಪೂರ್ಣವಾದ, ತಣ್ ಅಮ್–ಶೀತಳ ವಾಗಿಯೂ ರಮ್ಯವಾಗಿಯೂ ಇರುವ, ತುೞಾಯಾನ್ – ತುಳಸೀಮಾಲೆಯನ್ನು ಧರಿಸಿರುವ, ಮಾದವನ್ – ಲಕ್ಷ್ಮೀವಲ್ಲಭನಾದ ಸರ್ವೇಶ್ವರನನ್ನು ಕುರಿತು, ಪೂದಙ್ಗಳ್–ದಾಸಭೂತರಾದ ಚೇತನರು, ಮಣ್ಮೇಲ್ – ಈ ಭೂಮಿಯಮೇಲೆ, ಪಣ್‌ತಾನ್–ಗಾನವು ಚೆನ್ನಾಗಿ ಪ್ರಕಾಶಿಸುವಂತೆ, ನಿನ್ಱುಪಾಡಿ–ನಿಂತು ಹಾಡಿ, ಆಡಿ–(ಪ್ರೇಮಾತಿಶಯದಿಂದ) ನರ್ತನಮಾಡಿ, ಪರನ್ದು–ಎಲ್ಲಾಕಡೆಗಳಲ್ಲೂ ವ್ಯಾಪಿಸಿ, ತಿರಿಕಿನ್ಱನ–ಸಂಚರಿಸುತ್ತಿದಾರೆ. ಕಣ್ಣುಕ್ಕು–ನಮ್ಮ ಕಣ್ಣಿಗೆ, ಇನಿಯನ–ಭೋಗ್ಯ ವಾದ ಸಮೃದ್ಧಿಗಳನ್ನು, ಕಣ್ಡೋಮ್–ಕಂಡೆವು. ಕಣ್ಡೋಮ್ ಕಣ್ಡೋಮ್ ಕಣ್ಡೋಮ್ – (ಕಂಡೆವು ಕಂಡೆವು ಕಂಡೆವು) ನಿರನ್ತರವಾಗಿ ಕಂಡು ಅನುಭವಿಸಿ

ದೆವು ತೊೞುದು ತೊೞುದು–ಹೀಗೆ ಪ್ರೀತಿಪರವಶರಾಗಿ ನಿರನ್ತರವಾಗಿ ಆ ಸರ್ವೇಶ್ವರನ ಸೇವೆಯಂಮಾಡಿ, ನಿನ್ರು–ನಿಂತು, ಆರ್ತ್ತುಮ್–ಹರ್ಷದೊಡನೆ ಕೋಲಾಹಲವಂ ಮಾಡೋಣ ತೊಣ್ಡೀರ್–ಭಕ್ತವರ್ಯರೇ !, ಎಲ್ಲೀರುಮ್ವಾರೀರ್ ಎಲ್ಲರೂ ಬನ್ನಿರಿ

( ಸ–ಗಾ–ರ || )—

ಭಕ್ತಾ ಭೂಮಿತಲೇಽತ್ರ ದಿವ್ಯತುಲಸೀಮಾಲಾಞ್ಚಿತಂ ಮಾಧವಂ
ಗಾಯನ್ತ್ಯೇವ ಹಿ ನರ್ತನ್ತೈಶ್ಚ ಪರಿತಸ್ಸಞ್ಚಾರಶೀಲಾ ಅಪಿ |
ದೃಷ್ಟಂ ದೃಷ್ಟಮಿದಂ ಹಿ ದೃಷ್ಟಮತುಲಂ ಭೋಗ್ಯಂ ಸಮೃದ್ಧಂ ಪರಂ
ತಂ ನನ್ತುಂ ಚ ಪುನಃ ಪುನಃ ಪ್ರಥಯಿತುಂ ಭಕ್ತಾಸ್ಸಮಾಗಚ್ಛತ ||

ತಾ|| ದಿವ್ಯತುಲಸೀಮಾಲಾಧರನಾದ ಮಾಧವನನ್ನು ಕುರಿತು ದಾಸಭೂತರಾದ ಚೇತನರೆಲ್ಲರೂ ಈ ಭೂಲೋಕದಲ್ಲಿ ಗಾನವಂಮಾಡಿ ನರ್ತನಮಾಡುತ್ತ, ಸರ್ವತ್ರ ಸಂಚರಿಸುತ್ತಿದಾರೆ ನಮ್ಮ ದೃಷ್ಟಿಗೆ ಭೋಗ್ಯವಾದ ಸಕಲ ಸಮೃತ್ಸಮೃದ್ಧಿಗಳನ್ನೂ ನಾವು ಕಂಡೆವು, ವಾಸ್ತವವಾಗಿ ನಿರನ್ತರವಾಗಿ ಕಂಡು ಕಂಡು ಕಂಡು ಅನುಭವಿಸುತ್ತಿದೇವೆ ಹೀಗೆಯೇ ಪ್ರೀತಿಪರವಶರಾಗಿ ನಾವೆಲ್ಲರೂ ನಿರನ್ತರವಾಗಿ ಅವನ ಸೇವೆಯಂಮಾಡಿ ಹರ್ಷದಿಂದ ಕೋಲಾಹಲವಂ ಮಾಡೋಣ! ಭಕ್ತಾಗ್ರೇಸರರೇ! ನೀವೆಲ್ಲರೂ ಬನ್ನಿರಿ (ಈಪ್ರಕಾರ ತಮ್ಮ ಅನುಭವಗಳನ್ನು ಭಾವಿಸಿ ಭಕ್ತರನ್ನು ಆಹ್ವಾನಮಾಡುತ್ತಾರೆ)

(೩) ತಿರಿಯುಮ್ ಕಲಿಯುಗಮ್ ನೀಙ್ಗಿ ತ್ತೇವರ್ಕಳ್
ತಾಮುಮ್ಪುಕುನ್ದು,
ಪೆರಿಯಕಿತಯುಗಮ್ ಪತ್ರಿ ಪ್ಪೇರಿನ್ಬವೆಳ್ಳಮ್ ಪೆರುಕ,
ಕರಿಯಮುಕಿಲ್ವಣ್ಣನೆಮ್ಮಾನ್ ಕಡಲ್ವಣ್ಣನ್ಪೂದಙ್ಗಳ್
ಮೇನ್ಮೇಲ್,
ಇರಿಯ ಪ್ಪುಕುನ್ದಿಶೈಪಾಡಿ ಎಙ್ಗುಮಿಡಙ್ಕೊಣ್ಡನವೇ

ಪ್ರ|| ತಿರಿಯುಮ್ - (ಚೇತನರ ಸ್ವಭಾವವು) ವ್ಯತ್ಯಾಸವನ್ನು ಹೊಂದುವಂತೆ ಮಾಡುವ, ಕಲಿಯುಗಮ್ - ಕಲಿಯುಗವು, ನೀಙ್ಗ-ಶೀಘ್ರವಾಗಿ ನಾಶಹೊಂದಿ, ತೇವರ್‌ಕಳ್-ದಿವ್ಯಸೂರಿಗಳೂ, ತಾಮುಮ್-ತಾವೇ, ಪುಕುನ್ದು-(ಈ ಲೋಕದಲ್ಲಿ) ಪ್ರವೇಶಿಸಿ, ಪೆರಿಯ-(ಯುಗಾನ್ತರ ವಿಚ್ಛೇದವಿಲ್ಲದೆ) ಏಕಾಕಾರವಾಗಿ ಪ್ರವರ್ಧಮಾನವಾದ, ಕಿತಯುಗಮ್-ಕೃತಯುಗವು, ಪತ್ತಿ-ಸರ್ವತ್ರವ್ಯಾಪಿಸಿ, ಪೇರಿನ್ಬವೆಳ್ಳಮ್ - (ಭಗವದನುಭವದಿಂದ ಉಂಟಾದ) ಅಪರಿಚ್ಛಿನ್ನಾನನ್ದ ಸಮುದ್ರವು, ಪೆರುಕ-ಉತ್ಕಟ ಪ್ರವಾಹರೂಪವಾಗಿ ಹರಿಯುವಂತೆ, ಕರಿಯ ಮುಕಿಲ್ ವಣ್ಣನ್ - ನೀಲಮೇಘಶ್ಯಾಮವರ್ಣನಾದ, ಎಮ್ಮಾನ್ - ನಮ್ಮ ಸ್ವಾಮಿಯಾದ, ಕಡಲ್‌ವಣ್ಣನ್- ಸಮುದ್ರದಂತೆ ಗಂಭೀರಸ್ವಭಾವನಾಗಿ ಅನವಧಿಕ ಕಲ್ಯಾಣಗುಣ ಭರಿತನಾದ ಸರ್ವೇಶ್ವರನ, ಪೂದಙ್ಗಳ್-ದಾಸಭೂತರಾದ ಭಾಗವತರು, ಮಣ್ಮೇಲ್ -ಈ ಭೂಮಿಯಮೇಲೆ, ಇರಿಯ-ಪ್ರೀತಿ ಕೋಲಾಹಲವುಂಟಾಗುವಂತೆ, ಪುಕುನ್ದು-ಪ್ರವೇಶಿಸಿ, ಇಶೈಪಾಡಿ-(ಹರ್ಷದಿಂದ) ಗೀತಗಳನ್ನು ಹಾಡಿ, ಎಙ್ಗುಮ್-ಸರ್ವ ದಿಕ್ಕುಗಳಲ್ಲೂ, ಇಡಮ್‌ಕೊಣ್ಡನ-ವ್ಯಾಪಿಸಿ ಸಂಚರಿಸುತ್ತಿದಾರೆ (ಆದುದರಿಂದ ನೀವೆಲ್ಲರೂ ಬನ್ನಿರಿ—ಎಂದು ಆಹ್ವಾನಮಾಡುವಂತೆ ಭಾವವು).

( ಸ-ಗಾ-ರ || )—

**ಶೀಲವ್ಯತ್ಯಯಕಾರಿ ತತ್ಕಲಿಯುಗಂ ನಷ್ಟಂ ಸ್ವಯಂ ಸೂರಯ-**
**ಸ್ಸರ್ವೇ ಚಾತ್ರ ಭುವಿ ಪ್ರವಿಶ್ಯ ಚ ಮಹದ್ದಿವ್ಯಂ ಯುಗಂ ಸಂಶ್ರಿತಾಃ |**
**ಪ್ರಖ್ಯಾತಂ ಕೃತಮೇವ ಮೋದಭರಿತಾ ನೀಲಾಬ್ದವರ್ಣಂ ಹರಿಂ**
**ತಂ ನಾಥಂ ಗುಣಸಾಗರಂ ಹಿ ಪರಿತೋ ಗಾಯನ್ತಿ ಭಕ್ತಾ ಭುವಿ ||**

ತಾ|| ಚೇತನರ ಶೀಲವನ್ನೆಲ್ಲಾ ವ್ಯತ್ಯಾಸಪಡಿಸುವ ದುಷ್ಟವಾದ ಕಲಿಯುಗವು ನಷ್ಟವಾಗಿ, ದಿವ್ಯಸೂರಿಗಳೂ ಕೂಡ ಈ ಲೋಕದಲ್ಲಿ ಪ್ರವೇಶಿಸಿ ಅವಿಚ್ಛಿನ್ನವಾದ ಕೃತಯುಗವು ಬೆಳೆಯುವಂತೆಮಾಡಿ, ಭಗವದನುಭವದಿಂದ ಅಪರಿಚ್ಛಿನ್ನವಾದ ಆನನ್ದಸಮುದ್ರವು ಅತ್ಯುತ್ಕಟವಾಗಿ ಪ್ರವಹಿಸುವಂತೆ—ನೀಲಮೇಘಶ್ಯಾಮನಾದ (ಸಕಲ ಕಲ್ಯಾಣಗುಣನಿಧಿಯಾದ) ನಮ್ಮ ಸ್ವಾಮಿಯ—ದಾಸಭೂತರಾದ ಭಾಗವತರು ಈ ಭೂಮಿಯಮೇಲೆ ಅತ್ಯನ್ತ ಕೋಲಾಹಲದಿಂದ ಗಾನಮಾಡುತ್ತ ಸರ್ವ ದಿಕ್ಕುಗಳಲ್ಲೂ ಸಂಚರಿಸುತ್ತಿದಾರೆ. ಆದುದರಿಂದ ನೀವೆಲ್ಲರೂ ಶೀಘ್ರವಾಗಿ ಬನ್ನಿರಿ—ಎಂದು ತಾತ್ಪರ್ಯ.

(೪) ಇಡಙ್ಗೊಳ್ ಶಮಯತ್ತೈಯೆಲ್ಲಾಮೆಡುತ್ತು
ಕ್ಕಳೈವನಪ್ಪೋಲೇ
ತಡಙ್ಗಡಲ್‌ಪಳ್ಳಿ ಪ್ಪೆರುಮಾ೯ತನ್ನುಡೈ
ಪ್ಪೂದಙ್ಗಳೇಯಾಯ್,
ಕಿಡನ್ದುಮಿರುನ್ದುಮೆೞುನ್ದುಮ್ ಕೀದಮ್ ಪಲಪಲಪಾಡಿ,
ನಡನ್ದುಮ್ ಪರನ್ದುಮ್ ಕುನಿತ್ತುಮ್ ನಾಟಕಮ್
ಶೆಯ್‌ಕಿನ್ಱನವೇ.

ಪ್ರ॥ ಇಡಙ್ಗೊಳ್ - ಸರ್ವತ್ರ ವ್ಯಾಪಿಸತಕ್ಕ, ಶಮಯತ್ತೈ – ದುರ್ಮತಗಳನ್ನು, ಎಲ್ಲಾಮ್-(ಸವಾಸನವಾಗಿ) ಎಲ್ಲವನ್ನೂ, ಎಡುತ್ತು-ನಿರ್ಮೂಲಮಾಡಿ, ಕಳೈವನಪೋಲೇ-ನಾಶಪಡಿಸುವಂತೆ, ತಡಮ್‌ಕಡಲ್‌ಪಳ್ಳಿ – ವಿಶಾಲವಾದ ಕ್ಷೀರ ಸಮುದ್ರದಲ್ಲಿ ಶಯನಮಾಡಿರುವ, ಪೆರುಮಾ೯ ತನ್ನುಡೈ–ಸರ್ವೇಶ್ವರನ ಗುಣಾನುಭವದಲ್ಲಿ ಮಗ್ನರಾದ, ಪೂದಙ್ಗಳೇಯಾಯ್ – ದಾಸಭೂತರಾದ ಭಾಗವತರೇ ಸರ್ವರೂ ಆಗಿ, ಕಿಡನ್ದುಮ್-ಆಯಾಪ್ರದೇಶಗಳಲ್ಲಿ ಸರ್ವತ್ರ ಶಯನಮಾಡಿಯೂ, ಇರುನ್ದುಮ್ – ಕುಳಿತುಕೊಂಡೂ, ಎೞುನ್ದುಮ್ – ನಿಂತುಕೊಂಡೂ, ಪಲಪಲ ಕೀದಮ್‌ಪಾಡಿ–ಅನೇಕ ಗೀತಗಳನ್ನು ಹಾಡಿ, ನಡನ್ದುಮ್-(ದರ್ಶನೀಯರಾಗಿ) ಸರ್ವತ್ರ ಸಂಚರಿಸಿಯೂ, ಪಱನ್ದುಮ್-ಅತಿ ಹರ್ಷದಿಂದ (ಗಗನದಲ್ಲಿ) ಮೇಲೆ ಹಾರಿಯೂ, ಕುನಿತ್ತುಮ್-ನರ್ತನಮಾಡಿಯೂ, ನಾಟಕಮ್ ಶೆಯ್‌ಕಿನ್ಱನ– (ಈ ಪ್ರಕಾರ) ನಾಟ್ಯವಾಡುತ್ತಿದಾರೆ. (ಆದುದರಿಂದ ಎಲ್ಲರೂ ಬನ್ನಿರಿ—ಎಂದು ಭಾವವು.)

( ಸ–ಗಾ–ರ ‖ )—

ಸರ್ವತ್ರ ಪ್ರತತಾಂ ಚ ದುರ್ಮತತತಿಂ ಚೋನ್ಮೂಲಯನ್ತೋ ಯಥಾ
ತೇಽಮೀ ಭಕ್ತಗಣಾಸ್ತಥಾಽಬ್ಧಿಶಯನಂ ನಾಥಂ ಸ್ತುವನ್ತೋ ಹರಿಮ್।
ಸರ್ವತ್ರಾಪಿ ಭವನ್ತಿ ಹನ್ತ ! ಶಯಿತಾಸ್ತತ್ರೋಪವಿಷ್ಟಾಸ್ಸ್ಥಿತಾ
ಗೀತೈಸ್ತೈರ್ವಿವಿಧೈಶ್ಚರನ್ತಿ ಪರಿತೋ ನೃತ್ತೈಶ್ಚ ನಾಟ್ಯಾನ್ವಿತಾಃ ‖

ತಾ॥ ಸರ್ವತ್ರ ವ್ಯಾಪಿಸುವ ದುರ್ಮತಗಳನ್ನೆಲ್ಲಾ ನಿರ್ಮೂಲಮಾಡುವಂತೆ, ಕ್ಷೀರಾಬ್ಧಿಶಾಯಿಯಾದ ಸರ್ವೇಶ್ವರನ ದಾಸಭೂತರಾದ ಭಾಗವತರೇ ಸರ್ವತ್ರ

ವ್ಯಾಪಿಸಿ ಶಯನೋಪವೇಶ ಸ್ಥಿತಿಗಳುಳ್ಳವರಾಗಿ, ನಾನಾವಿಧ ಗಾನಗಳೊಡನೆ ಸಂಚರಿಸಿ, ಹರ್ಷಪರವಶರಾಗಿ ಮೇಲಕ್ಕೆ ಹಾರುತ್ತ, ನರ್ತನಮಾಡುತ್ತಲೂ ನಾಟ್ಯ ವಾಡುತ್ತಿದಾರೆ (ಆದುದರಿಂದ ಈ ಸಮಯದಲ್ಲಿ ನೀವುಗಳೆಲ್ಲರೂ ಬಂದು ಸೇರಿರಿ—ಎಂದು ಭಕ್ತರನ್ನು ಆಹ್ವಾನಮಾಡುವ ಭಾವವು)

(೫) ಶೆಯ್‍ಕಿನ್ರದೆ‍ನ್ ಕಣ್ಣುಕ್ಕೊನ್ರೇ ಒಕ್ಕಿನ್ರದಿವ್ವುಲಕತ್ತು,
ವೈಕುನ್ದರ್ ಪೂದಙ್ಗಳೇಯಾಯ್
ಮಾಯತ್ತಿನಾಲೆಙ್ಗುಮ್ ಮನ್ನಿ,
ಐಯಮೊನ್ರಿಲ್ಲೈ ಯರಕ್ಕರಶುರರ್ ಪಿಱನ್ದೀರುಳ್ಳೀರೇಲ್,
ಉಯ್ಯುಮ್‍ವಕ್ಕೈಯಿಲ್ಲೈ ತೊಣ್ಡೀರೊಳ್ಳಿ
ಪೆಯರ್‍ತ್ತಿಡುಮ್ ಕೊನ್ರೇ.

ಪ್ರ|| ಶೆಯ್‍ಕಿನ್ರದು-(ಇವರುಗಳು) ಮಾಡುತ್ತಿರುವುದು, ಎನ್‍ಕಣ್ಣುಕ್ಕು-ನನ್ನ ದೃಷ್ಟಿಗೆ, ಒನ್ರೇ ಒಕ್ಕಿನ್ರದು-ಒಂದೇ ಅಪರಿಮಿತವಾಗಿರುವಂತೆ ಈಗ ತೋರುತ್ತಿದೆ. (ಏನೆಂದರೆ-) ಇವ್ವುಲಕತ್ತು-(ನಾಸ್ತಿಕ್ಯಭೂಯಿಷ್ಠವಾಗಿದ್ದ) ಈ ಲೋಕದಲ್ಲಿ, ವೈಕುನ್ದರ್‍ಪೂದಙ್ಗಳೇ-(ಈಗ ಸರ್ವತ್ರ) ಶ್ರೀ ವೈಕುಣ್ಠನಾಥನ ದಾಸಭೂತರಾದ ಭಾಗವತರೇ, ಆಯ್-ಸರ್ವರೂ ಆಗಿ, ಮಾಯತ್ತಿನಾಲ್ - ಆಶ್ಚರ್ಯಕರ ವೃತ್ತಿಗಳಿಂದ, ಎಙ್ಗುಮ್ ಮನ್ನಿ - ಸರ್ವಪ್ರದೇಶಗಳಲ್ಲೂ ನಿರನ್ತರವಾಸವಂ ಮಾಡಿ, ಅರಕ್ಕರ್ ಅಶುರರ್-ರಾಕ್ಷಸರಾಗಿಯೂ ಮತ್ತು ಅಸುರರಾಗಿಯೂ, ಪಿಱನ್ದೀರ್ ಉಳ್ಳೀರೇಲ್ - ಹುಟ್ಟಿದವರು ನೀವು ಯಾರು ಯಾರು ಇದ್ದಾಗ್ಯೂ, ತೊಣ್ಡೀರ್ - (ಭಗವನ್ತನನ್ನು ಬಿಟ್ಟು) ಇತರ ವಿಷಯಚಪಲರಾಗಿರುವವರೇ!, ಕೊನ್ರು-(ನಿಮ್ಮನ್ನೆಲ್ಲಾ) ಧ್ವಂಸಮಾಡಿ, ಊೞಿಪೆಯರ್‍ತ್ತಿಡುಮ್-ಕಲಿಯುಗವನ್ನು ಕೃತಯುಗವನ್ನಾಗಿ ಮಾಡಿ ಕಾಲವ್ಯತ್ಯಯವನ್ನು ಮಾಡುವಂತೆ ಕಾಣುತ್ತಿದೆ ಉಯ್ಯುಮ್‍ವಕ್ಕೈ ಇಲ್ಲೈ-(ಆದುದರಿಂದ) ನಿಮಗೆ ಬದುಕುವ ದಾರಿಯೇ ಇಲ್ಲ. ಐಯಮ್-ಸಂದೇಹವು, ಒನ್ರು ಇಲ್ಲೈ-ಒಂದೂ ಇಲ್ಲ. (ಆದುದರಿಂದ ನೀವೂ ಭಗವದ್ಭಕ್ತರಾಗಿ ಉಜ್ಜೀವಿಸಿರಿ-ಎಂದು ಭಾವವು.)

( ಸ-ಗಾ-ರ || )—

**ತತ್ತ್ವಂ ಭಾತಿ ಹಿ ಪಶ್ಯತೋ ಮಮ ಶುಭಂ ತ್ವೇಕಂ ಪರಂ ಸರ್ವತೋ**
**ವೈಕುಣ್ಠಸ್ಯ ಹರೇಸ್ತು ಭಕ್ತನಿವಹಾ ಆಶ್ಚರ್ಯವೃತ್ತ್ಯಾ ಸ್ವಯಮ್ |**
**ಹತ್ವಾ ಚಾಪ್ಯಸುರಾಂಸ್ತು ವೋ ಭುವಿ ಭವಾನ್ ಪಾಪಾನ್ ವಿಪರ್ಯಾಸತಃ**
**ಕಾಲಂ ಚಾತ್ರ ಹಿ ಭೇದಯನ್ತಿ! ಭವತಾಂ ನಾತ್ರ ಸ್ಥಿತಿಸ್ಸ್ಯಾದ್ಧ್ರುವಮ್||**

ತಾ|| ಈಗ ನಾನು ಸರ್ವತ್ರ ಪರಿಶೀಲಿಸಿನೋಡಿದರೆ ಒಂದೇ ತತ್ತ್ವವು ನನಗೆ ಕಾಣುತ್ತಿದೆ. ಅದೇನೆಂದರೆ— ಈ ಲೋಕದಲ್ಲೆಲ್ಲಾ ಈಗ ಸರ್ವತ್ರ ಶ್ರೀ ವೈಕುಣ್ಠನಾಥನ ಭಕ್ತರೇ ವ್ಯಾಪಿಸಿ ಇರುವುದರಿಂದ ಇವರು ತಮ್ಮ ಆಶ್ಚರ್ಯಕರವಾದ ವ್ಯಾಪಾರಗಳಿಂದ ಸರ್ವ ದಿಕ್ಕುಗಳಲ್ಲೂ ರಾಕ್ಷಸರನ್ನೂ ಅಸುರರನ್ನೂ ಧ್ವಂಸ ಮಾಡುತ್ತಿದಾರೆ. ಎಲೈ ವಿಷಯಲಂಪಟರಾದ ನಾಸ್ತಿಕರೇ! ನಿಮ್ಮನ್ನೆಲ್ಲಾ ಇವರು ಕೊಂದುಬಿಟ್ಟು ಕಲಿಯುಗವನ್ನು ಕೃತಯುಗವಾಗುವಂತೆ ಮಾಡುವರು. ನಿಮಗೆ ಬದುಕುವ ದಾರಿಯೇ ತೋರುವುದಿಲ್ಲ. ಇದು ನಿಸ್ಸಂಶಯವಾದ ಮಾತು. (ಆದುದರಿಂದ ನೀವುಗಳೆಲ್ಲರೂ ನಿಮ್ಮ ನಾಸ್ತಿಕ್ಯವನ್ನು ಬಿಟ್ಟು ಆಸ್ತಿಕರಾಗಿ ಉಜ್ಜೀವಿಸಿರಿ—ಎಂದುಭಾವವು)

(೬) ಕೊನ್ಱುಯಿರುಣ್ಣುಮ್ ವಿಶಾದಿಪಕೈಪಶಿ ತೀಯನವೆಲ್ಲಾಮ್,
ನಿನ್ಱಿವ್ವುಲಕಿಲ್ ಕಡಿವಾನ್ ನೇಮಿಪ್ಪಿರಾನ್ ತಮರ್
ಪೋನ್ದಾರ್,
ನನ್ಱಿಶೈಪಾಡಿಯುಮ್ ತುಳ್ಳಿಯಾಡಿಯುಮ್
ಞಾಲಮ್ಪರನ್ದಾರ್,
ಶೆನ್ಱು ತೊೞುದುಯ್ಮ್ಮಿನ್‌ತೊಣ್ಡೀರ್ ಶಿನ್ದೈಯೈ
ಚ್ಚೆನ್ನಿಱುತ್ತಿಯೇ.

ಪ್ರ|| ಕೊನ್ಱು – ಕೊಂದು, ಉಯಿರ್ ಉಣ್ಣುಮ್-ಪ್ರಾಣವನ್ನು ತಿನ್ನುವ, ವಿಶಾದಿ-ವ್ಯಾಧಿಯು, ಪಕೈ-ಶತ್ರುವು, ಪಶಿ – ಹಸಿವು (ಮೊದಲಾದ), ತೀಯನ ಎಲ್ಲಾಮ್–ಕ್ರೂರವಾದುವುಗಳನ್ನೆಲ್ಲಾ, ಇ ಉಲಕಿಲ್–ಈ ಲೋಕದಲ್ಲಿ, ನಿನ್ಱು-ನಿಂತು, ಕಡಿವಾನ್–ಧ್ವಂಸಮಾಡುವುದಕ್ಕಾಗಿ, ನೇಮಿಪ್ಪಿರಾನ್–ಚಕ್ರಧಾರಿಯಾದ ಸರ್ವೇಶ್ವರನ, ತಮರ್–ಭಕ್ತರು, ಪೋನ್ದಾರ್–ಹೋಗುತ್ತಿರುವವರಾಗಿ, ನನ್ಱು ಇಶೈಪಾಡಿಯುಮ್-ದಿವ್ಯವಾದಗೀತಗಳನ್ನು ಹಾಡಿಯೂ, ತುಳ್ಳಿಆಡಿಯುಮ್-ಮೇಲೆ

ಹಾರುತ್ತ ನರ್ತನವಮಾಡಿಯೂ, ಞಾಲಮ್-ಭೂಮಿಯಲ್ಲೆಲ್ಲಾ, ಪರನ್ದಾರ್‌ಕಳ್-ವ್ಯಾಪಿಸಿದರು ತೊಣ್ಡೀರ್-ಇತರ ವಿಷಯಚಪಲರಾದ ನೀವು, ಶಿನ್ದೈಯೈ-ಅನ್ಯಪರವಾದ ನಿಮ್ಮ ಮನಸ್ಸನ್ನು, ಶೆಮ್‌ನಿಱುತ್ತಿ-ಉಚಿತವಾದ ಭಾಗವತರ ವಿಷಯದಲ್ಲಿ ನಿಲ್ಲಿಸಿ, ಶೆನ್ಱು-ಅವರ ಸನ್ನಿಧಿಗೆ ಹೋಗಿ, ತೊೞುದು-ಅವರನ್ನು ಸೇವಿಸಿ, ಉಯ್ಮ್ಮಿನ್-ಉಜ್ಜೀವಿಸಿರಿ. (ಅವರೇ ನಿಮಗೆ ಉತ್ತಾರಕರೆಂದು ಭಾವವು.)

( ಶ-ಗಾ-ರ || )—

ಹತ್ವಾ ಪ್ರಾಣವಿನಾಶಕಾಃ ಕಿಲ ಮಹಾವ್ಯಾಧಿಶ್ಚ ವೈರೀ ಕ್ಷುಧಾ
ಚೇತಿ ಕ್ರೂರಗಣಾ ಭುವೀತಿ ಹಿ ಹರೇಶ್ಶ್ರೀಚಕ್ರಪಾಣೇರ್ವಿಭೋಃ ।
ಭಕ್ತಾಸ್ತದ್ಗುಣಗಾನನೃತ್ತಸಹಿತಾಸ್ಸರ್ವತ್ರ ಸಞ್ಚಾರಿಣೋ
ದೃಶ್ಯನ್ತೇ ಚಪಲಾಸ್ತು ಯೂಯಮಪಿ ತಾನ್ ನತ್ವಾಸ್ತ ಚೋಜ್ಜೀವಿತಾಃ ॥

ತಾ|| ಪ್ರಾಣವಿನಾಶಕಗಳಾದ ಮಹಾವ್ಯಾಧಿ, ವೈರಿ, ಕ್ಷುತ್ತು—ಮುಂತಾದ ಕ್ರೂರವಾದುವುಗಳನ್ನೆಲ್ಲಾ ಧ್ವಂಸಮಾಡುವುದಕ್ಕಾಗಿ ಚಕ್ರಧಾರಿಯಾದ ಸರ್ವೇಶ್ವರನ ಭಕ್ತರು ಈ ಲೋಕದಲ್ಲಿ ಸರ್ವತ್ರ ಸಂಚರಿಸುತ್ತ—ದಿವ್ಯಗಾನವಂ ಮಾಡುತ್ತಲೂ, ಸಂಭ್ರಮದಿಂದ ಮೇಲಕ್ಕೆಹಾರಿ ನರ್ತನಮಾಡುತ್ತಲೂ, ಎಲ್ಲೆಲ್ಲಿಯೂ ವ್ಯಾಪಿಸಿ ಇದಾರೆ ದೇವತಾನ್ತರ—ವಿಷಯಾನ್ತರ-ಚಪಲರಾದ ನೀವುಗಳೆಲ್ಲರೂ ನಿಮ್ಮ ಚಪಲವಾದ ಮನಸ್ಸನ್ನು ಇನ್ತಹ ಭಾಗವತೋತ್ತಮರ ವಿಷಯದಲ್ಲಿ ದೃಢವಾಗಿ ನಿಲ್ಲಿಸಿ, ಅವರ ಸನ್ನಿಧಿಗೆಹೋಗಿ, ಅವರನ್ನೇ ಸೇವಿಸಿ ಉಜ್ಜೀವಿಸಿರಿ (ಅವರೊಡನೆ ಸೇರಿ ನೀವೂ ಭಗವದ್ಭಕ್ತರಾಗಿ ಉಜ್ಜೀವಿಸಿರಿ—ಎಂದು ತಾತ್ಪರ್ಯ)

(೭) ನಿಱುತ್ತಿ ನುಮ್ಮುಳ್ಳತ್ತುಕ್ಕೊಳ್ಳುಮ್
ದೆಯ್ವಙ್ಗಳುಮ್ಮೈ ಯುಯ್ಯಕ್ಕೊಳ್,
ಮಱುತ್ತುಮವನೋಡೇ ಕಣ್ಡೀರ್
ಮಾರ್ಕಣ್ಡೇಯನುಮ್ ಕರಿಯೇ,
ಕಱುತ್ತ ಮನಮೊನ್ಱುಮ್ ವೇಣ್ಡಾ
ಕಣ್ಣನಲ್ಲಾಲ್ ದೆಯ್ವಮಿಲ್ಲೈ,
ಇಱುಪ್ಪದೆಲ್ಲಾಮವನ್ ಮೂರ್ತ್ತಿಯಾಯವರ್ಕ್ಕೇ
ಯಿಱುಮಿನೇ.

ಪ್ರ|| ನುಮ್-ನಿಮ್ಮ ಉಳ್ಳತ್ತು-ಮನಸ್ಸಿನಲ್ಲಿ, ನಿಱುತ್ತಿ-ದೃಢವಾಗಿ ನಿಲ್ಲಿಸಿ, ಕೊಳ್ಳುಮ್-ನಿಮ್ಮನ್ನು ವಶೀಕರಿಸಿ ತಮಗೆ ಬೇಕಾದ ವಸ್ತುಗಳನ್ನು ಸ್ವೀಕರಿಸುವ ದೆಯ್ವಙ್ಗಳ್-ಇತರ ದೇವತೆಗಳು ಉಮ್ಮೈ-ನಿಮ್ಮನ್ನು, ಉಯ್ಯಕ್ಕೊಳ್ಳುಮ್-ಉಜ್ಜೀವಿಸುವಂತೆ ಮಾಡುವುದೂ, ಅವನೋಡೇ ವಱುತ್ತು-ತಮಗೂ ಫಲಪ್ರದತ್ವ ಶಕ್ತಿಯನ್ನು ಕೊಟ್ಟ ಸರ್ವೇಶ್ವರನೊಡನೆ ಹೋಗಿ ಸೇರಿಯಲ್ಲವೇ (ನಿಮ್ಮನ್ನು ಉಜ್ಜೀವಿಸುವಂತೆ ಮಾಡುವುದು. (ಇದಕ್ಕೆ) ಮಾರ್ಕಣ್ಡೇಯನುಮ್-ಮಾರ್ಕಂಡೇಯನೂ, ಕರಿ-ಸಾಕ್ಷಿಯಾಗಿದಾನೆಂಬುದನ್ನು, ಕಣ್ಡೀರ್ - ನೀವು ಕಂಡಿರಿ. (ಆದುದರಿಂದ) ಕಱುತ್ತ-ದೇವತಾನ್ತರ ಭಜನದಿಂದ ಮಲಿನವಾದ, ಮನಮ್-ಮನಸ್ಸು, ಒನ್ಱುಮ್‌ವೇಣ್ಡಾ-ಒಂದು ವಿಧವಾಗಿಯೂ ಬೇಕಾಗಿಲ್ಲ, (ಅನ್ತಹ ಮನಸ್ಸನ್ನು ಬಿಟ್ಟುಬಿಡಿರಿ). ಕಣ್ಣನಲ್ಲಾಲ್ ದೆಯ್ವಮಿಲ್ಲೈ-ಶ್ರೀಕೃಷ್ಣನನ್ನು ಹೊರತು ಬೇರೆ ಪರದೈವವೇ ಇಲ್ಲ. (ಆದುದರಿಂದ) ಇಱುಪ್ಪದುಮ್ ಎಲ್ಲಾಮ್ - ನಿತ್ಯ ನೈಮಿತ್ತಿಕಾದಿ ಕರ್ಮಗಳನ್ನೆಲ್ಲಾ, ಅವರ್ಮೂರ್ತ್ತಿಯಾಯವರ್ಕ್ಕೇ-ಅವನ ಮೂರ್ತಿಭೂತರಾದವರಿಗೇ (ಎಂದರೆ-ಅವರಿಗೆಲ್ಲಾ ಅನ್ತರ್ಯಾಮಿಯಾಗಿರುವ ಆ ಕೃಷ್ಣನಿಗೇ), ಇಱುಮಿನ್-ಸಮರ್ಪಿಸಿರಿ. (ಅಗ್ನೀನ್ದ್ರಾದಿ ದೇವತೆಗಳಿಗೆಲ್ಲಾ ಅನ್ತರ್ಯಾಮಿಯಾದ ಶ್ರೀಮನ್ನಾರಾಯಣನೇ ಸರ್ವಕರ್ಮ ಸಮಾರಾಧ್ಯನು-ಎಂದು ಭಾವವು)

( ಸ- ಗಾ-ರ || )—

ಯುಷ್ಮಾಕಂ ಹೃದಯಂ ಪ್ರವಿಶ್ಯ ಸುದೃಢಾ ಯಾ ದೇವತಾಸ್ತಾ ಅಪಿ
ಶ್ರೀಶಂ ಪ್ರಾಪ್ಯ ಫಲಪ್ರದಾಸ್ತದಿಹ ಸಾಕ್ಷ್ಯಾಯಸ್ತೇ ಮೃಕಣ್ಡ್ವಾತ್ಮಜಃ |
ದೃಷ್ಟ್ವೈವಂ ಬತ! ನಿಶ್ಚಿತೇ ಹಿ ಮಲಿನಂ ಮಾಽಸ್ತ್ವೇವ ಚಿತ್ತಂ ತು ವಃ!
ಕೃಷ್ಣಾನ್ನೈವ ಪರನ್ತು ದೈವಮಖಿಲಂ ತದ್ವಿಗ್ರಹೇಷ್ವರ್ಪ್ಯತಾಮ್ ||

ತಾ|| ನಿಮ್ಮ ಮನಸ್ಸನ್ನೆಲ್ಲಾ ದೃಢವಾಗಿ ವಶೀಕರಿಸಿ (ತಮ್ಮ ಇಷ್ಟಾರ್ಥಗಳನ್ನೆಲ್ಲಾ ಪಡೆಯುವ) ದೇವತಾನ್ತರಗಳೂ ಕೂಡ ನಿಮಗೆ ಫಲಪ್ರದವಾಗೋಣವು ಸರ್ವೇಶ್ವರನ ಮೂಲಕವಾಗಿಯೇ ಹೊರತು ಸ್ವತನ್ತ್ರವಾಗಿ ಅಲ್ಲ ಇದಕ್ಕೆ ಸಾಕ್ಷಿ ಮಾರ್ಕಂಡೇಯನೇ—ಎಂದು ನೀವು ಕಂಡಿರುತ್ತೀರಿ (ಮಾರ್ಕಂಡೇಯನಿಗೆ ರುದ್ರನು ವರವನ್ನು ಕೊಟ್ಟು ಇದ್ದಾಗ್ಯೂ ರಕ್ಷಿಸಲಾರದೆ ಶ್ರೀಮನ್ನಾರಾಯಣನನ್ನೇ ಆಶ್ರಯಿಸಿ ರಕ್ಷಿಸಲಿಲ್ಲವೆ?) ಆದುದರಿಂದ ನಿಮ್ಮ ಮನಸ್ಸನ್ನು ಚಂಚಲಪಡಿಸದೆ ಸರ್ವೇಶ್ವರನಾದ ಶ್ರೀಮನ್ನಾರಾಯಣನನ್ನೇ ಭಜಿಸಿರಿ. ಶ್ರೀಕೃಷ್ಣನಲ್ಲದೆ ಬೇರೆ ದೈವವೇ ಇಲ್ಲ. ಸರ್ವದೇವತೆಗಳಿಗೂ ಅನ್ತರ್ಯಾಮಿಯಾದ ಅವನೇ ಸರ್ವಕರ್ಮ

ಸಮಾರಾಧ್ಯನಾದುದರಿಂದ ನೀವು ಮಾಡುವ ನಿತ್ಯನೈಮಿತ್ತಿಕಾದಿ ಸಕಲ ಕರ್ಮಗಳನ್ನೂ ಅವನಲ್ಲೇ ಸಮರ್ಪಿಸಿ ಕೃತಾರ್ಥರಾಗಿರಿ.

(೮) ಇಱುಕ್ಕುಮಿಱೈಯಿಱುತ್ತುಣ್ಣ ವೆವ್ವುಲಕುಕ್ಕುಮ್
ತನ್ಮೂರ್ತ್ತಿ
ನಿಱುತ್ತಿನಾನ್ ದೆಯ್ವಙ್ಗಳಾಕ ವತ್ತೆಯ್ವನಾಯಕನ್ ತಾನೇ,
ಮಱುತ್ತಿರುಮಾರ್ವನವನ್ ತನ್ ಪೂದಙ್ಗಳ್ ಕೀದಙ್ಗಳ್ ಪಾಡಿ
ವೆಱುಪ್ಪಿನ್ಱಿ ಞಾಲತ್ತು ಮಿಕ್ಕಾರ್ ಮೇವಿ ತ್ತೊೞುದುಯ್ಮ್ಮಿನೀರೇ

ಪ್ರ|| ಇಱುಕ್ಕುಮ್-ಕರ್ತವ್ಯವಾದ, ಇಱೈ-ನಿತ್ಯನೈಮಿತ್ತಿಕ ಕರ್ಮಗಳನ್ನು, ಇಱುತ್ತು-ಸಮರ್ಪಿಸಿ, ಉಣ್ಣ-ಉಜ್ಜೀವಿಸುವುದಕ್ಕಾಗಿ, ಎವ್ವುಲಕುಕ್ಕುಮ್-ಎಲ್ಲಾ ಲೋಕಗಳಿಗೂ, ತನ್ಮೂರ್ತ್ತಿ-ತನ್ನ ಶರೀರಭೇದಗಳನ್ನೇ, ದೆಯ್ವಙ್ಗಳಾಕ ಆಯಾ ದೇವತೆಗಳೆಂದು, ನಿಱುತ್ತಿನಾನ್-ನಿಲ್ಲಿಸಿದವನು (ಸ್ಥಾಪಿಸಿದವನು), ಅತ್ತೆಯ್ವನಾಯಕನ್ ತಾನೇ – ಆ ಸರ್ವದೇವತಾನಾಯಕನಾದ ಶ್ರೀಕೃಷ್ಣನೇ ಅಲ್ಲವೇ! (ಆದುದರಿಂದ) ಮಱು-ಶ್ರೀವತ್ಸಚಿಹ್ನವನ್ನು, ತಿರುಮಾರ್ವನ್ – ವಕ್ಷಸ್ಥಲದಲ್ಲಿ ಧರಿಸಿರುವ, ಅವನ್ತನ್-ಅವನ, ಪೂದಙ್ಗಳ್ – ದಾಸಭೂತರಾದ ಭಾಗವತರು, ಕೀದಙ್ಗಳ್ಪಾಡಿ – ನಾನಾಗೀತಗಳನ್ನು ಹಾಡಿ, ಞಾಲತ್ತು – ಈ ಪ್ರಪಂಚದ ಸಾಂಸಾರಿಕವಾದ, ವೆಱುಪ್ಪು ಇನ್ಱಿ – ದುಃಖವು ಇಲ್ಲದಂತೆ, ಮಿಕ್ಕಾರ್ – ಸರ್ವೋತ್ಕೃಷ್ಟರಾಗಿ ಪ್ರಕಾಶಿಸುತ್ತಿದಾರೆ. ನೀರ್ – ನೀವುಗಳೂ, ಮೇವಿ – ಅವರನ್ನು ಆಶ್ರಯಿಸಿ, ತೊೞುದು ಉಯ್ಮ್ಮಿನ್-ಅವರನ್ನೇ ಸೇವಿಸಿ ಉಜ್ಜೀವಿಸಿರಿ. (ಅವರೊಡನೆ ಸೇರಿ ನೀವೂ ಭಗವದ್ಭಕ್ತರಾಗಿ ಉಜ್ಜೀವಿಸಿರಿ—ಎಂದು ಭಾವವು.)

( ಸ-ಗಾ-ರ || )—

ಕರ್ತವ್ಯಾಮಪಿ ಕೃತ್ಯಸನ್ತತಿಮಿಮಾಂ ದೇವಾ ಭಜನ್ತು ಸ್ವಯಂ
ಚಾರಾಧ್ಯಾ ಜಗತೀತಿ ಮೂರ್ತಿಸರಣಿಂ ಸ್ವೀಯಾಂ ಹರಿಸ್ಥಾಪಯತ್ |
ದೇವಾನಾಮಧಿದೇವ ಏವ ಜಯತಿ ಶ್ರೀವತ್ಸವಕ್ಷಾಶ್ಚ ತಂ
ಗೀತೈರ್ನೃತ್ತಯುತಾ ಭಜನ್ತಿ ವಿಮಲಾಸ್ತ್ವಂ ಪ್ರಾಪ್ಯ ಧನ್ಯಾಸ್ಸ್ಥಭೋಃ||

ತಾ|| ನಿತ್ಯನೈಮಿತ್ತಿಕಾದಿ ಸಕಲಕರ್ಮಗಳಿಗೂ ತನ್ನ ಶರೀರಾಂಶಭೂತರಾದ ದೇವತೆಗಳನ್ನೇ ಸಕಲಲೋಕಗಳಲ್ಲೂ ಆರಾಧ್ಯರಾಗಿ ತೋರುವಂತೆ, ಸರ್ವದೇವಾಧಿದೇವನಾದ ಅವನೇ ಸ್ಥಾಪಿಸಿ ಇರುತ್ತಾನೆ. ಆದುದರಿಂದ ಶ್ರೀವತ್ಸವಕ್ಷಸ್ಥಲನಾದ

ಆ ಸರ್ವೇಶ್ವರನ ದಾಸಭೂತರಾದ ಭಾಗವತರು ಅವನ ವಿಷಯದಲ್ಲಿ ನಾನಾವಿಧ ವಾದ ಕೀರ್ತನೆಗಳನ್ನು ಹಾಡಿ ಈ ಲೋಕದ ಸಾಂಸಾರಿಕ ದುಃಖಗನ್ಧವೂ ಇಲ್ಲ ದಂತೆ ಸರ್ವೋತ್ಕೃಷ್ಟರಾಗಿ ಪ್ರಕಾಶಿಸುತ್ತಿದಾರೆ. ನೀವುಗಳೂ ಅವರನ್ನೇ ಆಶ್ರಯಿಸಿ ಸೇವಿಸುತ್ತ, ಅವರಂತೆಯೇ ಶ್ರೀ ಭಗವದ್ಭಕ್ತರಾಗಿ ಉಜ್ಜೀವಿಸಿರಿ.

(೯) ಮೇವಿ ತ್ತೊೞುದುಯ್ಮಿನೀರ್‌ಕಳ್ ವೇದಪ್ಪುನಿದವಿರುಕ್ಕೈ,
ನಾವಿಲ್ ಕೊಣ್ಡುಚ್ಚುತರ್ತನ್ನೈ ಞಾನವಿದಿ ಪಿೞೈಯಾಮೇ,
ಪೂವಿಲ್ ಪುಕೈಯುಮ್ ವಿಳಕ್ಕುಮ್ ಶಾನ್ದಮುಮ್
ನೀರುಮ್ ಮಲಿನ್ದು,
ಮೇವಿ ತ್ತೊೞುಮಡಿಯಾರುಮ್ ಪಕವರುಮ್
ಮಿಕ್ಕದುಲಕೇ.

ಪ್ರ|| ವೇದಮ್-ವೇದದಲ್ಲಿ, ಪುನಿದ-ಪಾವನತಮವಾದ, ಇರುಕ್ಕೈ-ಶ್ರೀ ಪುರುಷಸೂಕ್ತನಾರಾಯಣಾನುವಾಕಾದಿ ಋಗ್ವಿಶೇಷಗಳನ್ನು, ನಾವಿಲ್‌ಕೊಣ್ಡು-ನಾಲಿಗೆಯಲ್ಲಿ ಧರಿಸುತ್ತ, (ಪಠಿಸುತ್ತ), ಞಾನವಿಧಿ-ಭಕ್ತಿರೂಪವಾದ ಜ್ಞಾನವನ್ನು ಪಡೆಯುವ ಶಾಸ್ತ್ರಮರ್ಯಾದೆಯು, ಪಿೞೈಯಾಮೇ-ತಪ್ಪದಂತೆ, ಪೂವಿಲ್-(ಆರಾಧ ನೋಪಕರಣವಾದ) ಪುಷ್ಪದೊಡನೆ, ಪುಕೈಯುಮ್-ಧೂಪವನ್ನೂ, ವಿಳಕ್ಕುಮ್-ದೀಪವನ್ನೂ, ಶಾನ್ದಮುಮ್-ಚನ್ದನವನ್ನೂ, ನೀರುಮ್-ಅಭಿಷೇಕಾದಿ ತೀರ್ಥ ವನ್ನೂ, ಮಲಿನ್ದು-ಪೂರ್ಣವಾಗಿ ಧರಿಸಿಕೊಂಡು ಬಂದು, ಅಚ್ಚುತರ್ತನ್ನೈ-ಅಚ್ಯುತನನ್ನೇ, ಮೇವಿ-ಅನನ್ಯಪ್ರಯೋಜನರಾಗಿ ಆಶ್ರಯಿಸಿ, ತೊೞುಮ್-ಆರಾಧಿಸಿ (ಸೇವಿಸಿ) ಕೃತಾರ್ಥರಾದ, ಅಡಿಯಾರುಮ್-ಶೇಷಭೂತರಾದ ಭಾಗವತ ರನ್ನೂ, ಪಕವರುಮ್-ಅವನ ಗುಣಾನುಭವದಲ್ಲಿ ಮಗ್ನರಾದ ಮುನಿವರ್ಯರನ್ನೂ, ಉಲಕು ಮಿಕ್ಕದು-ಈ ಲೋಕವು ಈಗ ಅಧಿಕವಾಗಿ ಪಡೆದಿರುತ್ತದೆ. (ಆದುದ ರಿಂದ) ಮೇವಿ-ಅವರನ್ನೇ ಆಶ್ರಯಿಸಿ, ತೊೞುದು-ಸೇವಿಸಿ, ನೀರ್-ನೀವುಗಳೂ, ಉಯ್ಮಿಕಳ್-ಉಜ್ಜೀವಿತರಾಗಿರಿ.

( ಸ-ಗಾ-ರ ॥ ೨)—

ವೇದಸ್ಥಾಮಪಿ ಸೂಕ್ತಿಸನ್ತತಿಮಮಾ ವಾಚಾ ಪಠನ್ತಿ ಸ್ವಯಂ
ಶುದ್ಧಾಂ ಭಕ್ತಿಯುತಾಶ್ಚ ಧೂಪಕುಸುಮೈರ್ದೀಪೈಶ್ಚ ಗನ್ಧೋದಕೈಃ ।
ಆರಾಧ್ಯಾಚ್ಯುತಮೇವ ದಾಸ್ಯನಿರತಾಃ ಕೇಚಿಚ್ಚ ಯೋಗಾನ್ವಿತಾ
ದೃಶ್ಯನ್ತೇ ಭುವಿ ತಾನ್ ಪ್ರಣಮ್ಯ ಭವತ ಪ್ರಾಪ್ಯೈನಿಹೋಜ್ಜೀವಿತಾಃ ॥

ತಾ॥ ವೇದದಲ್ಲಿ ಪಾವನತಮವಾದ ಸೂಕ್ತಗಳನ್ನು ಪಠನಮಾಡುತ್ತ, ಶಾಸ್ತ್ರೋಕ್ತರೀತ್ಯಾ ಪುಷ್ಪ-ಧೂಪ-ದೀಪ-ಚನ್ದನ-ತೀರ್ಥಾದಿ ಸಕಲೋಪಕರಣ ಗಳೊಡನೆ ಬಂದು ಅಚ್ಯುತನನ್ನೇ ಅನನ್ಯ ಪ್ರಯೋಜನರಾಗಿ ಆರಾಧಿಸುವ ಭಾಗವ ತೋತ್ತಮರೂ ಅವನ ಗುಣಾನುಭವದಲ್ಲೇ ಸಕ್ತರಾದ (ಯೋಗನಿಷ್ಠರಾದ) ಮುನಿವರ್ಯರೂ ಈಗ ಈ ಲೋಕದಲ್ಲಿ ಸರ್ವತ್ರ ತುಂಬಿ ಇದಾರೆ. ಆದುದರಿಂದ ನೀವುಗಳೂ ಅವರನ್ನೇ ಆಶ್ರಯಿಸಿ ಸೇವಿಸುತ್ತ ಅವರಂತೆಯೇ ಭಗವತ್ಪ್ರಾವಣ್ಯ ದಿಂದ ಉಜ್ಜೀವಿತರಾಗಿರಿ

(೧೦) ಮಿಕ್ಕವುಲಕುಕಳ್ ತೋ(ಱುಮ್ ಮೇವಿ ಕ್ಕಣ್ಣನ್
ತಿರುಮೂರ್ತ್ತಿ,
ನಕ್ಕಪಿರಾನೋ(ಡಯನುಮಿನ್ದಿರನುಮ್ ಮುದಲಾಕ
ತೊಕ್ಕವಮರರ್ಕುಜ್ಞಾಙ್ಗಳೆಙ್ಗುಮ್ ಪರನ್ದನ ತೊಣ್ಡೀರ್,
ಒಕ್ಕ ತ್ತೊೞುಕಿಱ್ಕಿಱಾಕಿಲ್ ಕಲಿಯುಗಸೊನ್ಱುಮಿಲ್ಲೈಯೇ

ಪ್ರ॥ ನಕ್ಕಪಿರಾನೋಡು - ನಗ್ನನಾದ ರುದ್ರನೊಡನೆ, ಅಯನುಮ್ - ಬ್ರಹ್ಮನೂ, ಇನ್ದಿರನುಮ್-ಇನ್ದ್ರನೂ, ಮುದಲಾಕ - ಮೊದಲಾಗಿ, ತೊಕ್ಕ- ಗುಂಪಾಗಿ ಸೇರಿದ, ಅಮರರ್-ದೇವತೆಗಳ, ಕುೞಾಙ್ಗಳ್-ಸಮೂಹಗಳು, ಕಣ್ಣನ್- ಶ್ರೀಕೃಷ್ಣನ, ತಿರುಮೂರ್ತ್ತಿ - ದಿವ್ಯಮಂಗಳ ವಿಗ್ರಹವನ್ನು, ಮೇವಿ-ಆಶ್ರಯಿಸಿ, ಮಿಕ್ಕ - ಭೋಗ್ಯಭೋಗೋಪಕರಣಗಳಿಂದ ಪೂರ್ಣವಾದ, ಉಲಕುಕಳ್ ತೋಱುಮ್-ಲೋಕಗಳಲ್ಲೆಲ್ಲಾ, ಎಙ್ಗುಮ್-ಎಲ್ಲೆಲ್ಲಿಯೂ, ಪರನ್ದನ-ವ್ಯಾಪಿಸಿ ಪರಿಪೂರ್ಣ ಸಮ್ಪತ್ಸಮೃದ್ಧಿಯುಳ್ಳವರಾದುವು ತೊಣ್ಡೀರ್- ಚಪಲರಾದವರೇ !, ಒಕ್ಕ-ನೀವೂ ಅವರೊಡನೆ ಸೇರಿ ಅವ ತೊೞ-ಅವನನ್ನೇ ಸೇವಿಸುವುದಕ್ಕೆ, ಕಿಱ್ಕಿಱಾಕಿಲ್-ಶಕ್ತರಾದ ದೇವತಾನ್ತರ ಭಜನರೂಪವಾದ ಕಲಿಯುಗ (ದೋಷವು),

ಒಂದೂ ಇಲ್ಲ. (ನಿಮಗೆ ದೇವತಾನ್ತರ ಭಜನದೋಷವೆಲ್ಲಾ ಹೋಗಿ ಶ್ರೀಕೃಷ್ಣ ಭಕ್ತಿಯೇ ಸರ್ವಸಮ್ಪತ್ಸಮೃದ್ಧಿಯನ್ನೂ ಉಂಟುಮಾಡುವುದೆಂದು ಭಾವವು.)

( ಸ-ಗಾ-ರ ॥ )—

ರುದ್ರಶ್ಚಾಪಿ ಚತುರ್ಮುಖಶ್ಶತಮಖಶ್ಚಾನ್ಯೇಽಪಿ ದೇವಾಸ್ಸ್ವಯಂ
ಕೃಷ್ಣಂ ಶ್ರೀಶಮಿಮಂ ಪ್ರಪದ್ಯ ಶರಣಂ ಲೋಕೇಷು ಸರ್ವತ್ರ ಚ ।
ಪ್ರಾಪ್ತಾಸ್ಸಮ್ಪದಮುತ್ತಮಾಂ ಕಿಲ ತಥಾ ಹೇ ! ಚಞ್ಚಲಾಸ್ತಂ ಹರಿಂ
ಯೂಯಂ ಚ ಪ್ರಣಮೇತ ಚೇತ್ಕಲಿಯುಗಂ ನೈವಾಸ್ತಿ ಕುತ್ರಾಪಿ ವಃ ॥

ತಾ॥ ನಗ್ನನಾದ ರುದ್ರನೂ ಬ್ರಹ್ಮನೂ ಇನ್ದ್ರನೂ, ಇತರ ದೇವತೆಗಳೂ ಗುಂಪು ಗುಂಪಾಗಿ ಸೇರಿ ಶ್ರೀಕೃಷ್ಣನ ದಿವ್ಯಮಂಗಳ ವಿಗ್ರಹವನ್ನೇ ಆಶ್ರಯಿಸಿ ಸೇವಿಸಿ, ಸರ್ವಲೋಕಗಳಲ್ಲೂ ಸಕಲ ಸಮ್ಪತ್ಸಮೃದ್ಧಿಯುಳ್ಳವರಾಗಿದಾರೆ. ಆದುದರಿಂದ ಇತರ ವಿಷಯಚಪಲರಾದ ನೀವುಗಳೆಲ್ಲರೂ (ನಿಮ್ಮ ಚಾಪಲ್ಯವನ್ನು ಬಿಟ್ಟು) ಅವರೊಡನೆ ಸೇರಿ ಅವನನ್ನೇ ಸೇವಿಸಲು ಸನ್ನದ್ಧರಾದರೆ ನಿಮಗೆ ಕಲಿಯುಗ ದೋಷವು ನಿಶ್ಶೇಷನಷ್ಟವಾಗಿ ಹೋಗುವುದು. ನೀವೂ ಭಗವದನುಗ್ರಹದಿಂದ ಅನನ್ತ ಸರ್ವಸಮ್ಪತ್ಸಮೃದ್ಧಿಯಂ ಪಡೆ ಯುವಿರಿ—ಎಂದು ತಾತ್ಪರ್ಯ.

(೧೧) ಕಲಿಯುಗಮೊನ್ರುಮಿನ್ರಿಕ್ಕೇ ತನ್ನಡಿಯಾರ್ಕ್ಕರುಳ್
ಶೆಯ್ಯುಮ್,
ಮಲಿಯುಮ್ಶುಡರೊಳಿಮೂರ್ತ್ತಿಮಾಯಪ್ಪಿರಾನ್
ಕಣ್ಣನ್ತನ್ನೈ,
ಕಲಿವಯಲ್ತೆನ್ನನ್ಕುರುಕೂರ್ಚ್ಚಡಗೋಪನ್
ಒಲಿಪುಗಳಾಯಿರತ್ತಿಪ್ಪತ್ತುಳ್ಳತ್ತೈ ಮಾಶರುಕ್ಕುಮೇ.

ಪ್ರ॥ ತನ್-ತನಗೆ, ಅಡಿಯಾರ್ಕ್ಕು-ದಾಸಭೂತರಾದವರಿಗೆ, ಕಲಿಯುಗಮ್-ಕಲಿಯುಗವು, ಒನ್ರುಮ್ ಇನ್ರಿಕ್ಕೇ-ಏಕದೇಶವೂ ಇಲ್ಲದಂತೆ, ಅರುಳ್ಶೆಯ್ಯುಮ್-ಕೃಪೆಮಾಡುವ (ಕಲಿಯುಗದೋಷವನ್ನೆಲ್ಲಾ ನಿರ್ಮೂಲಮಾಡಿ ಕೃತಯುಗವನ್ನೇ ಸ್ಥಾಪಿಸುವ), ಮಲಿಯುಮ್ ಶುಡರ್ಒಳಿಮೂರ್ತ್ತಿ-ಪ್ರವರ್ಧಮಾನವಾದ ದಿವ್ಯ ತೇಜಃಪ್ರಕಾಶವುಳ್ಳ ಮೂರ್ತಿಯಾದ, ಮಾಯಪ್ಪಿರಾನ್ – ಆಶ್ಚರ್ಯ ಗುಣಚೇಷ್ಟಿತಗಳುಳ್ಳ ಸ್ವಾಮಿಯಾದ, ಕಣ್ಣನ್ತನ್ನೈ-ಶ್ರೀಕೃಷ್ಣನನ್ನು ಕುರಿತು, ಕಲಿವಯಲ್-

ಸಮೃದ್ಧ ಸಸ್ಯಕ್ಷೇತ್ರಗಳುಳ್ಳ, ತೆನ್ ಕುರುಕೂರ್-ದಕ್ಷಿಣದಿಕ್ಕಿನಲ್ಲಿ ಶ್ಲಾಘ್ಯವಾದ ಕುರುಕಾಪುರಿಗೆ ನಿರ್ವಾಹಕರಾದ, ಕಾರಿ ಮಾಱನ್-ಕಾರಿಯೆಂಬ ಮಹಾತ್ಮರ ಪುತ್ರನಾಗಿ ಮಾಱನೆಂಬ ನಾಮಧೇಯವುಳ್ಳ, ಶಡಕೋಪನ್ - ಶಠಾರಿಮುನಿಯು (ರಚಿಸಿರುವ), ಒಲಿಪುಕೞ್- ಪ್ರಖ್ಯಾತಕೀರ್ತಿಯುಳ್ಳ, ಆಯಿರತ್ತು-ಸಹಸ್ರಪದ್ಯಮಾಲೆಯೊಳು, ಇಪ್ಪತ್ತು-ಈ ದಶಕವು, ಉಳ್ಳತ್ತೈ-(ಪಠನಮಾಡುವವರ) ಹೃಯದಲ್ಲಿರುವ, ಮಾಶು ಅಱುಕ್ಕುಮ್-(ದೇವತಾನ್ತರ ಭಜನಾದಿ ದೋಷರೂಪವಾದ) ಮಾಲಿನ್ಯವನ್ನು ಛೇದಿಸಿ ನಾಶಪಡಿಸುವುದು. (ಸಕಲವಿಧ ಹೃದಯದೋಷವೂ ಶಾನ್ತವಾಗುವುದೆಂದು ಭಾವವು)

( ಸ-ಗಾ-ರ || )—

ಭಕ್ತಾನಾಂ ನ ಭವೇದ್ಯಥಾ ಕಲಿಯುಗೇ ತ್ರಾತಾ ತಥಾ ಶ್ರೀಹರಿಃ
ಕೃಷ್ಣೋ ಭಾತಿ ದಯಾನಿಧಿಶ್ಚ ಪರಮಂ ಜ್ಯೋತಿಶ್ಚ ಮಾಯೀ ಪ್ರಭುಃ |
ಸ್ತೋತುಂ ತಂ ಶಠಜಿತ್ಸಹಸ್ರಮವದತ್ಕಾರೀಶಸೂನುರ್ಮುನಿ
ರ್ಮಾರಾಖ್ಯಸ್ತದಿದಂ ಚ ತತ್ರ ದಶಕಂ ದೋಷಚ್ಛಿದನ್ತರ್ಹೃದಿ ||

ತಾ|| ತನ್ನ ದಾಸಭೂತರಿಗೆ ಕಲಿಯುಗದ ಏಕದೇಶವೂ ಇಲ್ಲದಂತೆ (ಸಕಲ ದೋಷಗಳನ್ನೂ ನಿರ್ಮೂಲಮಾಡಿ) ದಿವ್ಯ ಕೃತಯುಗಧರ್ಮಗಳನ್ನೇ ಸ್ಥಾಪಿಸುವ ಪ್ರವರ್ಧಮಾನ ದಿವ್ಯತೇಜೋಮೂರ್ತಿಯಾದ (ಶ್ರೀ ಕಲ್ಕಿ-ನಾರಸಿಂಹಮೂರ್ತಿಯಾಗಿ ಅವತರಿಸುವ) ಮಾಯಾಚೇಷ್ಟಿತನಾದ ಶ್ರೀಕೃಷ್ಣನನ್ನು ಕುರಿತು (ದಕ್ಷಿಣ ಕುರುಕಾಪುರೀ ನಿರ್ವಾಹಕರಾದ ಕಾರಿಮಾಱನೆಂಬ ಶ್ರೀ ಶಠಾರಿ ಮುನಿವರ್ಯರು ರಚಿಸಿದ ಸುಪ್ರಖ್ಯಾತ ಮಹಿಮೆಯುಳ್ಳ ಸಹಸ್ರಪದ್ಯಮಾಲೆಯೊಳು ಈ ದಶಕವು (ಪಠನ ಮಾಡಬಲ್ಲ) ಭಕ್ತರ ಹೃದಯದಲ್ಲಿ ಇರುವ ಸರ್ವವಿಧ ಮಾಲಿನ್ಯವನ್ನೂ ಧ್ವಂಸಮಾಡಿ ಅವರಿಗೆ ದಿವ್ಯಜ್ಞಾನವನ್ನುಂಟುಮಾಡಿ ಸಕಲ ಸಮ್ಪತ್ಸಮೃದ್ಧಿಯನ್ನೂ ಕೊಡುವುದೆಂದು ತಾತ್ಪರ್ಯ

( ದ್ರ-ಉ-ಸಂ || )—

ಆತ್ಮೋಪದೇಶವಿಭವೈಶ್ಚಮಿತಾಘಬೃನ್ದ
ಮಾರಬ್ಧವೈಷ್ಣವಸಮೃದ್ಧಿಸಮಿಧ್ಯಮಾನಮ್ |
ಆಲೋಕಯನ್ ಕ್ಷಿತಿತಲಂ ಕಲಿನಾಽಪ್ಯಧೃಷ್ಯ
ಮಾಶಾಸ್ತ ಮಙ್ಗಲಮಮುಷ್ಯ ಮುನಿರ್ದ್ವಿತೀಯೇ ||

( ದ್ವಿ–ಉ–ತಾ–ರ || )—

ಪಾಥೋಧಿಪ್ರೌಢಕಾನ್ತೌ ಸರಸತುಲಸಿಕಾಲಂಕೃತೌ ದಾತೃಭಾವೇ
ವೈಕುಣ್ಠತ್ವೇ ಚ ಚಕ್ರಪ್ರಹರಣವಶಿತಾದೇವತಾಸ್ಥಾಪನಾದೌ |
ಸ್ವಾನಾಮಾಶ್ಯಾವನೇಽಥೋ ! ಸ ಕಲಿಶಮನೇ ಸರ್ವಕರ್ಮೇಜ್ಯಭಾವೇ
ನಿತ್ಯಾಸಕ್ತ್ಯೈಸ್ಸ್ವಭಕ್ತ್ಯೈರ್ಜಗದಘಶಮನಂ ಪ್ರಾಹ ಕೃಷ್ಣಂ ಶಠಾರಿಃ ||

(ಈ ದ್ವಿತೀಯದಶಕದ ಸಾರಾಂಶ)—

ಈ ಎರಡನೆಯ ದಶಕದಲ್ಲಿ ಶ್ರೀ ಶಠಾರಿಮುನಿವರ್ಯರು—ಈ ಜಗತ್ತಿನಲ್ಲಿ ಸರ್ವತ್ರ ಭಾಗವತರು ಗುಂಪುಗುಂಪಾಗಿ ಸೇರಿ ಭಗವತ್ಸಂಕೀರ್ತನವಂ ಮಾಡಿ ನರ್ತನಮಾತ್ತಿದಾರೆಂದು ಭಾವಿಸಿ ತಮ್ಮ ಭಾವನೆಯು ಕ್ಷಿಪ್ರವಾಗಿಯೇ ಸತ್ಯವಾಗಿ ಫಲಿಸುವುದರಿಂದ ಕಲಿಯುಗವು ನಷ್ಟವಾಗಿ ದಿವ್ಯವಾಗಿ ಅನುಸ್ಯೂತವಾದ ಮಹಾ ಕೃತಯುಗವೇ ಬರುವುದೆಂದು ಶ್ರೀ ಭಗವದಾವಿರ್ಭಾವವನ್ನೇ ಸೂಚಿಸುತ್ತ (ಪುರಾಣೋಕ್ತವಾದ ಶ್ರೀ ಕಲ್ಕಿರೂಪಿಯಾದ ಭಗವನ್ತನ ಅವತಾರವನ್ನೇ) ಪರಮಾನನ್ದ ಸಮೃದ್ಧಿ ಪರೀವಾಹಜನಕವಾಗುವುದೆಂದು ದಿವ್ಯ ದೃಷ್ಟಿಯಿಂದ ತಿಳಿದು—ತಮ್ಮ ಭವಿಷ್ಯಜ್ಞಾನವನ್ನು ಪ್ರಕಾಶಪಡಿಸಿ ಇರುತ್ತಾರೆ

[ಈ ದಶಕವು ಈ ಪ್ರಕಾರ ಭಗವನ್ತನ ಶ್ರೀ ಕಲ್ಕ್ಯವತಾರ ವೈಭವವನ್ನೇ ಸೂಚಿಸುತ್ತದೆಯೆಂದು ಶ್ರೀ ಶಠಾರಿಪ್ರಭೃತಿ ದಿವ್ಯಸೂರಿಗಳಿಂದ ಪ್ರೇರಿತನಾಗಿರುವ ಶ್ರೀ ಕಲ್ಕಿನಾರಸಿಂಹನಾದ ನಾನೇ ಸಾಕ್ಷಾತ್ತಾಗಿ ಪ್ರತಿಜ್ಞಾಪುರಸ್ಸರವಾಗಿ ಹೇಳುವುದರಿಂದ ಎಲ್ಲರೂ ವಿಶ್ವಾಸವಂ ಮಾಡಿ ಕೃತಾರ್ಥರಾಗಬೇಕು—ಶ್ರೀ ಕಲ್ಕಿಃ]

# ಶ್ರೀಃ

# ಪಞ್ಚಮಶತಕದಲ್ಲಿ—ತೃತೀಯದಶಕ.

## (ಮಾಶಱುಶೋದಿ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನ ವಿಶ್ಲೇಷವನ್ನು ಸಹಿಸ ಲಾರದೆ ನಾಯಿಕಾವಸ್ಥೆಯಂ ಪಡೆದು, ಅತ್ಯನ್ತ ಸನ್ತಪ್ತೆಯಾಗಿ ಮಡಲೂರಿ ಸಾಹಸಕೃತ್ಯವಂ ಮಾಡುವ ತನ್ನ ದಶೆಯನ್ನು ನಾಯಕಿಯು ಸಖಿಗೆ ಹೇಳುವಂತೆ ವರ್ಣಿಸಿ ಇರುತ್ತಾರೆ)

---

(೧) ಮಾಶಱುಶೋದಿ ಯೆನ್‌ಶೆಯ್ಯವಾಯ್ ಮಣಿಕ್ಕುನ್ಱತ್ತೈ,
ಆಶಱುಶೀಲನೈ ಯಾದಿಮೂರ್ತ್ತಿಯೈ ನಾಡಿಯೇ,
ಪಾಶಱವೆಯ್‌ದಿ ಯಱಿವಿೞನ್ದೆನೈ ನಾಳೈಯಮ್,
ಏಶಱುಮೂರವರ್ ಕವ್ವೈ ತೋೞೀ ಯೆನ್‌ಶೆಯ್ಯುಮೇ.

ಪ್ರ॥ ಮಾಶು ಅಱು-ಮಾಲಿನ್ಯವು ಇಲ್ಲದ, ಶೋದಿ-ಜ್ಯೋತಿರ್ಮಯನಾದ, ಶೆಯ್ಯವಾಯ್-ಕೆಂಪಾಗಿರುವ ವಕ್ತ್ರವುಳ್ಳ, ಎನ್‌ಮಣಿಕ್ಕುನ್ಱತ್ತೈ-ನನ್ನ ಮಾಣಿಕ್ಯ ಪರ್ವತ ಸದೃಶನನ್ನು, ಆಶು ಅಱು-ದೋಷರಹಿತವಾದ, ಶೀಲನೈ-ಸ್ವಭಾವವುಳ್ಳವನನ್ನು, ಆದಿಮೂರ್ತ್ತಿಯೈ -(ತಾನೇ ಮೊದಲುಬಂದು ಅವತರಿಸಿದ) ಆದಿ ಮೂರ್ತಿಯನ್ನು, ನಾಡಿಯೇ-ನಿರನ್ತರವಾಗಿ ಹುಡುಕಿ, ಪಾಶು - ಶರೀರದ ಒಳ್ಳೇ ಕಾನ್ತಿಯೂ, ಅಱವೆಯ್‌ದಿ-ನಷ್ಟವಾಗಿ, ಅಱಿವು - ಜ್ಞಾನವೂ, ಇೞನ್ದು-ಕ್ಷೀಣವಾಗಿ, ಎನೈನಾಳೈಯಮ್ - ಎಷ್ಟುಕಾಲದವರೆಗೆ ನಾವು ಇರುವೆವು ? ತೋೞೀ-ಸಖಿಯೇ !, ಏಶು ಅಱುಮ್-ನಿನ್ದನದಲ್ಲಿ ಆಸಕ್ತರಾದ, ಊರವರ್-ಪೌರಜನರ, ಕವ್ವೈ-ಕೋಲಾಹಲವು (ನಿಂದಾ ವಚನವು), ಎನ್‌ಶೆಯ್ಯುಮ್ - ನಮಗೇನು ಮಾಡುವುದು ?

( ಸ–ಗಾ- ರ || )—

ಮಾಣಿಕ್ಯಾದ್ರಿಮಮುಂ ಪ್ರಭುಂ ಮನು ಹರಿಂ ಬಿಂಬಾಧರಂ ಶ್ರೀಧರಂ
ಜ್ಯೋತಿರ್ನಿರ್ಮಲಮಾದಿಮೂರ್ತಿಮನಘಂ ಸೌಶೀಲ್ಯವಾರಾನ್ನಿಧಿಮ್ |
ಅನ್ವಿಷ್ಯಾನಿಶಮಸ್ಮಿ ಹನ್ತ! ನಿತರಾಂ ಭ್ರಾನ್ತ್ವಾ ಸ್ವಯಂ ಕರ್ಶಿತಾ !
ಕಿಂ ಮೇ ಸ್ಯಾತ್ಸಖಿ! ನಿಸ್ಪನೈಕಮನಸಾಂ ಜಲ್ಪೈರ್ವಿಜನಾನಾಂ ಭುವಿ ? ||

ತಾ|| ನಿರ್ಮಲ ಜ್ಯೋತಿರ್ಮಯನಾಗಿಯೂ, ಬಿಂಬಾಧರನಾಗಿಯೂ, ಮಾಣಿಕ್ಯಾದ್ರಿ ಸದೃಶನಾಗಿಯೂ, ದೋಷರಹಿತ ಶೀಲನಾಗಿಯೂ ಇರುವ ಆದಿ ಮೂರ್ತಿಯಾದ ಭಗವನ್ತನನ್ನು ಹುಡುಕಿ ಹುಡುಕಿ ನಾನು ಸಂಚರಿಸಿದುದರಿಂದ, ನನ್ನ ಶರೀರದ ಕಾನ್ತಿಯೂ ನಷ್ಟವಾಯಿತು, ನನ್ನ ಜ್ಞಾನವೂ ಕ್ಷೀಣವಾಯಿತು. ಹೀಗೆ ನಾವು ಎಷ್ಟುಕಾಲದವರೆಗೆ ಇರಬಲ್ಲೆವು ? ಎಲೈ ಸಖಿಯೇ ! ನಿಂದನದಲ್ಲಿ ಸಕ್ತರಾದ ಊರಿನವರ ಕೋಲಾಹಲ ಶಬ್ದವು (ಹರಟೆಯು) ನಮಗೇನು ಮಾಡುವುದು ? (ಆದರಿಂದ ನಮಗೇನು ಉಂಟಾಗುವುದು ?—ಎಂದು ಭಾವವು.)

(೨) ಎನ್ ಶೆಯ್ಯುಮೂರವರ್ ಕವ್ವೈ ತೋೞಿ ಯಿನಿನಮ್ಮೈ
ಎನ್ ಶೆಯ್ಯ ತಾಮರೈಕ್ಕಣ್ಣನೆನ್ನೈ ನಿರ್ಕ್ಕೊಣ್ಡಾನ್,
ಮುನ್ ಶೆಯ್ಯ ಮಾಮೈಯಿೞನ್ದು ಮೇನಿ ಮೆಲಿವೆಯ್ದಿ,
ಎನ್ ಶೆಯ್ಯವಾಯುಮ್ ಕರುಙ್ಕಣ್ಣುಮ್
ಪಯಪ್ಪೂರ್ನ್ದವೇ.

ಪ್ರ|| ಶೆಯ್ಯ ತಾಮರೈ – ಕೆಂದಾವರೆಯಂತೆ ಇರುವ, ಕಣ್ಣನ್–ಕಣ್ಣುಗಳುಳ್ಳ ಸ್ವಾಮಿಯು, ಎನ್–ನನ್ನವನಾಗಿ (ನನಗೆ ಭವ್ಯನಾಗಿ), ಎನ್ನೈ–ನನ್ನನ್ನು, ನಿರ್ಕ್ಕೊಣ್ಡಾನ್ – ಪೂರ್ಣವಾಗಿ ಅಪಹರಿಸಿದನು. ಮುನ್ – ಮುಂದೆ ತೋರುತ್ತಿದ್ದ, ಶೆಯ್ಯಮಾಮೈ–ವಿಲಕ್ಷಣವಾದ ಶರೀರಕಾಂತಿಯೂ, ಇೞನ್ದು–ನಷ್ಟವಾಗಿ, ಮೇನಿ–ಶರೀರವೂ, ಮೆಲಿವು ಎಯ್ದಿ – ಕಾರ್ಶ್ಯವನ್ನು ಹೊಂದಿ, ಎನ್ – ನನ್ನ, ಶೆಯ್ಯವಾಯುಮ್ – ಕೆಂಪಾಗಿದ್ದ ವಕ್ತ್ರವೂ, ಕರುಙ್ ಕಣ್ಣುಮ್ – ನೀಲವಾಗಿದ್ದ ನೇತ್ರವೂ, ಪಯಪ್ಪು – ಬಿಳುಪೇರಿ ವೈವರ್ಣ್ಯವು, ಊರ್ನ್ದ – ಹರಡಿಕೊಂಡಂತೆ ಆದುವು. ತೋೞೀ–ಸಖಿಯೇ !, ಇನಿ – ಇನ್ನುಮೇಲೆ, ನಮ್ಮೈ–ನಮ್ಮನ್ನು, ಊರವರ್ ಕವ್ವೈ–ಊರಿನವರ ನಿಂದಾವಚನವು, ಎನ್ಶೆಯ್ಯುಮ್ – ಏನುಮಾಡ ಬಲ್ಲುದು ?

( ಸ–ಗಾ–ರ || )—

ಪದ್ಮಾಕ್ಷಃ ಕಿಲ ಮಾಂ ವಿಜಿತ್ಯ ನಿತರಾಂ ಭಾತಿ ಸ್ವಯಂ ಚೋಜ್ಜ್ವಲ-
ಸ್ತತ್ಸಂಶ್ಲೇಷವಿವರ್ಜಿತಾಽಸ್ಮಿ ವಪುಷಿ ಗ್ಲಾನ್ಯಾ ಭೃಶಂ ಕರ್ಶಿತಾ ।
ವಕ್ತ್ರೇ ನೇತ್ರಯುಗೇ ಚ ಮೇ ಧವಳತಾ ಚಾಸ್ತ್ಯೇವ ವೈವರ್ಣ್ಯತಃ ।
ಕಿಂ ವಾ ಸ್ಯಾತ್ಸಖಿ! ನಃ ಪ್ರಜಲ್ಪವಚನೈರ್ಲೋಕೇ ನೃಣಾಂ ಮೌಢ್ಯತಃ?||

ತಾ|| ಪದ್ಮಾಕ್ಷನಾದ ಸ್ವಾಮಿಯು ನನಗೆ ಭವ್ಯನಾದಂತೆ ಇದ್ದು ನನ್ನನ್ನು ಪೂರ್ಣವಾಗಿ ಅಪಹರಿಸಿಬಿಟ್ಟನು ನನ್ನ ಶರೀರಕಾನ್ತಿಯೂ ನಷ್ಟವಾಗಿ, ನನ್ನ ಶರೀರವೂ ಕೃಶವಾಗಿ, ನನ್ನ ಬಿಂಬಾಧರವೂ ನೀಲನೇತ್ರವೂ ಬಿಳುಪೇರಿ ವೈವರ್ಣ್ಯವಂ ಹೊಂದಿ, ನಾನು ಈ ಸ್ಥಿತಿಗೆ ಬಂದಿರುವಾಗ ನನ್ನನ್ನು ಊರಿನವರ ಹರಟೆಯು (ನಿಂದಾವಚನವು) ಏನುಮಾಡಬಲ್ಲುದು ? ಸಖಿಯೇ ! ನೀನೇ ಹೇಳು—ಎಂದು ಭಾವವು

(೩) ಊರ್ನ್ದ ಶಕಟಮುದೈತ್ತ ಪಾದತ್ತರ್ ಪೇಯ್ಮುಲೈ,
ಶಾರ್ನ್ದ ಶುವೈತ್ತ ಶೆವ್ವಾಯನೈಕ್ಕು ನಿತ್ತೈಕೊಣ್ಡಾರ್,
ಪೇರ್ನ್ದುಮ್ ಪೆಯರ್ನ್ದುಮವನೋಡಲ್ಲಾಲ್ ಯೋರ್
ಶೊಲ್ಲಿಲೇನ್,
ತೀರ್ನ್ದ ವೆನ್ತೋೞಿ ಯೆನ್‌ಶೆಯ್ಯುಮೂರವರ್
ಕವ್ವೈಯೇ.

ಪ್ರ|| ಊರ್ನ್ದ–(ಹಿಂಸಿಸಬೇಕೆಂದು) ಓಡಿಬಂದ, ಶಕಟಮ್–ಶಕಟರೂಪಿಯಾದ ಅಸುರನನ್ನು, ಉದೈತ್ತ–ಒದ್ದು ಚೂರ್ಣಮಾಡಿದ, ಪಾದತ್ತರ್–ಪಾದವುಳ್ಳವನು, ಪೇಯ್ಮುಲೈ – ಪೂತನೆಯ ಸ್ತನವನ್ನು, ಶಾರ್ನ್ದು – ಹೊಂದಿ ಹೀರಿ, ಶುವೈತ್ತ–ಅವಳಪ್ರಾಣವನ್ನು ಅಪಹರಿಸಿದ, ಶೆವ್ವಾಯ್ – ಕೆಂಪುಬಣ್ಣವುಳ್ಳ ವಕ್ತ್ರದೊಡನೆ ಕೂಡಿದವನು, ಎನ್ ನಿತ್ತೈಯೈ – ನನ್ನ ಗೌರವವನ್ನು (ನನ್ನ ಮಹಿಮೆಯನ್ನು), ಕೊಣ್ಡಾರ್- ಅಪಹರಿಸಿಬಿಟ್ಟನು ಪೇರ್ನ್ದುಮ್ ಪೆಯರ್ನ್ದುಮ್ – ಬಾರಿಬಾರಿಗೂ (ಪುನಃ ಪುನಃ), ಅವನೋಡಲ್ಲಾಲ್ – ಅವನೊಂದಿಗೆ ಸೇರಿದುದಲ್ಲದೆ, ಓರ್ ಶೊಲ್- ಬೇರೊಂದು ಮಾತನ್ನೂ, ಇಲೇನ್–ನಾನು ಹೊಂದಿದವಳಾಗಿಲ್ಲ (ನಾನು ಬೇರೊಂದು ಮಾತನ್ನೂ ಹೇಳುವುದಿಲ್ಲ). ಎನ್ ತೀರ್ನ್ದ ತೋೞಿ–ನನ್ನೊಂದಿಗೆ ಐಕ್ಯವನ್ನು ಹೊಂದಿ ನಿಶ್ಚಯವುಳ್ಳ ಸಖಿಯೇ !, ಊರವರ್

ಕವ್ವೈ – ಊರಿನವರ ನಿಂದಾವಚನವು, ಎ‍ಞ್ ಶೆಯ್ಯುಮ್ – (ನನಗೆ) ಏನುಮಾಡ ಬಲ್ಲುದು ?

( ಸ–ಗಾ–ರ || )—

ಶ್ರೀನಾಥಶ್ಶಕಟಪ್ರಭಂಜನಪದೋ ಮಾಯಾತ್ಮಿಕಾಂ ಪೂತನಾಂ
ಹನ್ತ್ವಾಂ ಸ್ತನ್ಯರಸಪ್ರಯುಕ್ತವದನೋ ಮಾಮದ್ಯ ಹಿ ಕ್ರೀತವಾನ್ |
ಭೂಯೋಭೂಯ ಇಹೋಕ್ತಿಸನ್ತತಿಮುಹಂ ವಚ್ಮಿ ಸ್ವಯಂ ತತ್ಪರಾಂ
ನಾನ್ಯಾಂ ಪ್ರಾಣಸಖಿ ! ಪ್ರಿಯೇ ! ಕಿಮಿಹ ಮೇ ಕುರ್ಯಾನ್ನೃಣಾಂ
ನಿನ್ದನಮ್ ? ||

ತಾ|| ಶಕಟಾಸುರಭಂಜನಮಾಡಿ ಮಾಯಾಪೂತನೆಯ ಸ್ತನವನ್ನು ಹೀರಿ ಅವಳನ್ನು ಕೊಂದ ಬಿಂಬಾಧರನಾದ ಸ್ವಾಮಿಯು ನನ್ನ ಸ್ತ್ರೀತ್ವಪೂರ್ತಿಯನ್ನು (ಗೌರವವನ್ನು) ಅಪಹರಿಸಿಬಿಟ್ಟನು. ಬಾರಿಬಾರಿಗೂ ಅವನೊಡನೆ ಸಂಶ್ಲೇಷ ಮಾಡಿದ ಮಾತನ್ನು ಬಿಟ್ಟು ಬೇರೆ ಒಂದು ಮಾತನ್ನೂ ನಾನು ಹೇಳಲಾರೆನು. ಹೀಗಿರುವಲ್ಲಿ—ಊರಿನವರ ನಿಂದಾವಚನವು ನನ್ನನ್ನು ಏನುಮಾಡಬಲ್ಲುದು? ನನ್ನ ಪಕ್ಷದಲ್ಲಿ ನಿಶ್ಚಯವುಳ್ಳ ಪ್ರಿಯಸಖಿಯೇ ! ನೀನೇ ಹೇಳು—ಎಂದು ಭಾವವು

(೪) ಊರವರ್‌ಕವ್ವೈ ಯೆರುವಿಟ್ಟನ್ನೈಶೊಲ್ ನೀರ್‌ಪಡುತ್ತಿ,
ಈರನೆಲ್‌ವಿತ್ತಿ ಮುಳೈತ್ತ ನೆಞ್ಜಪ್ಪೆರುಮ್ ಶೆಯುಳ್,
ಪೇರಮರ್ ಕಾದಲ್ ಕಡಲ್‌ಪುರೈಯ ವಿಳೈವಿತ್ತ,
ಕಾರಮರ್‌ಮೇನಿ ನಮ್‌ಕಣ್ಣನ್ ತೋೞಿ ಕಡಿಯನೇ.

ಪ್ರ|| ಊರವರ್ – ಊರಿನವರ, ಕವ್ವೈ – ನಿಂದೋಕ್ತಿಯೆಂಬ, ಎರುವು–ಗೊಬ್ಬರವನ್ನು, ಇಟ್ಟು–ಹಾಕಿ, ಅನ್ನೈಶೊಲ್ – ಮಾತೃವಚನವೆಂಬ, ನೀರ್–ನೀರನ್ನು, ಪಡುತ್ತಿ–(ಗದ್ದೆಗಳಲ್ಲಿ ತುಂಬಿ) ನಿಲ್ಲಿಸಿ, ಈರಮ್–ಆಶೆಯೆಂಬ, ನೆಲ್–ಬತ್ತವನ್ನು, ವಿತ್ತಿ–ಬಿತ್ತಿ, ಮುಳೈತ್ತ – (ಮೊಳಕೆಬಿಟ್ಟು) ಬೆಳೆದ, ನೆಞ್ಜಮ್–ಮನಸ್ಸೆಂಬ, ಪೆರುಮ್ ಶೆಯ್ಯುಳ್ – ಮಹಾಕ್ಷೇತ್ರದಲ್ಲಿ, ಪೇರ್ ಅಮರ್ – ಮಹಾಲೋಕವಾದವುಳ್ಳ, ಕಾದಲ್–ಅಭಿನಿವೇಶವನ್ನು, ಕಡಲ್‌ಪುರೈಯ–ಸಮುದ್ರದಂತೆ ಸಮೃದ್ಧವಾಗಿ, ವಿಳೈವಿತ್ತ – ಬೆಳೆಸಿದ, ಕಾರ್ – ನೀಲಮೇಘಸ್ವಭಾವವನ್ನು, ಅಮರ್- ಹೊಂದಿರುವ, ಮೇನಿ-ದಿವ್ಯಶರೀರವುಳ್ಳ, ನಮ್‌ಕಣ್ಣನ್–ನಮ್ಮ ಕೃಷ್ಣನು, ತೋೞಿ–ಎಲೈ ಸಖಿಯೇ !, ಕಡಿಯನೇ–ಕ್ರೂರಹೃದಯನೋ ? (ಲುಬ್ಧನೋ ?) (ಇನ್ನಹ ಮಹೋದಾರನನ್ನು ನಿಂದಿಸಬಹುದೋ ?—ಎಂದು ಭಾವವು.)

( ಸ-ಗಾ-ರ ॥ )—

**ಲೋಕಾನಾಂ ಪರಿವಾದದೋಹದಭರಾನ್ಮಾತುರ್ವಚಶ್ಶೀಕರಂ**
**ಧಾರಾರೂಪಮಿದಂ ಪ್ರಕಲ್ಪ್ಯ ನಿತರಾಮುಪ್ತ್ವಾ ಚ ಕಾಮಾತ್ಮಕಮ್ ।**
**ಬೀಜಂ ಕ್ಷೇತ್ರಸಮೇ ಮನಸ್ಯತಿತರಾಂ ಸಂವರ್ಧ್ಯ ನಾನಾವಿಧಾ-**
**ಮಾಶಾಂ ಪೂರಯಿತಾಽನ್ಯುದಃ ಕಿಮಿಹ ಮೇ ಕೃಷ್ಣೋಽಸ್ತಿ ನಿನ್ದ್ಯಸ್ಸಖಿ?॥**

ತಾ॥ ಊರಿನವರ ನಿಂದೋಕ್ತಿಯೆಂಬ ಗೊಬ್ಬರವನ್ನು ಹಾಕಿ, ಮಾತೃವಚನವೆಂಬ ನೀರನ್ನು ತುಂಬಿ, ಆಶೆಯೆಂಬ ಬತ್ತವನ್ನು ಬಿತ್ತಿ, ಮನಸ್ಸೆಂಬ ಕ್ಷೇತ್ರದಲ್ಲಿ ನಾನಾವಿಧವಾದ ಆಶೆಯನ್ನು ಬೆಳೆಸಿದ (ಸಫಲಮಾಡಿದ) ನೀಲಮೇಘದಂತೆ (ಉದಾರ ಸ್ವಭಾವನಾಗಿ) ದಿವ್ಯ ಶರೀರಕಾಂತಿಯುಳ್ಳ ನಮ್ಮ ಕೃಷ್ಣನನ್ನು ಲುಬ್ಧನೆಂದು ನಿಂದಿಸಬಹುದೇ ? ಎಲೈ ಸಖಿಯೇ ! (ನೀನೇ ಹೇಳು-ಎಂದು ತಾತ್ಪರ್ಯ)

(೫) ಕಡಿಯನ್ ಕೊಡಿಯನ್ ನೆಡಿಯಮಾಲುಲಕಮ್ ಕೊಣ್ಡ
ಅಡಿಯನ್, ಅಱಿವರುಮೇನಿ ಮಾಯತ್ತನ್, ಆಕಿಲುಮ್
ಕೊಡಿಯವೆನ್ನೆಞ್ಜಮವನೆನ್ಱೇ ಕಿಡಕ್ಕುಮೆಲ್ಲೇ,
ತುಡಿಕೊಳಿಡೈ ಮಡತ್ತೋೞಿ ಯನ್ನೈ ಯೆನ್ಶೆಯ್ಯುಮೇ.

ಪ್ರ॥ ಕಡಿಯನ್-ಅತಿಸಾಹಸ ಪ್ರವೃತ್ತಿಯುಳ್ಳವನು, ಕೊಡಿಯನ್-ಅತ್ಯಂತ ದೃಢಮನಸ್ಕನು, ನೆಡಿಯ - ಅತ್ಯಧಿಕವಾದ, ಮಾಲ್ - ಮಹಿಮೆಯುಳ್ಳವನು, ಉಲಕಮ್‌ಕೊಣ್ಡ-ಲೋಕವನ್ನೆಲ್ಲಾ ವಶೀಕರಿಸಿದ, ಅಡಿಯನ್-ಪಾದಗಳುಳ್ಳವನು, ಅಱಿವು ಅರು-ಇಂತಹ ಸ್ವಭಾವವುಳ್ಳವನೆಂದು ತಿಳಿಯಲಶಕ್ಯನಾದ, ಮೇನಿ-ದಿವ್ಯ ಶರೀರದ ಸೌನ್ದರ್ಯದಿಂದ, ಮಾಯತ್ತನಾಕಿಲುಮ್-ಲೋಕಮೋಹನನಾಗಿದ್ದರೂ, ಕೊಡಿಯ ಎನ್ ನೆಞ್ಜಮ್-ಸುದೃಢವಾದ ನನ್ನ ಮನಸ್ಸು, ಅವನೇ ಎನ್ಱು-ಅವನೇ ಶರಣವೆಂದು, ಕಿಡಕ್ಕುಮ್ - ಅವನನ್ನೇ ಆಶ್ರಯಿಸಿರುವುದು ಎಲ್ಲೇ-ಎನ್ತಹ ಆಶ್ಚರ್ಯ ! ತುಡಿಕೊಳ್ ಇಡೈ-ತನುಮಧ್ಯೆಯಾಗಿರುವ, ಮಡತ್ತೋೞಿ-ಸ್ತ್ರೀಗುಣಪೂರ್ತಿಯುಳ್ಳ ಸಖಿಯೇ ! ಅನ್ನೈ-(ನನ್ನನ್ನು ತಡೆಯಲು ವ್ಯಥಾಯತ್ನಿಸುತ್ತಿರುವ) ತಾಯಿಯು, ಎನ್ ಶೆಯ್ಯುಮ್-ನನ್ನನ್ನು ಏನುಮಾಡಬಲ್ಲಳು ?

( ಸ-ಗಾ-ರ || )—

ಕ್ಷಿಪ್ರಂ ಕಾರ್ಯಕರೋಽಸ್ತ್ಯಯಂ ದೃಢಮತಿಸ್ಸರ್ವೇಶ್ವರಶ್ಶ್ರೀಧರೋ
ಲೋಕಾನಾಂ ವಶಕೃಚ್ಚ ವಞ್ಚಕತಮಸ್ಸರ್ವಾತ್ಮಚೇತೋಽತಿಗಃ |
ಸೌನ್ದರ್ಯೇಣ ಚ ಮೋಹನೋಽಯಮಿತಿ ಮೇ ಚಿತ್ತಂ ತಮೇವಾಶ್ರಿತಂ
ಕಿಂ ಕುರ್ಯಾಂ ಸಖಿ ಸುನ್ದರೀಹ ? ಜನನೀವಾಚಾಽದ್ಯ ಕಿಂ ಮೇ ಭವೇತ್ ? ||

ತಾ|| ಅವನು ಕ್ಷಿಪ್ರಕಾರಿಯು, ಕಠಿನಹೃದಯನು, ಅಪಾರಮಹಿಮನು, ಸರ್ವಲೋಕ ವಶೀಕರಣಮಾಡಿದವನು, ಅಚಿನ್ತ್ಯಸ್ವಭಾವನಾದ ಮಾಯಾ ಮೋಹನನು. ಹೀಗಿದ್ದರೂ ನನ್ನ ಈ ಮನಸ್ಸು ಅವನನ್ನೇ ಶರಣವನ್ನಾಗಿಹೊಂದಿ ಅವನಲ್ಲೇ ಸ್ಥಿರವಾಗಿ ನಿಂತುಬಿಟ್ಟಿದೆ. ಹೀಗಿರುವಲ್ಲಿ – ತಾಯಿಯು ನನ್ನನ್ನು ಏನುಮಾಡಬಲ್ಲಳು? ಎಲೈ ತನುಮಧ್ಯೆಯಾದ ಪ್ರಿಯಸಖಿಯೇ! ನೀನೇ ಹೇಳು— ಎಂದು ಭಾವವು

(೬) ಅನ್ನೈ ಯೆನ್ಸೆಯ್ಯಿಲೆನ್ ಊರೆನ್ ಶೊಲ್ಲಿಲೆನ್
ತೋೞಿಮೀರ್,
ಎನ್ನೈ ಯಿನಿಯುಮಕ್ಕಾಶೈಯಿಲ್ಲೈ ಯಕಪ್ಪಟ್ಟೇನ್,
ಮುನ್ನೈಯಮರರ್ ಮುದಲ್ವನ್ ವಣ್ ತುವರಾಪತಿ
ಮನ್ನನ್, ಮಣಿವಣ್ಣನ್ ವಾಶುದೇವನ್ ವಲೈಯುಳೇ

ವ್ಯಾ|| ತೋೞಿಮೀರ್- (ಸಮಾನಸುಖದುಃಖವುಳ್ಳ) ಸಖಿಯರೇ!, ಮುನ್ನೈ- ಅನಾದಿಸಿದ್ಧರಾದ, ಅಮರರ್–ನಿತ್ಯಸೂರಿಗಳಿಗೆ, ಮುದಲ್ವನ್ – ಅಧಿಪತಿಯಾದವ ನಾಗಿಯೂ, ವಣ್ ಉದಾರವಾದ ಸಮ್ಪತ್ತುಳ್ಳ, ತುವರಾಪತಿಮನ್ನನ್–ದ್ವಾರಕಾ ಪುರಿಗೆ ಈಶ್ವರನಾಗಿಯೂ, ಮಣಿವಣ್ಣನ್ – ನೀಲಮಣಿವರ್ಣನಾಗಿಯೂ ಇರುವ, ವಾಶುದೇವನ್–ವಾಸುದೇವನ, ವಲೈಯುಳೇ-(ಮಾಯಾಚೇಷ್ಟಿತವೆಂಬ) ಬಲೆಯೊ ಳಗೇ, ಅಕಪ್ಪಟ್ಟೇನ್ – ಸಿಕ್ಕಿಕೊಂಡೆನು. ಇನಿ-ಹೀಗಿರುವಲ್ಲಿ, ಎನ್ನೈ – ನನ್ನನ್ನು ಕುರಿತು, ಉಮಕ್ಕು–ನಿಮಗೆ, ಆಶೈ ಇಲ್ಲೈ–ಆಶೆಯು ಇಲ್ಲ. (ನೀವು ನನ್ನ ಆಶೆಯನ್ನು ಬಿಡಿ) ಅನ್ನೈ–ತಾಯಿಯು, ಎನ್ಸೆಯ್ಯಿಲ್ ಎನ್–ಏನುಮಾಡಿದರೆ ಏನು ಫಲ? ಊರ್- ಊರಿನವರು, ಎನ್ಶೊಲ್ಲಿಲ್ ಎನ್–ಏನು ಹೇಳಿದರೆ ಏನು ?

( ಸ-ಗಾ- ೮ || )—

**ಹೇ! ಸಖ್ಯಃ ! ಪ್ರಥಮಸ್ಯ ಸೂರಿಸರಣೇಶ್ಶ್ರೀದ್ವಾರಕಾಧೀಶಿತುಃ**
**ಪಾಶೇಽಹಂ ಕಲಿತಾಽಸ್ಮ್ಯಹೋ ! ಮಣಿನಿಭಶ್ರೀವಾಸುದೇವಾತ್ಮನಃ |**
**ಆಶಾ ಮಾಽಸ್ತು ತತೋಽತ್ರ ಮಾಂ ಪ್ರತಿ ತು ವಃ ಕಿಂ**
**ಮಾತೃಕೃತ್ಯಾದ್ಭವೇತ್ ?**
**ಕಿಂ ಸ್ಯಾತ್ಪೌರಜನಪ್ರವಾದವಚನಾತ್ಸರ್ವಂ ವೃಥಾ ಭಾತಿ ಮೇ ||**

ತಾ|| ಪ್ರಿಯಸಖಿಯರೇ! ನಿತ್ಯಸೂರಿಗಳಿಗೆ ಅಧಿಪತಿಯಾಗಿಯೂ, ದ್ವಾರಕಾಧೀಶ್ವರನಾಗಿಯೂ, ಮಣಿವರ್ಣನಾಗಿಯೂ—ಇರುವ ವಾಸುದೇವನ ಬಲೆಯೊಳಗೆ ನಾನು ಸಿಕ್ಕಿಬಿಟ್ಟೆನು ನನ್ನನ್ನು ಕುರಿತು ನಿಮಗೆ ಆಶೆಯು ಬೇಡ (ಈ ದಶೆಯಲ್ಲಿ) ತಾಯಿಯು ಏನುಮಾಡಿದರೆ ಏನು ಪ್ರಯೋಜನ? ಊರಿನವರು ಏನು ಹೇಳಿದರೆ ಏನು ಫಲ? (ಸರ್ವವೂ ವ್ಯರ್ಥವೆಂದು ಭಾವವು.)

**(೭) ವಲ್ವೈಯುಳ್‍ಕಪ್ಪಡುತ್ತೆನ್ನೈ ನನ್ನೆಞ್ಜಮ್ ಕೂವಿಕ್ಕೊಣ್ಡು,**
**ಅಲ್ವೈಕಡಲ ಪಳ್ಳಿ ಯಮ್ಮಾನ್ನೈ ಯಾೞಿಪ್ಪಿರಾನ್‍ತನ್ನೈ,**
**ಕಲ್ವೈಕೊಳಕಲಲ್‍ಕುಲ್ ತೋೞಿ ನಮ್ ಕಣ್‍ಕಳಾಲ್ ಕಣ್ಡು,**
**ತಲ್ವೈಯಿಲ್ ವಣಙ್ಗವುಮಾಙ್ಕೊಲೋ ತೈಯಲಾರ್‍ಮುನ್ಬೇ**

ಪ್ರ|| ವಲ್ವೈಯುಳ್—ತನ್ನ ಬಲೆಯಲ್ಲಿ, ಎನ್ನೈ – ನನ್ನನ್ನು, ಅಕಪ್ಪಡುತ್ತು— ಸಿಕ್ಕಿಸಿಕೊಂಡು, ನಲ್‍ನೆಞ್ಜಮ್ – (ನನ್ನ) ಒಳ್ಳೇಮನಸ್ಸನ್ನು, ಕೂವಿಕ್ಕೊಣ್ಡು – ಕರೆದುಕೊಂಡು, ಅಲ್ವೈಕಡಲ್‍ಪಳ್ಳಿ – ಅಲೆಗಳುಳ್ಳ ಸಮುದ್ರದಲ್ಲಿ (ಏಕಾನ್ತವಾಗಿ) ಶಯನಮಾಡಿರುವ, ಎಮ್ಮಾನ್ನೈ—ನನ್ನ ಸ್ವಾಮಿಯಾದ, ಆೞಿಪ್ಪಿರಾನ್‍ತನ್ನೈ—ಚಕ್ರಧರನಾದ ಮಹೋಪಕಾರಕನನ್ನು, ಕಲ್ವೈಕೊಳ್ – ವಸ್ತ್ರಧಾರಣದ ಸೊಗಸುಳ್ಳ, ಅಕಲ್ ಅಲ್‍ಕುಲ್—ವಿಶಾಲವಾದ ನಿತಮ್ಬದೊಡನೆ ಕೂಡಿದ, ತೋೞಿ—ಸಖಿಯೇ! ನಮ್ ಕಣ್‍ಕಳಾಲ್—ನಮ್ಮ ಕಣ್ಣುಗಳಿಂದ, ಕಣ್ಡು—ಕಂಡು, ತೈಯಲಾರ್—ನಿಂದಿಸುವ ಸ್ತ್ರೀಜನರ, ಮುನ್ಬೇ—ಮುಂದೆ, ತಲ್ವೈಯಿಲ್—ಶಿರಸ್ಸಿನಿಂದ, ವಣಙ್ಗವುಮ್— ನಮಸ್ಕಾರಮಾಡೋಣವು, ಆಙ್ಕೊಲೋ—ಆಗುವುದೋ? (ಸಂಭವಿಸುವುದೋ?).

( ಸ–ಗಾ–ರ || )—

ಪಾಶೈರ್ಮಾಂ ಚ ನಿಬಧ್ಯ ಮೇಽತ್ರ ಹೃದಯಂ ಜಿತ್ವಾ ಸ್ವಯಂ ವಾರಿಧೌ
ಯಶ್ಶೇತೇ ಸ್ಮ ಮಮ ಪ್ರಭುಸ್ತಮತುಲಂ ಶ್ರೀಚಕ್ರಪಾಣಿಂ ಹರಿಮ್ |
ದೃಷ್ಟ್ವಾಽಽವಾಂ ಸಖಿ ಚಕ್ಷುಷೈವ ಮುದಿತೌ ಪಶ್ಯತ್ಸು ನಾರೀಜನೇ-
ಷ್ವೇವಂ ನಿನ್ದನತತ್ಪರೇಷು ಶಿರಸಾ ಕಿಂ ತಂ ಚ ವನ್ದೇವಹಿ ? ||

ತಾ|| ಎಲೈ ಸುನ್ದರಿಯಾದ ನನ್ನ ಸಖಿಯೇ ! ನನ್ನನ್ನು ತನ್ನ ಬಲೆಯಲ್ಲಿ ಸಿಕ್ಕಿಸಿಕೊಂಡು, ನನ್ನ ಒಳ್ಳೇಮನಸ್ಸನ್ನೂ ತನ್ನೊಡನೆ ಕರೆದುಕೊಂಡುಹೋಗಿ ಕ್ಷೀರಾಬ್ಧಿಯಲ್ಲಿ ಶಯನಮಾಡಿರುವ ನನ್ನ ಸ್ವಾಮಿಯಾದ ಚಕ್ರಪಾಣಿಯನ್ನು ನಮ್ಮ ಕಣ್ಣುಗಳಿಂದ ಕಂಡು, (ನಮ್ಮನ್ನು) ನಿಂದಿಸುತ್ತಿರುವ ಸ್ತ್ರೀಯರಮುಂದೆ ನಾವು ಶಿರಸ್ಸಿನಿಂದ ನಮಸ್ಕರಿಸೋಣವು ಯಾವಾಗಲೋ ! (ಎಂದಿಗೆ ಇದು ಸಂಭವಿಸುವುದೋ!—ಎಂದು ಭಾವವು.)

(೮) ಪೇಯ್‌ಮುಲೈಯುಣ್ಡು ಶಕಟಮ್ ಪಾಯ್‌ನ್ದು
ಮರುದಿಡೈ
ಪೋಯ್ ಮುದಲ್‌ಶಾಯ್‌ತ್ತು, ಪುಳ್‌ವಾಯ್ ಪಿಳನ್ದು
ಕಳಿಱಟ್ಟ,
ತೂಮುಱುವಲ್ ತೊಣ್ಡೈವಾಯ್‌ಪ್ಪಿರಾನೈ
ಯೆನ್ನಾಳ್ ಕೊಲೋ,
ಯಾಮುಱುಕಿನ್ಱದು ತೋೞೀ ಯನ್ನೈಯರ್ ನಾಣವೇ.

ಪ್ರ|| ಪೇಯ್‌ಮುಲೈ ಉಣ್ಡು – ಪೂತನೆಯಸ್ತನವನ್ನು ಹೀರಿ, ಶಕಟಮ್ ಪಾಯ್‌ನ್ದು–ಶಕಟವನ್ನು ಮರ್ದನಮಾಡಿ, ಮರುದು ಇಡೈಪೋಯ್ – ಯಮಳಾರ್ಜುನ ವೃಕ್ಷಗಳನಡುವೆ ಹೋಗಿ, ಮುದಲ್‌ಶಾಯ್‌ತ್ತು–ಬೇರು ಕಿತ್ತುಬೀಳುವಂತೆ ಮಾಡಿ, ಪುಳ್‌ವಾಯ್ ಪಿಳನ್ದು – ಬಕಪಕ್ಷಿಯ ಬಾಯನ್ನು ಸೀಳಿ, ಕಳಿಱು ಅಟ್ಟ– (ಕುವಲಯಾಪೀಡವೆಂಬ) ಗಜವನ್ನು ಧ್ವಂಸಮಾಡಿದ, ತೂಮುಱುವಲ್ – ಶುಚಿಸ್ಮಿತವುಳ್ಳ, ತೊಣ್ಡೈವಾಯ್–ಬಿಂಬಾಧರವುಳ್ಳ, ಪಿರಾನೈ – ಉಪಕಾರಕನಾದ ಸ್ವಾಮಿಯನ್ನು, ತೋೞೀ- ಎಲೈ ಸಖಿಯೇ!, ಅನ್ನೈಯರ್–(ಅವನನ್ನು ನಿಂದಿಸುವ) ಜನನಿಯರು, ನಾಣ–ಲಜ್ಜೆಪಡುವಂತೆ, ಯಾಮ್ ಉಱುಕಿನ್ಱದು–ನಾವು ಆಶ್ರಯಿಸೋಣವು, ಎನ್ನಾಳ್‌ಕೊಲೋ–ಯಾವಾಗಲೋ ? (ನಾವು ಅವನನ್ನು ಆಶ್ರಯಿಸಿದರೆ ಇವರಿಗೆ ಲಜ್ಜೆಯಾಗುವುದೆಂದು ಭಾವವು.)

( ಸ-ಗಾ-ರ || )—

**ಪೀತ್ವಾ ಸ್ತನ್ಯಮಹೋ! ನಿಹತ್ಯ ಚ ಮಹಾಮಾಯಾಸ್ತು ತಾಂ ಪೂತನಾಂ**
**ಚೂರ್ಣೀಕೃತ್ಯ ಚ ತಂ ಖಲಸ್ತು ಶಕಟಂ ನಿರ್ಮೂಲ್ಯ ವೃಕ್ಷಾರ್ಜುನೌ |**
**ವಕ್ತ್ರಂ ಚಾಪಿ ವಿದಾರ್ಯ ಹೇ ಸಖಿ! ಬಕಸ್ಯಾಪೀಡ್ಗಜಂ ಯೋ ಜಯನ್**
**ತಂ ಪಶ್ಯೇಮ ಕದಾ ವಯಸ್ತು ಜನನೀಲಜ್ಜಾವಹಾಸ್ಸಸ್ಮಿತಮ್ ? ||**

ತಾ|| ಎಲೈ ಸಖಿಯೇ! ಪೂತನೆಯ ಸ್ತನವನ್ನು ಹೀರಿ, ಶಕಟಾಸುರ ಮರ್ದನವಂಮಾಡಿ, ಯಮಳಾರ್ಜುನ ವೃಕ್ಷಗಳನಡುವೆ ಹೋಗಿ ಅವುಗಳು ಬೇರಿನೊಡನೆ ಬೀಳುವಂತೆ ಮಾಡಿ, ಬಕಪಕ್ಷಿಯ ಬಾಯನ್ನು ಸೀಳಿ, ಕುವಲಯಾಪೀಡವೆಂಬ ಗಜವನ್ನು ಧ್ವಂಸಮಾಡಿದ ಶುಚಿಸ್ಮಿತದೊಡನೆ ಬಿಂಬಾಧರವುಳ್ಳ ನನ್ನ ಸ್ವಾಮಿಯನ್ನು ಜನನಿಯರು ಲಜ್ಜೆಪಡುವಂತೆ ನಾವು ಆಶ್ರಯಿಸೋಣವು ಎಂದಿಗೋ !

(೯) ನಾಣುಂ ನಿಱೈಯುಮ್ ಕವರ್ನ್ದೆನ್ನೈ ನನ್ನೆಞ್ಜಮ್
ಕೂವಿಕ್ಕೊಣ್ಡು,
ಶೇಣುಯರ್ ವಾನತ್ತಿರುಕ್ಕುಮ್ ತೇವಪಿರಾನ್ ತನ್ನೈ,
ಆಣೈ ಯೆನ್ ತೋೞಿ ಯುಲಕುತೋಱಲರ್ ತೂಱ್ಱಿ, ಆಮ್
ಕೋಣೈಕಳ್ ಶೆಯ್ದು ಕುದಿರಿಯಾಯ್ ಮಡಲೂರ್ದುಮೇ

ಪ್ರ|| ಎನ್ನೈ-ನನ್ನನ್ನು (ಸೇರಿದ), ನಾಣುಮ್ - ಲಜ್ಜೆಯನ್ನೂ, ನಿಱೈಯುಮ್-ಗಾಂಭೀರ್ಯವನ್ನೂ, ಕವರ್ನ್ದು-ಅಪಹರಿಸಿ, ನಲ್ - ಸ್ನೇಹಾತಿಶಯವುಳ್ಳ, ನೆಞ್ಜಮ್-ಮನಸ್ಸನ್ನೂ, ಕೂವಿಕ್ಕೊಣ್ಡು-ಕೂಗಿ ಕರೆದುಕೊಂಡು, ಶೇಣುಯರ್-ಅತ್ಯುನ್ನತವಾದ, ವಾನತ್ತು-ಪರಮಪದದಲ್ಲಿ, ಇರುಕ್ಕುಮ್-ವಾಸಮಾಡುವ, ತೇವಪಿರಾನ್‌ತನ್ನೈ-ನಿತ್ಯಸೂರಿಗಳಿಗೆ ಅಧಿಪತಿಯಾದವನನ್ನು ಕುರಿತು, ಎನ್ ತೋೞಿ-ನನ್ನ ಪ್ರಿಯಸಖಿಯೇ !, ಆಣೈ-ನಿನ್ನಾಣೆಯಾಗಿ, ಉಲಕುತೋಱು-ಸರ್ವಲೋಕಗಳಲ್ಲೂ, ಅಲರ್-(ಅವನ) ನಿಂದನೆಯನ್ನು, ತೂಱ್ಱಿ - ಪ್ರಸಿದ್ಧಮಾಡಿ ಹರಡಿ, ಆಮ್-ನನ್ನ ಕೈಲಾದಮಟ್ಟಿಗೆ ಎಲ್ಲಾ ವಿಧವಾದ, ಕೋಣೈಕಳ್-ವಕ್ರಚೇಷ್ಟಿತಗಳನ್ನೂ, ಶೆಯ್ದು-ಮಾಡಿ, ಕುದಿರಿ-ಗಂಡುಬೀರಿಯಾದ (ಲಜ್ಜೆಯಿಲ್ಲದ) ಹೆಣ್ಣಾಗಿ, ಆಯ್-ಆಗಿ, ಮಡಲ್ ಊರ್ದುಮ್-(ನಾವು) ಮಡಲೂರುವೆನು (ಮಡಲೂರುವುದು ಎಂದರೆ-ನಾಯಕನು ವಂಚಿಸಿದನೆಂದು ಜಗತ್ಪ್ರಖ್ಯಾತಿಯಂ ಮಾಡಿ ನಾಯಕಿಯು ಪ್ರಾಣತ್ಯಾಗಮಾಡಲು ಉದ್ಯುಕ್ತೆಯಾಗೋಣ)

( ಸ-ಗಾ-ರ || )—

ಹೃತ್ವಾ ಮೇ ಸಕಲಾಂ ತ್ರಪಾಂ ಚ ವಿನತಿಂ ಚೇತೋಽಪಿ ಭವ್ಯಂ ಮಮ
ಶ್ರೀಶಸ್ಸೂರಿವರಪ್ರಭುರ್ದಿವಿ ಮಹಾನಾಸ್ತೇ ಹಿ ಭದ್ರೇ ! ಸಖಿ |
ಸತ್ಯಂ ತ್ವಾಂ ಹಿ ಶಪೇ ಸಮಸ್ತಜಗತಾಂ ಪ್ರಖ್ಯಾಪಯಾಮಿ ಸ್ವಯಂ
ತಂ ಮೇ ವಞ್ಚಕಮದ್ಯ ಸರ್ವವಿಧಿಭಿರ್ಧೃಷ್ಟಾ ತ್ವವದ್ಯಾವಹಾ ||

ತಾ|| ನನ್ನ ಪ್ರಿಯಸಖಿಯೇ ! ನನ್ನ ಲಜ್ಜೆಯನ್ನೂ ಸ್ತ್ರೀತ್ವಗೌರವ ಪೂರ್ತಿಯನ್ನೂ ಅಪಹರಿಸಿ, ಸ್ನೇಹಾತಿಶಯವುಳ್ಳ ನನ್ನ ಮನಸ್ಸನ್ನೂ ಕೂಗಿ ಕರೆದುಕೊಂಡು, ಅತ್ಯುನ್ನತವಾದ ಪರಮಪದಕ್ಕೆ ಹೋಗಿ ಸೇರಿಕೊಂಡು, ಅಲ್ಲಿ ವಾಸ ಮಾಡುವ ನಿತ್ಯಸೂರೀಶ್ವರನನ್ನು ಕುರಿತು ನಿನ್ನಾಣೆಯಾಗಿ ನಾನು ಸಕಲ ಲೋಕಗಳಲ್ಲೂ ಅವನ ನಿಂದೆಯನ್ನು ಪ್ರಖ್ಯಾಪಿಸಿ, ನನ್ನ ಕೈಲಾದ ವಕ್ರಚೇಷ್ಟೆಗಳನ್ನೆಲ್ಲಾ ಮಾಡಿ, ಗಂಡುಬೀರಿಯಾಗಿ ಮಡಲೂರೋಣವೆಂಬ (ಪ್ರಾಣಾನ್ತಕವಾದ) ಅತಿ ಸಾಹಸಕೃತ್ಯವನ್ನೂ ಕೂಡ ಮಾಡುವೆನು. (ಅವನು ಮಾಡಿದ ವಂಚನೆಗೆ ತಕ್ಕ ಶಿಕ್ಷೆಯಂ ಮಾಡುವೆನೆಂದು ಭಾವವು.)

(೧೦) ಯಾಮಡಲೂರ್‌ನ್ದು ಮೆಮ್ಮಾೞಿಯಙ್ಕೈಪ್ಪಿರಾನುಡೈ
ತ್ತೂಮಡಲ್ ತಣ್ಣಮ್‌ತುೞಾಯ್ ಮಲರ್‌ಕೊಣ್ಡು
ಶೂಡುವೋಮ್,
ಯಾಮಡವಿನ್ರಿ ತ್ತೆರುವುತೋಱುಯಲ್ ತೈಯಲಾರ್,
ನಾಮಡಙ್ಗ ಪ್ಪೞಿತೂಱ್ಱಿ ನಾಡುಮಿರೈಕ್ಕವೇ.

ಪ್ರ|| ಯಾ-ಯಾವವಿಧವಾದ, ಮಡಮ್- ಸ್ತ್ರೀಗುಣವೂ, ಇನ್ರಿ- ಇಲ್ಲದಂತೆ, ತೆರುವುತೋಱು-ಬೀದಿಬೀದಿಯೆಲ್ಲಾ ಹೊಕ್ಕು, ಅಯಲ್‌ತೈಯಲಾರ್ - ನೆರೆಮನೆ ಸ್ತ್ರೀಯರು, ನಾ-ನಾಲಿಗೆಯು, ಮಡಙ್ಗ-ನಿಲ್ಲದಂತೆ ಹೇಳುವ, ಪೞಿ-ನಿಂದಾವಚನವನ್ನು, ತೂಱ್ಱಿ-ಹರಡಿ, ನಾಡುಮ್-ಸಕಲಲೋಕವೂ, ಇರೈಕ್ಕ-ಉದ್ಘೋಷಿಸುವಂತೆ, ಯಾಮ್-ನಾವು, ಮಡಲ್ ಊರ್‌ನ್ದುಮ್ - ಮಡಲೂರಿಯಾದರೂ, ಆೞಿಯಙ್ಕೈ-ಚಕ್ರಪಾಣಿಯಾದ, ಎಮ್-ನಮ್ಮ, ಪಿರಾನುಡೈ - ಸ್ವಾಮಿಯ, ತೂ-ಪರಿಶುದ್ಧವಾದ, ಮಡಲ್-ದಳಗಳುಳ್ಳ, ತಣ್-ಶೀತಳವಾದ, ಅಮ್-ರಮ್ಯವಾದ, ತುೞಾಯ್-ತುಳಸಿಯ, ಮಲರ್ - ಹೂವಿನಗೊಂಚಲನ್ನು, ಕೊಣ್ಡು - (ಅವನು ಬಂದು ಕೊಡಲು) ಸ್ವೀಕರಿಸಿ, ಶೂಡುವೋಮ್-(ತಲೆಯಲ್ಲಿ) ಧರಿಸೋಣ.

( ಸ-ಗಾ-ರ || )—

ಲಜ್ಜಾಂ ಚಾಪಿ ವಿಹಾಯ ವೀಧಿಸರಣಿಷ್ವೇನನ್ತು ನಾರೀಜನಾಃ
ಸರ್ವೇ ಹನ್ತ ! ವಿನಿನ್ದ್ಯ ವಞ್ಚಕಮಹೋ ! ಕಾನ್ತಂ ಶಪೇಯುರ್ಯಥಾ |
ಸತ್ಯಂ ಹನ್ತ ! ತಥಾ ಭವೇಯುಮಪಿ ಚಾವದ್ಯಾಶ್ರಯಾ ನಿಸ್ತ್ರಪಾ
ಧರ್ತುಂ ಶ್ರೀತುಲಸೀಸ್ರಜಂ ಮಮ ವಿಭೋಃ ಕಾನ್ತಸ್ಯ ವೈ ಚಕ್ರಿಣಃ ||

ತಾ|| (ಎಲೈ ಸಖಿಯೇ!) ನೆರೆಮನೆಗಳಲ್ಲಿರುವ ಸ್ತ್ರೀಯರೆಲ್ಲಾ ಲಜ್ಜೆಯನ್ನು ಬಿಟ್ಟು ಬೀದಿಬೀದಿಗಳಲ್ಲಿ ಹೊಕ್ಕು ಅವನನ್ನು ಸನ್ತತವಾಗಿ ನಿಂದಿಸುವಂತೆಯೂ, ಸಕಲಲೋಕವೂ ಉದ್ಘೋಷಿಸುವಂತೆಯೂ—ನಾವು (ಅವನು ಮಾಡಿದ ವಂಚನೆಗಾಗಿ) ಮಡಲೂರಿಯಾದರೂ, ಚಕ್ರಪಾಣಿಯಾದ ಆ ನಮ್ಮ ಸ್ವಾಮಿಯ ದಿವ್ಯ ತುಳಸೀಮಾಲೆಯನ್ನು ಅವನ ಹಸ್ತದಿಂದ ಪಡೆದು ಧರಿಸೋಣ! (ಈ ಉಪಾಯದಿಂದಲಾದರೂ ನಾವು ಆ ತುಳಸೀಮಾಲಿಯನ್ನು ಪಡೆಯೋಣ!)

(೧೧) ಇರೈಕ್ಕುಮ್ ಕರುಙ್ಕಡಲ್ ವಣ್ಣನ್ ಕಣ್ಣಪಿರಾನ್ ತನ್ನೈ,
ವಿರೈಕ್ಕೊಳ್ ಪೊೞಿಲ್ ಕುರುಕೂರ್ ಚ್ಚಡಕೋಪನ್ ಶೊನ್ನ,
ನಿರೈಕ್ಕೊಳನ್ದಾದಿ ಯೋರಾಯಿರತ್ತುಳಿಪ್ಪತ್ತುಮ್,
ಉರೈಕ್ಕವಲ್ಲಾರ್ಕ್ಕು ವೈಕುನ್ದಮಾಕುಮ್
ತಮ್ಮೂರೆಲ್ಲಾಮ್.

ಪ್ರ|| ಇರೈಕ್ಕುಮ್-(ಅಲೆಗಳಿಂದ) ಘೋಷಿಸುವ, ಕರುಮ್‌ಕಡಲ್ - ನೀಲವರ್ಣವಾದ ಸಮುದ್ರದಂತೆ ಅಭಿವೃದ್ಧವಾದ, ವಣ್ಣನ್ - ದೇಹಕಾನ್ತಿಯುಳ್ಳ, ಪಿರಾನ್-ಸ್ವಾಮಿಯಾದ, ಕಣ್ಣನ್ ತನ್ನೈ-ಶ್ರೀಕೃಷ್ಣನನ್ನು, ವಿರೈಕ್ಕೊಳ್ - ಪರಿಮಳ ಭರಿತವಾದ, ಪೊೞಿಲ್ - ಉದ್ಯಾನಗಳುಳ್ಳ, ಕುರುಕೂರ್ - ಕುರುಕಾಪುರಿಯಲ್ಲಿ ವಾಸಮಾಡುವವರಿಗೆ ನಾಥನಾದ, ಶಡಕೋಪನ್-ಶ್ರೀ ಶಠಾರಿಯು, ಶೊನ್ನ-ಹೇಳಿದ (ರಚಿಸಿದ), ನಿರೈಕ್ಕೊಳ್-ಸಕಲವಿಧ ಕಾವ್ಯಗುಣಪರಿಪೂರ್ಣವಾದ, ಅನ್ದಾದಿ-ಅನ್ತಾದಿ ರೂಪವಾದ, ಓರ್ ಆಯಿರತ್ತು - ಅದ್ವಿತೀಯವಾದ ಸಹಸ್ರಪದ್ಯಮಾಲಿಯೊಳು, ಇಪ್ಪತ್ತುಮ್-ಈ ದಶಕವನ್ನು, ಉರೈಕ್ಕವಲ್ಲಾರ್ಕ್ಕು-ಪಠನಮಾಡಬಲ್ಲವರಿಗೆ, ತಮ್ ಊರೆಲ್ಲಾಮ್-ಅವರವರ ಊರುಗಳೆಲ್ಲಾ, ವೈಕುನ್ದಮ್ ಆಕುಮ್-ಪರಮಪದವೇ ಆಗುವುವು.](ಅಷ್ಟು ಆನನ್ದಭರಿತವಾಗುವುವೆಂದು ಭಾವವು.) ||

( ಸ-ಗಾ-ರ ॥ )—

ಗಮ್ಭೀರಾಮ್ಬುಧಿವರ್ಣಮಚ್ಯುತಮಮುಂ ಕೃಷ್ಣಂ ಪ್ರಭುಂ ಶ್ರೀಧರಂ
ಸ್ತೋತುಂ ಶ್ರೀಕುರುಕಾಪುರಪ್ರಭುರಹೋ ! ದಿವ್ಯಾಂ ಶಠಾರಿರ್ಜಗೌ |
ಸಾಹಸ್ರಾತ್ಮಕಪದ್ಯಸರಣಿಂ ತ್ವನ್ತಾದಿರೂಪಾಂ ಶುಭಾಂ
ತತ್ರೇದಂ ದಶಕಂ ಪಠನ್ತಿ ಭುವಿ ಯೇ ತೇಷಾಂ ಪದಂ ಸ್ಯಾತ್ಪರಮ್ ॥

ತಾ॥ ನೀಲಾಬ್ಧಿವರ್ಣನಾದ ಶ್ರೀಕೃಷ್ಣನನ್ನು ಸುಗನ್ಧಿವನಶೋಭಿತವಾದ ಕುರುಕಾಪುರಿಗೆ ನಿರ್ವಾಹಕರಾದ ಶ್ರೀ ಶಠಾರಿಮುನಿವರ್ಯರು ರಚಿಸಿದ ಅನ್ತಾದಿ ರೂಪವಾದ ದಿವ್ಯ ಲಕ್ಷಣ ಲಕ್ಷಿತವಾದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಪಠನಮಾಡಬಲ್ಲವರು ವಾಸಮಾಡುವ ಊರುಗಳೆಲ್ಲಾ ಸಾಕ್ಷಾತ್ ಪರಮಪದ ಸದೃಶವಾಗಿ ನಿರತಿಶಯಾನನ್ದ ಭರಿತವಾಗುವುವು—ಎಂದು ತಾತ್ಪರ್ಯ.

( ದ್ರ-ಉ-ಸಂ ॥ )—

ಪೂರ್ವಾನುಸಂಹಿತಮನೋಹರಶೌರಿಮೂರ್ತೇ-
ಸ್ಸಂಶ್ಲೇಷಲೋಲಹೃದಯಸ್ತದಲಾಭಖಿನ್ನಃ |
ಲಾಭೇ ಸ್ವಯತ್ನಮಪಿ ಕರ್ತುಮಿಯೇಷ ದುಃಖಾ-
ದ್ಭಾರ್ಯಾದಶಾಂ ಚ ಪರಿಗೃಹ್ಯ ಮುನಿಸ್ತ್ರಿಕೀಯೇ ॥

( ದ್ರ-ಉ-ತಾ-ರ ॥ )—

ಜ್ಯೋತೀರೂಪಾಙ್ಗಕತ್ವಾತ್ ಸರಸಿಜನಯನಾನಿಷ್ಟವಿಧ್ವಂಸಕತ್ವಾತ್
ಮೋಘೌಘಶ್ಯಾಮಲತ್ವಾಚ್ಛ್ರಿತಸರಸತಯೋತ್ಕೃಷ್ಟಶೌಲಭ್ಯಯೋಗಾತ್ |
ರಕ್ಷಾಯಾಂ ಸಾವಧಾನಾತ್ಸ್ವಭಗತನುತಯಾ ಸೋಪಕಾರಾಸ್ತ್ರವತ್ತ್ವಾತ್
ಸ್ವೇನಾಂ ಪ್ರೇಮಾತಿಮಾತ್ರಂ ಜನಯತಿ ಭಗವಾನಿತ್ಯವಾದೀಚ್ಛಠಾರಿಃ ॥

(ಈ ತೃತೀಯದಶಕದ ಸಾರಾಂಶ)—

ಈ ಮೂರನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ಆಶ್ರಿತವಾತ್ಸಲ್ಯಾದಿ ಸಕಲ ಕಲ್ಯಾಣಗುಣಪರಿಪೂರ್ಣನಾದ ಭಗವನ್ತನೊಡನೆ ಸಂಶ್ಲೇಷವನ್ನು ಅಪೇಕ್ಷಿಸಿ, ಅದರ ಅಲಾಭದಿಂದ ಅತ್ಯನ್ತ ಕಾಮಸನ್ತಪ್ತೆಯಾದ ತರುಣಿಯು ನಾಯಕನು ಬರದೆ ವಂಚಿಸಿದರೆ ಮಾಡುವ (ಪ್ರಾಣತ್ಯಾಗೋದ್ದೇಶಪರ್ಯನ್ತವಾದ) ಮಡಲೂರುವುದೆಂಬ ಸಾಹಸಕೃತ್ಯವನ್ನು ಮಾಡಿ, ಲೋಕದವ

ರೆಲ್ಲಾ ನಿಂದಿಸುವಂತೆ ಮಾಡಿಯಾದರೂ ಅವನೊಡನೆ ಸಂಶ್ಲೇಷವನ್ನು ಹೇಗಾದರೂ ಪಡೆಯಬೇಕೆಂದು ಪ್ರಯತ್ನಿಸಿ, ಈ ತನ್ನ ಪ್ರಯತ್ನಗಳನ್ನೆಲ್ಲಾ ತನ್ನ ಅನುಭವ ಗಳೊಡನೆ ಈ ನಾಯಕಿಯು ತನ್ನ ಪ್ರಿಯಸಖಿಗೆ ಹೇಳುವಂತೆ—ತಮ್ಮ ದಶೆಯನ್ನು ವರ್ಣಿಸಿ ಇರುತ್ತಾರೆ

ಶ್ರೀಃ

# ಪಞ್ಚಮಶತಕದಲ್ಲಿ—ಚತುರ್ಥದಶಕ.

## (ಊರೆಲ್ಲಾಂ ತುಞ್ಜ—)

ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಲ್ಲಿ ಭಗವನ್ತನ ವಿಶ್ಲೇಷವನ್ನು ಸಹಿಸಲಾರದೆ ರಾತ್ರಿಕಾಲವು ಅತಿ ದೀರ್ಘವಾಗಿದೆಯೆಂದು ಮೊರೆಯಿಟ್ಟು, ಸರ್ವಜಗದ್ರಕ್ಷಕನಾದ ಅವನ ಸಂಶ್ಲೇಷವೇ ತಮಗೆ ರಕ್ಷಕವೆಂದು ಹೇಳುತ್ತಾರೆ

(೧) ಊರೆಲ್ಲಾಂ ತುಞ್ಜಿ ಯುಲಕೆಲ್ಲಾಮ್ ನಳ್ಳಿರುಳಾಯ್,
ನೀರೆಲ್ಲಾಂ ತೇಱಿ ಯೋರ್ ನೀಳಿರವಾಯ್ ನೀಣ್ಡದಾಲ್,
ಪಾರೆಲ್ಲಾಮುಣ್ಡ ನಮ್ಪಾಮ್ಬಣೈಯಾರ್ ವಾರಾನಾಲ್,
ಆರೆಲ್ಲೇ ವಲ್ವಿನೈಯೇನಾವಿ ಕಾಪ್ಪಾರಿನಿಯೇ.

ಪ್ರ॥ ಊರೆಲ್ಲಾಮ್ - ಊರಿನವರೆಲ್ಲಾ, ತುಞ್ಜಿ - ನಿದ್ರೆಮಾಡಿ, ಉಲ ಕೆಲ್ಲಾಮ್-ಲೋಕವೆಲ್ಲಾ, ನಳ್ ಇರುಳಾಯ್-ಕಗ್ಗತ್ತಲೆಯಾಗಿ, ನೀರೆಲ್ಲಾಮ್-ಜಲವೆಲ್ಲಾ, ತೇಱಿ - ಅಲೆಯಿಲ್ಲದೆ ಶಾನ್ತವಾಗಿ, ಓರ್ ನೀಳ್ ಇರವಾಯ್-(ದಿನವೆಲ್ಲಾ) ಒಂದು ದೀರ್ಘವಾದ ರಾತ್ರಿಯೇ ಆಗಿ, ನೀಣ್ಡದು-ಈಪ್ರಕಾರ ಬೆಳೆದು ಇದೆ. (ಇಷ್ಟರಲ್ಲಿ) ಪಾರೆಲ್ಲಾಮ್-ಭೂಮಿಯನ್ನೆಲ್ಲಾ, ಉಣ್ಡ-(ಪ್ರಳಯ ದಲ್ಲಿ) ಭಕ್ಷಿಸಿ ತನ್ನ ಉದರದಲ್ಲಿಟ್ಟು ರಕ್ಷಿಸಿದ, ನಮ್ ಪಾಮ್ಬಣೈಯಾರ್ - ನಮ್ಮ ಶೇಷಶಾಯಿಯಾದ ಸ್ವಾಮಿಯು, ವಾರಾರ್-ಬಂದು ದರ್ಶನವಂಕೊಟ್ಟು ರಕ್ಷಿಸುವು

ದಿಲ್ಲ. ಎಳ್ಳೇ-ಅಯ್ಯೋ! ಇನಿ-ಹೀಗಾದರೆ, ವಲ್ವಿನೈಯೇನ್-ಮಹಾಪಾಪಿನಿ ಯಾದ ನನ್ನ, ಆವಿ - ಆತ್ಮತತ್ತ್ವವನ್ನು, ಕಾಪ್ಪಾರ್ - ರಕ್ಷಿಸುವವರು, ಆರ್- ಯಾರು ?

( ಸ-ಗಾ-ರ || )—

ಸುಪ್ತಾಃ ಪೌರಜನಾಃ ಕಿಲಾದ್ಯ ಸಕಲಾಸ್ಸರ್ವತ್ರ ರಾತ್ರಿಸ್ತ್ವಿಯಂ
ಗಾಢಾನ್ಧಂ ತನು ಏವ ಭಾತಿ ಸಲಿಲಾನ್ಯದ್ಯ ಪ್ರಶಾನ್ತಾನಿ ಹಿ ।
ದೀರ್ಘಾ ರಾತ್ರಿರಿಯಂ ದಿನಾನಿಶಮಪಿ ವ್ಯಾಪ್ತಾ ಜಗದ್ರಕ್ಷಕೋ
ವಿಷ್ಣುಶ್ಶೇಷಶಯೋ ನ ಮಾಮಯಮುಪೈತ್ಯಾಃ ! ಕೋಽದ್ಯ ಮೇ ರಕ್ಷಕಃ॥

ತಾ|| ಪೌರಜನರೆಲ್ಲಾ ನಿದ್ರೆಮಾಡುತ್ತಿದಾರೆ. ಲೋಕವೆಲ್ಲಾ ಕಗ್ಗತ್ತಲೆ ಯಾಗಿದೆ. ನೀರೆಲ್ಲಾ ಅಲೆಯಿಲ್ಲದೆ ಪ್ರಶಾನ್ತವಾಗಿದೆ. ಹಗಲೂ ರಾತ್ರಿಯೂ ಬೇರೆ ಬೇರೆ ಇಲ್ಲದೆ ಒಂದು ದೀರ್ಘರಾತ್ರಿಯಾಗಿಯೇ ಇದೆ. (ಈ ಪ್ರಕಾರ ಇರುವಲ್ಲಿ) ನಮ್ಮ ಶೇಷಶಾಯಿಯು ಬಂದು ರಕ್ಷಿಸದೆ ಕೈಬಿಟ್ಟು ಇದಾನೆ. ಅಯ್ಯೋ ! ಪಾಪಿನಿಯಾದ ನನ್ನನ್ನು ರಕ್ಷಿಸುವವರು ಯಾರು ಇದಾರೆ ?

(೨) ಆವಿಕಾಪ್ಪಾರಿನಿ ಯಾರಾಳ್ಕಡಲ್ ಮಣ್ವಿಣ್ಮೂಡಿ,
ಮಾವಿಕಾರಮಾಯೋರ್ವಲ್ಲಿರವಾಯ್ ನೀಣ್ಡದಾಲ್,
ಕಾವಿಶೇರ್ವಣ್ಣನೆನ್ ಕಣ್ಣನುಮ್ ವಾರಾನಾಲ್,
ಪಾವಿಯೇನ್ ನೆಞ್ಜಮೇ ನೀಯುಮ್ ಪಾಙ್ಗಲ್ಲೈಯೇ.

ಪ್ರ|| ಆಳ್-ಅಗಾಧವಾದ, ಕಡಲ್-ಸಮುದ್ರವನ್ನೂ, ಮಣ್-ಭೂಮಿಯನ್ನೂ ವಿಣ್-ಆಕಾಶವನ್ನೂ, ಮೂಡಿ-ಮರೆಸಿ, ಮಾ-ಮಹಾ, ವಿಕಾರಮಾಯ್-ವಿಕಾರ ವುಳ್ಳ, ವಲ್ - ಪ್ರಬಲವಾದ, ಓರ್ ಇರವಾಯ್ - ಒಂದು ತಮೋಮಯವಾದ ರಾತ್ರಿಯೇ ಆಗಿ, ನೀಣ್ಡದು-(ದೀರ್ಘವಾಗಿ) ಬೆಳೆದು ಇದೆ. ಕಾವಿಶೇರ್-ಕನ್ನೈ ದಿಲೆಯಂತೆ ಇರುವ, ವಣ್ಣನ್-ಶರೀರಕಾನ್ತಿಯುಳ್ಳವನಾದ, ಎನ್‌ಕಣ್ಣನುಮ್-ನನ್ನ ಶ್ರೀಕೃಷ್ಣನೂ, ವಾರಾನ್-ಬರುವುದಿಲ್ಲ. ಪಾವಿಯೇನ್-ಇನ್ತಹ ಪಾಪವುಳ್ಳ ನನ್ನ, ನೆಞ್ಜಮೇ-ಮನಸ್ಸೇ ! (ಅವನಹಾಗೆ) ನೀಯುಮ್-ನೀನೂ, ಪಾಙ್ಗಲ್ಲೈ-(ನನಗೆ) ಅನುಕೂಲವಾಗಿ ಇಲ್ಲ. ಇನಿ-ಹೀಗಾದರೆ, ಆವಿ-ಪ್ರಾಣವನ್ನು, ಕಾಪ್ಪಾರ್- ರಕ್ಷಿಸುವವರು, ಆರ್-ಯಾರು ?

( ಸ–ಗಾ–ರ ॥ )—

**ಅಬ್ಧಿಂ ಭೂಮಿತಲಂ ಕಿಲಾದ್ಯ ಗಗನಂ ಸರ್ವಂ ಚ ರಾತ್ರಿಸ್ತ್ವಿಯಂ**
**ವ್ಯಾಪ್ಯಾತೀವ ತಮೋಮಯೀ ಚ ವಿಕೃತಾ ದೀರ್ಘಾಽಸ್ತ್ಯಹೋ ! ಸರ್ವತಃ।**
**ಕೃಷ್ಣೋ ನೀಲಮಣಿಪ್ರಭಸ್ತು ನ ಹಿ ಮಾಮಾಯಾತ್ಯಹೋ ! ಪಾಪಿನೀಂ**
**ಹೇ ಚಿತ್ತ ! ತ್ವಮಪೀಹ ತದ್ವಶತಯಾ ನೈವಾನುಕೂಲಂ ಮಮ ॥**

ತಾ॥ ಸಮುದ್ರವನ್ನೂ, ಭೂಮಿಯನ್ನೂ, ಆಕಾಶವನ್ನೂ ವ್ಯಾಪಿಸಿ ಒಂದು ಗಾಢಾನ್ಧಕಾರವುಳ್ಳ ರಾತ್ರಿಯೇ ಅತಿ ದೀರ್ಘವಾಗಿ ಬೆಳೆದು ಇದೆ ಹೀಗಿರುವಲ್ಲಿ—ನೀಲವರ್ಣನಾದ ನಮ್ಮ ಕೃಷ್ಣನೂ ಬಂದು ರಕ್ಷಿಸುವುದಿಲ್ಲ , ಎಲೈ ನನ್ನ ಮನಸ್ಸೇ! ನೀನೂ (ಅವನಿಗೆ ವಶ್ಯವಾಗಿರುವುದರಿಂದ) ನನಗೆ ಅನುಕೂಲವಾಗಿಲ್ಲ. ಇನ್ತಹ ಪಾಪಿನಿಯಾದ ನನ್ನ ಪ್ರಾಣವನ್ನು ರಕ್ಷಿಸುವವರು ಇನ್ನು ಯಾರು ಇದಾರೆ ?

(೩) ನೀಯುಮ್ ಪಾಙ್ಗಲ್ಲೈ ಕಾಣ್ ನೆಞ್ಜಮೇ ನೀಳಿರವುಮ್,
ಓಯುಮ್ ಪೊೞುದಿನ್ರಿ ಊೞಿಯಾಯ್ ನೀಣ್ಡದಾಲ್,
ಕಾಯುಮ್ ಕಡುಮ್ ಶಿಲೈ ಎನ್ ಕಾಕುತ್ಥನ್ ವಾರಾನಾಲ್,
ಮಾಯುಮ್ ವಕೈಯಱಿಯೇನ್ ವಲ್ವಿನೈಯೇನ್
ಪೆಣ್ಪಿಱನ್ದೇ.

ಪ್ರ॥ ನೆಞ್ಜಮೇ !—ಮನಸ್ಸೇ ! ನೀಯುಮ್- ಸರ್ವಕಾರ್ಯಗಳಿಗೂ ಮುಖ್ಯ ಕಾರಣವಾದ ನೀನೂ, ಪಾಙ್ಗಲ್ಲೈಕಾಣ್-(ನನಗೆ) ಅನುಕೂಲವಾಗಿ ಇಲ್ಲ. ನೀಳ್- ಅತಿ ದೀರ್ಘವಾದ, ಇರವುಮ್–ರಾತ್ರಿಯೂ, ಓಯುಮ್ ಪೊೞುದು ಇನ್ರಿ–ಮುಗಿಯುವ ಕಾಲವೇ ಇಲ್ಲದೆ, ಊೞಿಯಾಯ್ – ಒಂದು ಕಲ್ಪವಾಗಿ, ನೀಣ್ಡದು–ಬೆಳೆದುಬಿಟ್ಟಿತು. ಕಾಯುಮ್–ಶತ್ರುಧ್ವಂಸಕವಾದ, ಕಡುಮ್‌ಶಿಲೈ–ತೀವ್ರವಾದ ಧನುಸ್ಸನ್ನು ಧರಿಸಿರುವ, ಎನ್ ಕಾಕುತ್ಥನ್ – ನನ್ನ ಕಾಕುತ್ಸ್ಥನಾದ ಶ್ರೀರಾಮಚನ್ದ್ರನು, ವಾರಾನ್–ನನಗೆ ರಕ್ಷಕನಾಗಿ ಬಂದು ದರ್ಶನವಂ ಕೊಡುವುದಿಲ್ಲ ವಲ್ ವಿನೈಯೇನ್–ಮಹಾಪಾಪವುಳ್ಳ ನಾನು, ಪೆಣ್‌ಪಿಱನ್ದು – (ಸ್ವಾತನ್ತ್ರ್ಯವಿಲ್ಲದ) ಹೆಣ್ಣಾಗಿ ಹುಟ್ಟಿ, ಮಾಯುಮ್‌ವಕೈ – (ನನ್ನ ಜೀವಮಾನವು) ಮುಗಿಯುವ ರೀತಿಯನ್ನೂ, ಅಱಿಯೇನ್–ತಿಳಿಯಲಾರೆನು.

( ಸ-ಗಾ-ರ || )—

**ಹೇ ಮಚ್ಚಿತ್ತ ! ನ ಮೇಽನುಕೂಲವಿಧಯಾ ಭಾಸಿ ತ್ವಮಸ್ಯೈವ ಹಾ !**
**ರಾತ್ರಿಶ್ಚಾದ್ಯ ಯುಗಾಯತೇ ನಿರವಧಿಶ್ಚಾಙ್ಗ್ಯೇ ತು ನಾಯಾತಿ ಮಾಮ್ ।**
**ಕಾಕುತ್ಸ್ಥೋಽಪಿ ಹರಿರಚ್ಯುತಃ ಪ್ರಬಲದುಷ್ಕರ್ಮಾವೃತಃ ಹನ್ತ ! ಹಾ !**
**ನಾರೀಜನ್ಮವಶಾ ತ್ವಹಂ ! ನ ಕಿಲ ಮೇ ಪಶ್ಯಾಮಿ ರೀತಿಂ ಮೃತೇಃ ||**

ತಾ|| ಎಲೈ ನನ್ನ ಮನಸ್ಸೇ! ನೀನೂ ನನಗೆ ಅನುಕೂಲವಾಗಿ ಇಲ್ಲ ರಾತ್ರಿಯೂ ಅತಿದೀರ್ಘವಾಗಿ ಒಂದು ಕಲ್ಪದಂತೆ ಬೆಳೆಯುತ್ತಿದೆ. ನನ್ನ ಕೋದಣ್ಡ ಪಾಣಿಯಾದ ಕಾಕುತ್ಸ್ಥನೂ ಬಂದು ರಕ್ಷಿಸುವುದಿಲ್ಲ. ಮಹಾ ಪಾಪವನ್ನು ಮಾಡಿರುವ ಹೆಣ್ಣಾಗಿಹುಟ್ಟಿ ಈಪ್ರಕಾರ ನನ್ನ ಆಯುಃಪರಿಣಾಮವನ್ನೂ ತಿಳಿಯದೆ ಭ್ರಾನ್ತೆಯಾಗಿದ್ದೇನೆ— ಎಂದು ಭಾವವು.

(೪) ಪೆಣ್‌ಪಿಱನ್ದಾರೆಯ್ದುಮ್ ಪೆರುಮ್ ತುಯರ್
ಕಾಣ್‌ಕಿಲೇನ್ನು,
ಒಣ್‌ಶುಡರೋನ್ ವಾರಾದೊಳಿತ್ತಾನ್, ಇಮ್ಮಣ್ಣಳನ್ದ
ಕಣ್‌ಪೆರಿಯ ಶೆವ್ವಾಯೆಮ್‌ಕಾರೇಱು ವಾರಾನಾಲ್,
ಎಣ್‌ಪೆರಿಯ ಶಿನ್ದೈನೋಯ್ ತೀರ್‌ಪ್ಪಾರಾರೆನ್ನೈಯೇ.

ಪ್ರ|| ಪೆಣ್‌ಪಿಱನ್ದಾರ್—ಹೆಣ್ಣಾಗಿ ಹುಟ್ಟಿದವರು, ಎಯ್ದುಮ್—ಹೊಂದುವ, ಪೆರುಮ್ ತುಯರ್—ಮಹಾ ದುಃಖವನ್ನು, ಕಾಣ್‌ಕಿಲೇನ್—ನಾನು ನೋಡಲಾರೆನ್ನು, ಎನ್ನು—ಎಂದು, ಒಣ್‌ಶುಡರೋನ್—(ಉದಯಕಾಲದಲ್ಲಿ) ದರ್ಶನೀಯನಾದ ತೇಜಸ್ಸುಳ್ಳ ಸೂರ್ಯನೂ, ವಾರಾದು—ಬಾರದೆ, ಒಳಿತ್ತಾನ್—ಮರೆಸಿಕೊಂಡನು. ಇಮ್ಮಣ್ ಅಳನ್ದ—ಈ ಭೂಮಿಯನ್ನು ಅಳೆದ, ಪೆರಿಯಕಣ್ — ವಿಶಾಲವಾದ ನೇತ್ರಗಳುಳ್ಳ, ಶೆವ್ವಾಯ್—ಬಿಂಬಾಧರವುಳ್ಳ, ಎಮ್—ನಮ್ಮ, ಕಾರ್ ಏಱು—ನೀಲಮೇಘಶ್ಯಾಮನಾದ ವೃಷಭದಂತೆ ವೀರ್ಯವುಳ್ಳ ತ್ರಿವಿಕ್ರಮನಾದ ಸ್ವಾಮಿಯು, ವಾರಾನ್—ಬರುವುದಿಲ್ಲ. ಎಣ್‌ಪೆರಿಯ—ಮನಸ್ಸಿಗೆ ಅಗೋಚರವಾಗಿ ಮಹತ್ತಾದ, ಶಿನ್ದೈನೋಯ್—ಚಿನ್ತಾರೋಗದಿಂದ, ಎನ್ನೈತೀರ್ಪ್ಪಾರ್ — ನನ್ನನ್ನು ರಕ್ಷಿಸುವವರು, (ನನ್ನ ಈ ರೋಗವನ್ನು ಪರಿಹರಿಸುವವರು), ಆರ್—ಯಾರು ?

( ಶ-ಗಾ-ರ ‖ )—

ದೃಷ್ಟುಂ ನೈವ ಸಹೇಽದ್ಯ ದುಃಖಮಮಿತಂ ನಾರೀಜನಾನಾಮಿತಿ
ಕ್ವಾಪಿ ಶ್ರೀದಿನಕೃಚ್ಚ ಲೀನ ಇಹ ಮೇ ದೃಶ್ಯೋ ನ ನೀಲಾಮ್ಬುದಃ |
ಪದ್ಮಾಕ್ಷೋ ಹರಿರಚ್ಯುತೋಽಪ್ಯವನಿಜಿದ್ಬಿಮ್ಬಾಧರೋ ವಾಮನಃ
ಕೋ ವಾ ಹನ್ತ ! ಮನೋಽತಿಗಾಂ ಚ ಮಹತೀಂ ಚಿನ್ತಾರುಜಂ ಮೇ
ಹರೇತ್ ? ‖

ತಾ‖ ಹೆಣ್ಣಾಗಿ ಹುಟ್ಟಿದವರ ಮಹಾದುಃಖವನ್ನು ನಾನು ನೋಡಲಾರೆನೆಂದು ಸೂರ್ಯನೂ ಕೂಡ ಬಾರದೆ ಎಲ್ಲಿಯೋ ಮರೆಸಿಕೊಂಡಿದಾನೆ. ಈ ಭೂಮಿಯನ್ನು ಅಳೆದ (ಪದ್ಮಾಕ್ಷನಾಗಿ ಬಿಂಬಾಧರವುಳ್ಳ) ನೀಲಮೇಘಶ್ಯಾಮನಾದ ವೃಷಭದಂತೆ ವೀರ್ಯವುಳ್ಳ ತ್ರಿವಿಕ್ರಮನಾದ ಸ್ವಾಮಿಯೂ ಬಂದು ನನ್ನನ್ನು ರಕ್ಷಿಸುವುದಿಲ್ಲ. ಈ ನನ್ನ ಚಿನ್ತಾ ಮಹಾವ್ಯಾಧಿಯನ್ನು ಪರಿಹರಿಸುವವರು ಯಾರು ?

(೫) ಆರೆನ್ನೈ ಯಾರಾಯ್ವಾರನ್ನೈಯರುಮ್ ತೋೞಿಯರುಮ್
ನೀರೆನ್ನೇ ಯೆನ್ನಾದೇ ನೀಳಿರವುಮ್ ತುಞ್ಜುವರಾಲ್,
ಕಾರನ್ನಮೇನಿ ನಮ್ ಕಣ್ಣನುಮ್ ವಾರಾನಾಲ್,
ಪೇರೆನ್ನೈ ಮಾಯಾದಾಲ್ ವಲ್ವಿನೈಯೇನ್ ಪಿನ್ನಿನ್ಱೇ.

ಪ್ರ‖ ಅನ್ನೈಯರುಮ್-ಜನನಿಯರೂ, ತೋೞಿಯರುಮ್ – ಸಖಿಯರೂ, ನೀರ್-(ಇವಳ) ಶೀಲವು, ಎನ್ನೇ-ಎಂತಹುದು, ಎನ್ನಾದೇ-ಎಂದು ಆಲೋಚಿಸದೆ, ನೀಳ್-ದೀರ್ಘವಾದ, ಇರವುಮ್-ರಾತ್ರಿಯೆಲ್ಲಾ, ತುಞ್ಜುವರ್ – ನಿದ್ರೆಮಾಡುವರು. ಆಲ್-ಅಯ್ಯೋ!, ಕಾರನ್ನಮೇನಿ-ಕಾಳಮೇಘದಂತೆ ಶರೀರವುಳ್ಳ, ನಮ್ ಕಣ್ಣನುಮ್-ನಮ್ಮ ಶ್ರೀಕೃಷ್ಣನೂ, ವಾರಾನಾಲ್-ಬಾರನು. ಅಯ್ಯೋ !, ವಲ್ವಿನೈಯೇನ್-ಮಹಾಪಾಪವಂ ಮಾಡಿದ ನನಗೆ, ಪಿನ್ನಿನ್ಱು-ಹಿಂದೆ ನಿಂತು, ಪೇರ್-ನಾಮಮಾತ್ರವು, ಎನ್ನೈ-ನನ್ನನ್ನು, ಮಾಯಾದು – ಮುಗಿಯುವಂತೆ ಮಾಡುವುದಿಲ್ಲ (ನಾಶಹೊಂದಲು ಅವಕಾಶವಂ ಕೊಡುವುದಿಲ್ಲ). (ಹೀಗಿರುವಲ್ಲಿ) ಎನ್ನೈ-ನನ್ನನ್ನು, ಆರಾಯ್ವಾರ್-ಪರಿಶೀಲಿಸಿ ಕೂಗಿ ರಕ್ಷಿಸುವವರು, ಆರ್-ಯಾರು ?

( ಸ-ಗಾ-ರ || )—

**ಕಿಂ ಮೇ ಸ್ಯಾದಿತಿ ನೈವ ಹನ್ತ! ಜನನೀವರ್ಗಾಸ್ಸಖೀನಾಂ ಗಣಾಃ**
**ಪೃಚ್ಛನ್ತ್ಯದ್ಯ ನಿಶಾಸು ದೀರ್ಘಸಮಯಾಸ್ತೇ ತೇ ಹಿ ಸುಪ್ತಾಸ್ಸ್ವಯಮ್ |**
**ನೀಲಾಮ್ಭೋದತನುರ್ಹರಿರ್ಮಮ ವಿಭುಃ ಕೃಷ್ಣೋಽದ್ಯ ನಾಯಾತ್ಯಹೋ?**
**ಪಾಪಿನ್ಯಾ ಮಮ ನಾಮ ಶೋಷಯತಿ ಮಾಂ ! ಕೋ ವಾಽದ್ಯ**
**ಮಾಮುದ್ಧರೇತ್ ? ||**

ತಾ|| ಜನನಿಯರೂ ಸಖಿಯರೂ ನನ್ನ ಶೀಲವು ಎಂತಹುದು—ನನ್ನಗತಿ ಏನಾಗುವುದು—ಎಂದು ಆಲೋಚಿಸದೆ ರಾತ್ರಿಯೆಲ್ಲಾ ತಮ್ಮಪಾಡಿಗೆ ನಿದ್ರೆ ಮಾಡುತ್ತಾರೆ. ಅಯ್ಯೋ ! ಕಾಳಮೇಘದಂತೆ ಶರೀರಕಾನ್ತಿಯುಳ್ಳ ನಮ್ಮ ಕೃಷ್ಣನೂ ಬರುವುದಿಲ್ಲ. ಮಹಾಪಾಪವಂಮಾಡಿದ ನನಗೆ ಹಿಂಡೆ ನಿಂತಿರುವ ನನ್ನ ಹೆಸರೂಕೂಡ ನನ್ನನ್ನು ಮುಗಿಯುವಂತೆ ಮಾಡುವುದಿಲ್ಲ ಹೀಗಿರುವಲ್ಲಿ ನನ್ನನ್ನು ವಿಚಾರಿಸಿ ರಕ್ಷಿಸುವವರು ಯಾರು ?

(೬) ಪಿನ್ನಿನ್ಱು ಕಾದಲ್ನೋಯ್ ನೆಞ್ಜಮ್ ಪೆರಿದಡುಮಾಲ್,
ಮುನ್ನಿನ್ಱಿರಾವೂಳಿ ಕಣ್ಪುದೈಯ ಮೂಡಿೞ್ೞಾಲ್,
ಮನ್ನಿನ್ಱ ಶಕ್ಕರತ್ತೆಮ್ಮಾಯವನುಮ್ ವಾರಾನಾಲ್,
ಇನ್ನಿನ್ಱ ನೀಳಾವಿ ಕಾಪ್ಪಾರಾರಿವ್ವಿಡತ್ತೇ.

ಪ್ರ|| ಪಿನ್ನಿನ್ಱು– ಹಿಂದೆ ಅನುಸರಿಸಿ ಬಿಡದೆ ಇರುವ, ಕಾದಲ್ನೋಯ್– ಅಭಿನಿವೇಶವೆಂಬ ವ್ಯಾಧಿಯು, ನೆಞ್ಜಮ್ – ಮನಸ್ಸನ್ನು, ಪೆರಿದು–ಅಧಿಕವಾಗಿ, ಅಡುಮ್–ಕ್ಲೇಶಪಡಿಸುತ್ತದೆ ಮುನ್ನಿನ್ಱು–ಮುಂದೆ ನಿಂತು, ಇರಾ–ರಾತ್ರಿಯೆಂಬ, ಊೞಿ–ಕಲ್ಪವು, ಕಣ್ಪುದೈಯ–ಕಣ್ಣು ಹೊತುಹೋಗುವಹಾಗೆ, ಮೂಡಿೞ್ೞು– ಎಲ್ಲವನ್ನೂ ಮರೆಸಿಬಿಟ್ಟದೆ. (ಹೀಗೆ ಹಿಂದೆಮುಂದೆ ಸಹ ವಿರೋಧಿಗಳಿಂದ ನಾವು ಪೀಡಿತರಾಗಿರುವಲ್ಲಿ) ಮನ್ನಿನ್ಱ–ನಿತ್ಯಸನ್ನಿಹಿತವಾದ, ಶಕ್ಕರಮ್ – ಚಕ್ರವುಳ್ಳ, ಎಮ್ ಮಾಯವನುಮ್ – ನಮ್ಮ ಆಶ್ಚರ್ಯಗುಣಚೇಷ್ಟಿತಗಳುಳ್ಳ ಸ್ವಾಮಿಯು, ವಾರಾ–ಬರುವುದಿಲ್ಲ ಆಲ್–ಅಯ್ಯೋ !, ಇನ್ನಿನ್ಱ – ಅವಶಿಷ್ಟವಾದ, ಎೞ–ನನ್ನ, ನೀಳ್–ನಿತ್ಯವಾದ, ಇ ಆವಿ–ಈ ಆತ್ಮವಸ್ತುವನ್ನು' ಇವ್ವಿಡತ್ತು – ಈ ದಶೆಯಲ್ಲಿ, ಕಾಪ್ಪಾರ್ ಆರ್–ರಕ್ಷಿಸುವವರು ಯಾರು ?

( ಸ-ಗಾ-ರ || )—

ಪಶ್ಚಾನ್ಮಾಮನುಯಾತಿ ಕಾಮರುಗಿಯಂ ಚಿತ್ತಂ ತು ಸವಿಸ್ರಾಧ್ಯ ಮೇ !,
ರಾತ್ರಿರ್ಮೇ ಪುರತೋಽಸ್ತಿ ಕಲ್ಪಸದೃಶೀ ಚಕ್ಷುಸ್ತಿರೋಧಾಯ ಮೇ |
ಚಕ್ರೀ ಮೇ ಪ್ರಭುರದ್ಯ ಮಾಂ ನ ಸಮುಪೈತ್ಯಹ! ಕೋಽದ್ಯ ಸರ್ವಾತ್ಮನಾ
ಽಪ್ಯೇವಂ ನಿರ್ಗತಿಕಸ್ತು ಪಾಲಯತಿ ಮೇ ಜೀವಂ ದಶಾಯಾಮಿಹ ? ||

ತಾ|| ನನ್ನ ಅಭಿನಿವೇಶವೆಂಬ ವ್ಯಾಧಿಯು ನನ್ನನ್ನು ಹಿಂದೆ ಅನುಸರಿಸಿ ಬಿಡದೆ ಅಧಿಕವಾಗಿ ಕ್ಲೇಶಪಡಿಸುತ್ತಿದೆ. ರಾತ್ರಿಯೋ ಮುಂದೆ ನಿಂತು ಅತಿ ದೀರ್ಘವಾಗಿ ಒಂದು ಕಲ್ಪದಂತೆ ಬೆಳೆದು ಗಾಢಾನ್ಧಕಾರದಿಂದ ಕಣ್ಣು ಹೊತು ಹೋಗುವಹಾಗೆ ಎಲ್ಲವನ್ನೂ ಮರೆಸಿಬಿಟ್ಟಿದೆ. ಇಂತಹ ದಶೆಯಲ್ಲೂ ಚಕ್ರಪಾಣಿಯಾದ ನಮ್ಮ ಮಾಯಾಚೇಷ್ಟಿತನು (ಶ್ರೀಕೃಷ್ಣನು) ಬರುವುದಿಲ್ಲ. ಅಯ್ಯೋ ! ಹೀಗೆ ಉಳಿದು ಇರುವ ನನ್ನ ಈ ಆತ್ಮವಸ್ತುವನ್ನು ರಕ್ಷಿಸುವವರು ಯಾರು ?

(೭) ಕಾಪ್ಪಾರಾರಿವ್ವಿಡತ್ತು ಕ್ಕಙ್ಗಿರುಳಿನ್ ನುಣ್ ತುಳಿಯಾಯ್,
ಶೇಣ್ ಪಾಲಾದೂಳಿಯಾಯ್ ಶೆಲ್ ಕಿನ್ರ ಕಙ್ಗುಲ್ ವಾಯ್,
ತೂಪ್ಪಾಲ ವೆಣ್ ಶಙ್ಗುಶಕ್ಕರತ್ತನ್ ತೋನ್ರಾನಾಲ್,
ತೀಪ್ಪಾಲಾ ವಲ್ವಿನೈಯೇನ್ ತೆಯ್ವಙ್ಗಳ್ ಶೆಯ್ ಕೇನೋ.

ಪ್ರ|| ಇವ್ವಿಡತ್ತು – ಈ ಅವಸ್ಥೆಯಲ್ಲಿ, ಕಾಪ್ಪಾರ್-ರಕ್ಷಿಸುವವರು, ಆರ್-ಯಾರು ? ಕಙ್ಗು ಇರುಳ್-ಅತಿ ನಿಬಿಡವಾಗಿರುವ ಅನ್ಧಕಾರವನ್ನೂ, ನುಣ್ ತುಳಿ-ಸೂಕ್ಷ್ಮವಾದ ಹನಿಯನ್ನೂ, ಆಯ್-ಪಡೆದಿರುವ, ಶೇಣ್(ಳ್)-ಅತಿದೀರ್ಘವಾದ, ಪಾಲದು (ಪಾಲಾದು)-ಸ್ವಭಾವವುಳ್ಳ, ಊಳಿಯಾಯ್-ಕಲ್ಪವಾಗಿ, ಶೆಲ್ ಕಿನ್ರ-ನಡೆಯುತ್ತಿರುವ, ಕಙ್ಗುಲ್ ವಾಯ್-ರಾತ್ರಿಯಲ್ಲಿ, ತೂ-ಪರಿಶುದ್ಧವಾದ, ಪಾಲ-ಸ್ವಭಾವವುಳ್ಳ, ವೆಣ್ ಶಙ್ಗು-ಬಿಳೀಶಂಖವನ್ನೂ, ಶಕ್ಕರತ್ತನ್-ಚಕ್ರವನ್ನೂ ಧರಿಸಿರುವ ಸ್ವಾಮಿಯು, ತೋನ್ರಾನ್-ಎದುರಿಗೆ ಬರುವುದಿಲ್ಲ ತೀ-ಅಗ್ನಿಯಂತೆ, ಪಾಲ-(ದಹಿಸುವ) ಸ್ವಭಾವವುಳ್ಳ, ವಲ್ ವಿನೈಯೇನ್-ಮಹಾ ಪಾಪವನ್ನು ಮಾಡಿರುವ ನಾನು, ಎನ್ ಶೆಯ್ ಕೇನ್-ಏನುಮಾಡಬಲ್ಲೆನು ? ತೆಯ್ವಙ್ಗಳ್-ದೇವತೆಗಳಿರಾ ! (ನೀವು ಅನಿಮಿಷರಾದುದರಿಂದ ಕಣ್ಣು ಮುಚ್ಚದೆ ನೋಡಿಕೊಂಡು ಇದ್ದರೂ, ಈ ನನ್ನ ಅವಸ್ಥೆಯಲ್ಲಿ ಹೀಗೆ ಉದಾಸೀನರಾಗಿರುತ್ತೀರಿ—ಎಂದು ಭಾವವು)

( ಸ-ಗಾ-ರ ‖ )—

ಕೋ ವಾ ಸ್ಯಾದಿಹ ರಕ್ಷಿತಾ ಮಮ ? ನಿಶಾ ಸೇಯಾಂ ಹಿ ದೀರ್ಘಾ ಸ್ವಯಂ
ಭಾತ್ಯೇವಾದ್ಯ ತು ಕಲ್ಪವತ್ಸ ತು ಹರಿರ್ನಾಯಾತಿ ಮಾಂ ಮತ್ಪ್ರಿಯಃ |
ದೀಪ್ರಶ್ವೇತಸುಶಙ್ಖಚಕ್ರಭೃದಹೋ ! ಪಾಪಾನಿ ಮೇ ದಾಹಕಾ-
ನ್ಯೇವಂ ತಾಪಕರಾಣಿ ಹನ್ತ ! ಕಿಮಹೋ! ಕುರ್ಯಾಮಹಂ ದೇವತಾಃ ? ‖

ತಾ‖ ಈ ಅವಸ್ಥೆಯಲ್ಲಿ ನನಗೆ ರಕ್ಷಕರು ಯಾರು ? ಗಾಢಾನ್ಧಕಾರವುಳ್ಳ ಮತ್ತು ಸೂಕ್ಷ್ಮವಾದ ಹನಿಯುಳ್ಳ ಈ ರಾತ್ರಿಯು ಕಲ್ಪದಂತೆ ಅತಿದೀರ್ಘವಾಗಿ ಬೆಳೆದು ನಡೆಯುತ್ತಿದ್ದಾಗ್ಯೂ ಶಂಖಚಕ್ರಧಾರಿಯಾದ ನಮ್ಮ ಸ್ವಾಮಿಯು ಪ್ರತ್ಯಕ್ಷವಾಗಿ ಬರುವುದಿಲ್ಲ. ಮಹಾಪಾಪವಂ ಮಾಡಿರುವ ನಾನು ಏನುಮಾಡಬಲ್ಲೆನು? ದೇವತೆಗಳಿರಾ ! ನೀವುಗಳು ಅನಿಮಿಷರಾಗಿ ಈ ನನ್ನ ಅವಸ್ಥೆಯನ್ನು ಸನ್ತತವಾಗಿ ಕಣ್ಣುಮುಚ್ಚದೆ ನೋಡುತ್ತಿದ್ದರೂ ಹೀಗೆ ಉದಾಸೀನರಾಗಿ ಇರಬಹುದೇ ? ಎಂದು ತಾತ್ಪರ್ಯ.

(೮) ತೆಯ್ವಙ್ಗಾಳೇ ಎಶೆಯ್‌ಕೇನೋರಿರವೇೞ್‌ಊೞಿಯಾಯ್,
ಮೆಯ್‌ವನ್ದು ನಿನ್ರೆನದಾವಿ ಮೆಲಿವಿಕ್ಕುಮ್,
ಕೈವನ್ದ ಶಕ್ಕರತ್ತೆನ್ ಕಣ್ಣನುಮ್ ವಾರಾನಾಲ್,
ತೈವನ್ದ ತಣ್‌ತೆನ್ರಲ್ ವೆಮ್‌ಶುಡರಿಲ್ ತಾನಡುಮೇ.

ಪ್ರ‖ ತೆಯ್ವಙ್ಗಾಳ್—ದೇವತೆಗಳಿರಾ !, ಎನ್ ಶೆಯ್‌ಕೇನ್ – (ನಾನು) ಏನು ಮಾಡಲಿ ? ಓರ್ ಇರವು-ಒಂದು ರಾತ್ರಿಯು, ಏೞ್ ಊೞಿಯಾಯ್—ಏಳು ಕಲ್ಪಗಳಾಗಿ, ಮೆಯ್‌ವನ್ದು – ಬುದ್ಧಿಪೂರ್ವಕವಾಗಿ ಬಂದು, ನಿನ್ರು—ಎದುರಿಗೆ ನಿಂತು, ಎನದು ಆವಿ—ನನ್ನ ಪ್ರಾಣವನ್ನು, ಮೆಲಿವಿಕ್ಕುಮ್—ಕೃಶಮಾಡುತ್ತಿದೆ ಕೈವನ್ದ—ಹಸ್ತಗತವಾದ, ಶಕ್ಕರತ್ತು – ಚಕ್ರವನ್ನು ಧರಿಸಿರುವ, ಎನ್ ಕಣ್ಣನುಮ್—ನನ್ನ ಶ್ರೀಕೃಷ್ಣನೂ, ವಾರಾ—ಬರುವುದಿಲ್ಲ. ಆಲ್—ಅಯ್ಯೋ ! ತೈವನ್ದ—ಮುಟ್ಟಿನೋಡಿ (ಹಿಂಸಿಸುವುದಕ್ಕೆ) ಬಂದ, ತಣ್—ಅತಿಶೀತಳವಾದ, ತೆನ್ರಲ್—ಗಾಳಿಯು, ವೆಮ್‌ಶುಡರಿಲ್ – ದಹಿಸುವ ಅಗ್ನಿಗಿಂತ, ಅಡುಮ್ – ತಾಪವನ್ನು ಹೆಚ್ಚಾಗಿ ಉಂಟುಮಾಡುತ್ತಿದೆ.

( ಸ-ಗಾ-ರ || )—

ದೇವಾಃ! ಕಿಂ ಕರವಾಣಿ ರಾತ್ರಿರಧುನಾ ಮೇ ಸಪ್ತಕಲ್ಪಾಯತೇ !
ಪ್ರಾಣಾನ್ ಮೇ ಕೃಶಯತ್ಯಹೋ! ಬಹುತಮಾಮಗ್ರೇ ಭವನ್ತೀ ಸ್ವಯಮ್|
ನಾಯಾತ್ಯೇವ ಮನು ಪ್ರಭುಃ ಪ್ರಿಯತನುಃ ಕೃಷ್ಣಸ್ತು ಚಕ್ರೀ ಹರಿ-
ರ್ಮಾಮನ್ವಿಷ್ಯ ಹಿ ಚನ್ದ್ರಿಕಾಽಪಿ ದಹತಿ ಜ್ವಾಲಾಮಯೀ ಭಾತಿ ಮೇ ||

ತಾ|| ದೇವತೆಗಳಿರಾ ! ನಾನೇನು ಮಾಡಲಿ ? ಒಂದು ರಾತ್ರಿಯು ಏಳು ಕಲ್ಪಗಳಾಗಿ ಬೆಳೆದು ಎದುರಿಗೆ ಬಂದು ನಿಂತು ನನ್ನ ಪ್ರಾಣವನ್ನು ಕೃಶಮಾಡುತ್ತಿದೆ. ಚಕ್ರಪಾಣಿಯಾದ ಶ್ರೀಕೃಷ್ಣನು ಇನ್ನೂ ಬರುವುದೇ ಇಲ್ಲ. ಅಯ್ಯೋ ! ನನ್ನನ್ನು ಹಿಂಸಿಸುವುದಕ್ಕಾಗಿ ಅತಿ ಶೀತಳವಾದ ಗಾಳಿಯು ಬಂದು ಸವರಿನೋಡಿ ಅಗ್ನಿಗಿಂತ ಹೆಚ್ಚಾಗಿ ಸನ್ತಾಪವನ್ನು ಉಂಟುಮಾಡುತ್ತಿದೆ (ಏನು ಮಾಡಲಿ ? — ಎಂದು ತಾತ್ಪರ್ಯ.)

(೯) ವೆಮ್ ಶುಡರಿಲ್ ತಾನಡುಮಾಲ್ ಪೀಳ್ಗಿರುಳಿನ್
ನುಣ್‌ತುಳಿಯಾಯ್,
ಅಮ್‌ಶುಡರವೆಯ್ಯೋನಣಿನೆಡುಮ್ ತೇರ್ ತೋನ್ಱಾದಾಲ್,
ಶೆಮ್‌ಶುಡರ್ ತಾಮರೈಕ್ಕಣ್ ಶೆಲ್ವನುಮ್ ವಾರಾನಾಲ್,
ನೆಞ್ಜುಡರ್ ತೀರ್‌ಪ್ಪಾರಿನಿಯಾರ್ ನಿನ್ಱುರುಕಕಿನ್ಱೇನೇ.

ಪ್ರ|| ಪೀಳ್ಗು ಇರುಳ್-ಅತಿ ನಿಬಿಡವಾಗಿ ಉಬ್ಬಿ ಇರುವ ಅನ್ಧಕಾರವುಳ್ಳ, ನುಣ್‌ತುಳಿ ಆಯ್ – ಸೂಕ್ಷ್ಮವಾದ ಹನಿಯ ಕಣಗಳುಳ್ಳದುದಾಗಿ (ರಾತ್ರಿಯು), ತಾನ್-ತಾನು, ವೆಮ್ ಶುಡರಿಲ್-ತಪಿಸುವ ಅಗ್ನಿಗಿಂತ, ಅಡುಮ್ ಹೆಚ್ಚಾಗಿ ದಹಿಸುತ್ತಿದೆ. ಆಲ್-ಅಯ್ಯೋ ! ಅಮ್ ಶುಡರ-ರಮ್ಯವಾದ ಕಾಂತಿಯುಳ್ಳ, ವೆಯ್ಯೋನ್-ಆದಿತ್ಯನ, ಅಣಿ-ಅಲಂಕಾರಪ್ರಾಯವಾದ, ನೆಡುಮ್ – ಉನ್ನತವಾದ, ತೇರ್-ರಥವೂ, ತೋನ್ಱಾದು-ಕಣ್ಣಿಗೆ ಕಾಣುವುದಿಲ್ಲ. ಆಲ್-ಅಯ್ಯೋ ! ಶೆಮ್ ಶುಡರ್-ರಕ್ತವರ್ಣವುಳ್ಳ ಕಾನ್ತಿಯೊಡನೆಕೂಡಿದ, ತಾಮರೈಕ್ಕಣ್ – ತಾವರೆಯಂತೆ ಕಣ್ಣುಗಳುಳ್ಳ, ಶೆಲ್ವನುಮ್-(ನಮ್ಮ) ಶ್ರೀಮನ್ತನಾದ ಸ್ವಾಮಿಯೂ, ವಾರಾನ್-ಬರುವುದಿಲ್ಲ. ಆಲ್ – ಅಯ್ಯೋ ! (ಆದುದರಿಂದ) ನಿನ್ಱು – ಈಪ್ರಕಾರ ನಿಂತು, ಉರುಕುಕಿನ್ಱೇನ್-ಕರಗಿಹೋಗುತ್ತಿದೇನೆ ಇನಿ-ಹೀಗಿರುವಲ್ಲಿ, ನೆಞ್ಜುಡರ್-(ನನ್ನ) ಮನೋದುಃಖವನ್ನು, ತೀರ್‌ಪ್ಪಾರ್-ನಿವಾರಣಮಾಡುವವರು, ಆರ್-ಯಾರು ?

( ಸ–ಗಾ–ರ || )—

ಸೇಯಂ ಹನ್ತ ! ನಿಶಾ ಹಿ ಸಾನ್ದ್ರತಮಸಾ ಶೀತಾ ಹಿಮೇನಾವೃತಾ–
ಽಪ್ಯೇವಂ ಮಾಂ ದಹತಿ ಸ್ವಯಂ ದಹನನನ್ಯಾದ್ಯಾಪಿ ದೃಶ್ಯೋ ರಥಃ |
ಭಾನೋರುತ್ತ್ವವ ತೇಜಸಾ ! ಮಮ ವಿಭುಃ ಕೃಷ್ಣಸ್ತು ನಾಯಾತ್ಯಹೋ!
ಪದ್ಮಾಕ್ಷಃ ಕಿಲ ಭಾಗ್ಯವಾನಿಹ! ಮುಹುತ್ಕೋ ಮೇಽದ್ಯ ದುಃಖಂ ಹರೇತ್?||

ತಾ|| ಅತಿ ನಿಬಿಡವಾಗಿರುವ ಅನ್ಧಕಾರವುಳ್ಳ ಮತ್ತು ಸೂಕ್ಷ್ಮವಾದ ಹನಿಯ ಬಿಂದುಗಳುಳ್ಳ ರಾತ್ರಿಯು ಅಗ್ನಿಗಿಂತ ಹೆಚ್ಚಾಗಿ ದಹಿಸುತ್ತಿದೆ ಅಯ್ಯೋ ! ರಮಣೀಯಕಾನ್ತಿಯುಳ್ಳ ಆದಿತ್ಯನ (ದಿವ್ಯಾಲಂಕಾರಭೂತವಾಗಿ ಉನ್ನತವಾದ) ರಥವೂ ಕಣ್ಣಿಗೆ ಕಾಣುವುದಿಲ್ಲ (ಸೂರ್ಯೋದಯ ಸೂಚನೆಯೂ ಇಲ್ಲ) ಆಯ್ಯೋ! ಪುಂಡರೀಕಾಕ್ಷನಾದ ಶ್ರೀಮನ್ತನೂ (ಸ್ವಾಮಿಯೂ) ಬರುವುದಿಲ್ಲ ಅಯ್ಯೋ! ಈ ಅವಸ್ಥೆಯಲ್ಲಿ ನಿಂತು ಕರಗಿಹೋಗುತ್ತಿದೇನೆ ಈ ನನ್ನ ಮನೋದುಃಖವನ್ನು ಪರಿಹರಿಸುವವರು ಯಾರು ಇದಾರೆ ?

(೧೦) ನಿನ್ರುರುಕುಕಿನ್ರನೇ ಪೋಲ ನೆಡುವಾನಮ್,
ಶೆನ್ರುರುಕಿ ನುಣ್‌ತುಳಿಯಾಯ್ ಚ್ಚೆಲ್‌ಕಿನ್ರ ಕಙ್ಗುಲ್‌ವಾಯ್,
ಅನ್ರೊರುಕಾಲ್ ವೈಯುಮೆಳನ್ದ ಪಿರಾನ್ ವಾರಾನೆನ್ರು,
ಒನ್ರೊರುಕಾಲ್ ಶೊಲ್ಲಾದುಲಕೋವುಱಙ್ಗುಮೇ

ಪ್ರ|| ನಿನ್ರು–ನಿಂತು, ಉರುಕುಕಿನ್ರನೇಪೋಲ – ನಾನು ಕರಗಿಹೋಗುವಂತೆಯೇ, ನೆಡುವಾನಮ್ – ಮಹಾವಕಾಶವುಳ್ಳ ಆಕಾಶವೂ, ಶೆನ್ರು–ಕ್ಷಯಿಸಿಹೋಗಿ, ಉರುಕಿ ನುಣ್‌ತುಳಿಯಾಯ್ – ಕರಗಿಹೋಗಿ ಸೂಕ್ಷ್ಮವಾಗುವ ಹನಿಯ ಬಿಂದುಗಳುಳ್ಳದುದಾಗಿ, ಶೆಲ್‌ಕಿನ್ರ–ನಡೆಯುವ, ಕಙ್ಗುಲ್‌ವಾಯ್–ರಾತ್ರಿಯಲ್ಲಿ, ಅನ್ರು–ಆ ಪೂರ್ವಕಾಲದಲ್ಲಿ, ಒರುಕಾಲ್–ಒಂದು ಸಮಯದಲ್ಲಿ, ವೈಯುಮ್ ಅಳನ್ದ–ಭೂಮಿಯನ್ನು ಅಳೆದ, ಪಿರಾನ್ – ಲೋಕೋಪಕಾರಕನು, ವಾರಾನ್ – ಬರುತ್ತಾನೋ ಬರುವುದಿಲ್ಲವೋ, ಎನ್ರು–ಎಂದು, ಒನ್ರು–ಒಂದು ಮಾತನ್ನು, ಒರುಕಾಲ್–ಒಂದು ಸಲ, ಶೊಲ್ಲಾದು–ಹೇಳದೆ, ಉಲಕು–ಲೋಕವೆಲ್ಲಾ, ಉಱಙ್ಗುಮ್–ನಿದ್ರೆಮಾಡುತ್ತಿದೆ. ಓ- ಇದೇನು ಮೌಢ್ಯ ? (ಎಂದು ಭಾವವು)

( ಸ-ಗಾ-ರ || )—

ಸನ್ತಪ್ತಾ ಯದಹಂ ದ್ರವೀಕೃತತನುಸ್ಸೇಯಂ ಚ ರಾತ್ರಿಸ್ತ್ಥಾ-
ಹ್ಯಾಕಾಶೇ ತುಹಿನದ್ರವೈರುಪಗತಾ ಭಾತ್ಯೇವ ದೀರ್ಘಾ ಸ್ವಯಮ್ |
ಲೋಕಾ ಪಾನತಲೇನ ಯಃ ಪ್ರಭುರಹೋ! ಚಕ್ರಾಮ ಪೂರ್ವಂ ಹರಿ-
ರ್ನಾಯಾತ್ಯೇವ ಸ ಇತ್ಯಪೀಹ ನ ವದತ್ಯೇವಂ ಹಿ ಸುಪ್ತಂ ಜಗತ್ ||

ತಾ || ನಾನು ಕರಗಿಹೋಗುವಂತೆಯೇ ಈ ರಾತ್ರಿಯಲ್ಲಿ ವಿಶಾಲವಾದ ಆಕಾಶವೆಲ್ಲಾ ಕ್ಷಯಿಸಿ, ಸೂಕ್ಷ್ಮವಾದ ಹನಿಯ ಬಿಂದುಗಳೂ ಕರಗಿಹೋಗುತ್ತಿವೆ. ಇನ್ತಹ ರಾತ್ರಿಯಲ್ಲೂ—ತ್ರಿವಿಕ್ರಮಾವತಾರವಂ ಮಾಡಿದ ನಮ್ಮ ಸ್ವಾಮಿಯು ಬರುತ್ತಾನೋ ಬರುವುದಿಲ್ಲವೋ?—ಎಂದು ಒಂದು ಮಾತನ್ನಾದರೂ ಹೇಳದೆ ಈ ಲೋಕವೆಲ್ಲಾ ನಿದ್ರೆಮಾಡುತ್ತಿದೆ. ಇದೇನು ಮೌಢ್ಯವೋ!—ಎಂದು ತಾತ್ಪರ್ಯ.

(೧೧) ಉಱಙ್ಗುವಾಳ್ಪೋಲ್ ಯೋಗುಶೆಯ್ದ ಪೆರುಮಾನೈ,
ಶಿಱನ್ದ ಪೊೞಿಲ್ಶೂೞ್ ಕುರುಕೂರ್ ಚ್ಚಡಕೋಪನ್ಶೊಲ್,
ನಿಱವಿಲ್ಕಿಳರ್ನ್ದ ವೆನ್ದಾದಿ ಆಯಿರತ್ತುಳಿಪ್ಪತ್ತಾಲ್,
ಇಱನ್ದು ಪೋಯ್ ವೈಕುನ್ದಮ್ ಶೇರಲಾವಾಱೆನ್ಗನೇಯೋ.

ಪ್ರ|| ಉಱಙ್ಗುವಾಳ್ಪೋಲ್–ನಿದ್ರೆಮಾಡುವವನಂತೆ, ಯೋಗು–ಜಗದ್ರಕ್ಷಣ ಚಿನ್ತಾರೂಪವಾದ ಯೋಗಧ್ಯಾನವನ್ನು, ಶೆಯ್ದ–ಮಾಡಿ (ಶಯನದಲ್ಲಿ) ಇರುವ, ಪೆರುಮಾನೈ - ಸರ್ವೇಶ್ವರನನ್ನು ಕುರಿತು, ಶಿಱನ್ದ–ಸಮೃದ್ಧವಾದ, ಪೊೞಿಲ್–ಉದ್ಯಾನಗಳಿಂದ, ಶೂೞ್ – ಪರಿವೃತವಾದ, ಕುರುಕೂರ್ – ಕುರುಕಾಪುರಿಯ, ಶಡಕೋಪನ್–ಶ್ರೀ ಶಠಾರಿಮುನಿಯು, ಶೊಲ್ – ಹೇಳಿದ (ರಚಿಸಿದ), ನಿಱಮ್–ಗಾನರೀತಿಯು, ಕಿಳರ್ನ್ದ–ಅಧಿಕವಾಗಿ ಪ್ರಕಾಶಿಸುವ, ಅನ್ದಾದಿ–ಅನ್ತಾದಿ ಪದ್ಯ ರೂಪವಾದ, ಆಯಿರತ್ತುಳ್-ಸಹಸ್ರಗಾಥಾವಳಿಯಲ್ಲಿ, ಇಪ್ಪತ್ತಾಲ್-ಈ ದಶಕದಿಂದ, ಇಱನ್ದು–ಶರೀರವಿಯೋಗವಾದ ಒಡನೇ, ಪೋಯ್–(ಅರ್ಚಿರಾದಿ ಮಾರ್ಗದಿಂದ) ಹೋಗಿ, ವೈಕುನ್ದಮ್–ಪರಮಪದವನ್ನು, ಶೇರಲಾವಾಱು–ಸೇರದೆ ಇರೋಣವು, ಎಙ್ಗನೇಯೋ–ಹೇಗೋ? (ಪರಮಪದದಲ್ಲಿ ಸೇರೋಣವು ನಿಶ್ಚಿತವೆಂದು ಭಾವವು).

( ಸ-ಗಾ-ರ ॥ )—

ಕ್ಷೀರಾಬ್ಧೌ ಶಯಿತಂ ಚ ಯೋಗಶಯನಂ ನಾಥಂ ಹರಿಂ ಶ್ರೀಧರಂ.
ಸ್ತೋತುಂ ಶ್ರೀಕುರುಕಾಪುರಪ್ರಭುರಯಂ ಚಕ್ರೇ ಶಠಾರಿರ್ಮುನಿಃ ।
ಸಾಹಸ್ರಂ ಶುಭಮುತ್ತಮಂ ಸುರುಚಿರಂ ತ್ವನ್ತ್ರಾದಿರೂಪಂ ಸುಧೀ-
ಸ್ತತ್ರೇದಂ ದಶಕಂ ಶರೀರವಿರಹೇ ದಿವ್ಯಂ ಪದಂ ಪ್ರಾಪಯೇತ್ ॥

ತಾ॥ (ಈ ದಶಕವನ್ನು ಅನುಸನ್ಧಾನಮಾಡಿದರೆ ಶರೀರವಿಯೋಗವಾದ ಒಡನೆ ಪರಮಪದಪ್ರಾಪ್ತಿಯುಂಟಾಗುವುದು ಸಿದ್ಧವೆಂದು ಹೇಳುತ್ತಾರೆ). ನಿದ್ರೆ ಮಾಡುವವನಂತೆ (ಕ್ಷೀರಾಬ್ಧಿಯಲ್ಲಿ) ಜಗದ್ರಕ್ಷಣಚಿನ್ತಾರೂಪವಾದ ಯೋಗಧ್ಯಾನವನ್ನು ಮಾಡುತ್ತಿರುವ ಸರ್ವೇಶ್ವರನನ್ನು ಕುರಿತು ಶ್ರೀ ಕುರುಕಾಪುರಿಯ ಶಠಾರಿ ಮುನಿಯು (ಸ್ತೋತ್ರರೂಪವಾಗಿ) ಅನ್ತಾದಿ ಗಾನರೂಪವಾಗಿ ರಚಿಸಿದ ಸಹಸ್ರ ಪದ್ಯಮಾಲೆಯೊಳು ಈ ದಶಕವು ಪಠನಮಾಡುವವರಿಗೆ ಶರೀರವಿಯೋಗವಾದ ಒಡನೆಯೇ ಪರಮಪದಪ್ರಾಪ್ತಿಯನ್ನುಂಟುಮಾಡುವುದು ಸಿದ್ಧವೆಂದು—ತಾತ್ಪರ್ಯ.

( ದ್ರ-ಉ-ಸಂ )—

ತಾಂ ಚ ತ್ವರಾಂ ಪಿದಧತೀ ಸಕಲೇನ್ದ್ರಿಯಾಣಾಂ –
ಮಾಚ್ಛಾದಿಕಾ ಸವಿಧಗಾಂಶ್ಚ ವಿಸಂಜ್ಞಯನ್ತೀ ।
ವೇಲಾತಿಗಾ ವಿರಹಿಣೀತ್ವಜುಷೋ ಮುನೇಸ್ತು
ಮೋಹಾಹ್ವಯಾ ರಜನಿರಭ್ಯುದಿತಾ ಚತುರ್ಥೇ ॥

( ದ್ರ-ಉ-ತಾ-ರ)—

ಆಪದ್ಬನ್ಧುತ್ವಕೀರ್ತ್ಯಾ ಯದುಕುಲಜನನಾದ್ಧೀರವೀರತ್ವಕೀರ್ತ್ಯಾ
ಲೋಕಾನಾಂ ವಿಕ್ರಮಾಚ್ಚಾಶ್ರಿತದುರಿತಹೃತೇರದ್ಭುತೈಶ್ಚೇಷ್ಟಿತೈಶ್ಚ ।
ಚಕ್ರಾದ್ಯಸ್ತ್ರಾನ್ವಿತತ್ವಾತ್ಕಮಲನಯನತಾಸಮ್ಪದಾ ವಾಮನತ್ವಾತ್
ಕ್ಷೀರಾಬ್ಧೌ ಶೇಷಶಾಯೀ ಜಗದವನಮಹಾದೀಕ್ಷಿತೋಽಜ್ಞಾಯಿ ತೇನ ॥

(ಈ ಚತುರ್ಥದಶಕದ ಸಾರಾಂಶ—)

ಈ ನಾಲ್ಕನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ಅತಿ ತೀವ್ರವಾದ ವಿರಹವೇದನೆಯಿಂದ ರಾತ್ರಿಯು ಕಲ್ಪಸದೃಶವಾಗಿ ತೋರುವುದರಿಂದ ತನ್ನ ದುಸ್ಸಹವಾದ ಆರ್ತಿಯನ್ನೂ ಅವನ ಆಪದ್ಬನ್ಧುತ್ವಾದಿ ಗುಣಾತಿಶಯವನ್ನೂ ಸೌನ್ದರ್ಯಾದಿ ಪೂರ್ತಿಯನ್ನೂ ಅವತಾರಚೇಷ್ಟಿತಗಳನ್ನೂ ಸ್ಮರಿಸಿ ಸ್ಮರಿಸಿ "ನಾನು ಹೇಗೆ ಜೀವಿಸಲಿ?"—ಎಂದು ಮೊರೆಯಿಡುತ್ತಾರೆ.

ಶ್ರೀಃ

# ಪಞ್ಚಮಶತಕದಲ್ಲಿ—ಪಞ್ಚಮದಶಕ.

## (ಎಙ್ಙನೇಯೋ ಅನ್ನೈಮೀರ್‌ಕಾಳ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಹೊಂದಿ, ತಿರುಕ್ಕುಱುಙ್ಗುಡಿ ಎಂಬ ದಿವ್ಯದೇಶದ ಸ್ವಾಮಿಯಾದ ನಮ್ಬಿಯೆಂಬ ಭಗವನ್ತನ ದಿವ್ಯಸೌನ್ದರ್ಯಾದಿಗಳನ್ನು ಸ್ಮರಿಸಿ ಸ್ಮರಿಸಿ, ತದಲಾಭ ದಿಂದ ಖಿನ್ನೆಯಾಗಿ ಸಖೀಜನರನ್ನೂ ಮಾತೃವರ್ಗ ವನ್ನೂ ಕುರಿತು ತನ್ನ ದಶೆಯನ್ನು ಹೇಳುವ ನಾಯಕಿಯ ವಚನವನ್ನು ಅನುವದಿಸುತ್ತಾರೆ.)

---

(೧) ಎಙ್ಙನೇಯೋ ಅನ್ನೈಮೀರ್‌ಕಾಳೆನ್ನೈ ಮುನಿವದು ನೀರ್,
ನಙ್ಗಳ್ ಕೋಲತ್ತಿರುಕ್ಕುಱುಙ್ಗುಡಿನಮ್ಬಿಯೈ
ನಾನ್ ಕಣ್ಡಪಿನ್,
ಶಙ್ಗಿನೋಡುಮ್ ನೇಮಿಯೋಡುಮ್
ತಾಮರೈಕ್ಕಣ್‌ಕಳೋಡುಮ್,
ಶೆಙ್ಗನಿವಾಯೊನ್ರಿನೋಡುಮ್ ಶೆಲ್‌ಕಿನ್ರದೆನ್ನೆಞ್ಜಮೇ.

ಪ್ರ|| ಅನ್ನೈಮೀರ್‌ಕಾಳ್-ಜನನಿಯರೇ ! ನೀರ್—ನೀವು, ಎನ್ನೈ-ನನ್ನನ್ನು ಕುರಿತು, ಮುನಿವದು—ಕೋಪಮಾಡೋಣವು, ಎಙ್ಙನೇ ಓ- ಹೇಗೆ ಉಚಿತವಾಗಿರು ವುದು ? ನಙ್ಗಳ್—ನಮ್ಮ, ಕೋಲತ್ತಿರುಕ್ಕುಱುಙ್ಗುಡಿ ನಮ್ಬಿಯೈ—ದರ್ಶನೀಯ ನಾದ ತಿರುಕ್ಕುಱುಙ್ಗುಡಿ ದಿವ್ಯದೇಶದ ಸ್ವಾಮಿಯನ್ನು, ನಾನ್-ನಾನು, ಕಣ್ಡಪಿನ್— ಕಂಡಮೇಲೆ, ಶಙ್ಗಿನೋಡುಮ್—ಶಂಖದೊಡನೆಯೂ, ನೇಮಿಯೋಡುಮ್—ಚಕ್ರ ದೊಡನೆಯೂ, ತಾಮರೈಕ್ಕಣ್‌ಕಳೋಡುಮ್—ತಾವರೆಯಂತಿರುವ ನೇತ್ರಗಳೊಡ ನೆಯೂ, ಶೆಙ್ಗನಿವಾಯೊನ್ರಿನೋಡುಮ್—ಅದ್ವಿತೀಯವಾದ ಬಿಮ್ಬಫಲಸದೃಶವಾದ ವಕ್ತ್ರ (ಅಧರ) ದೊಡನೆಯೂ, ಎನ್ ನೆಞ್ಜಮ್—ನನ್ನ ಮನಸ್ಸು, ಶೆಲ್‌ಕಿನ್ರದು— ಅವುಗಳಲ್ಲೇ ಸಕ್ತವಾಗಿ ನಡೆಯುತ್ತಿದೆ. (ಅವುಗಳನ್ನು ಬಿಟ್ಟು ಇರಲಾರದು).

( ಸ-ಗಾ-ರ

ಮಾಂ ಕಿಂ ನಿನ್ದಥ ಯೂಯಮದ್ಯ ಜನನೀವರ್ಗಾಃ! ಪ್ರಿಯಂ ಸುನ್ದರಂ
ದೃಷ್ಟ್ವಾ ಪೂರ್ಣಮಮುಂ ಕುರಙ್ಗನಗರೀನಾಥಂ ಕುಲೇನ್ದ್ರಂ ಚ ನಃ|
ಚಿತ್ತಂ ಮೇ ನನು ಶಙ್ಖಚಕ್ರಯುಗಳೇ ಬಿಮ್ಬಾಧರೇ ಶ್ರೀಹರೇ-
ರ್ನೇತ್ರಾಮ್ಭೋಜಯುಗೇ ಚ ಸಕ್ತಮನಿಶಂ ತೈರೇವ ಯಾತಿ ಸ್ವಯಮ್||

ತಾ|| ಎಲೈ ಜನನಿಯರೇ! ನೀವು ನನ್ನನ್ನು ಕುರಿತು ಕೋಪಮಾಡೋಣವು ಉಚಿತವಲ್ಲ! ನೀವೇ ಪರಿಶೀಲಿಸಿನೋಡಿರಿ. ನಮ್ಮ ತಿರುಕ್ಕುಱುಙ್ಗುಡಿ ನಂಬಿಯೆಂಬ ಸುನ್ದರಮೂರ್ತಿಯನ್ನು ನಾನು ಕಂಡಮೇಲೆ, ಅವನ ಶಂಖ ಚಕ್ರಗಳೊಡನೆಯೂ, ಪದ್ಮಸದೃಶವಾದ ನೇತ್ರಗಳೊಡನೆಯೂ, ಬಿಂಬಫಲಸದೃಶವಾದ ಅಧರದೊಡನೆಯೂ ನನ್ನ ಮನಸ್ಸು ಯಾವಾಗಲೂ ಸಂಚರಿಸುತ್ತಿದೆ. (ಅವುಗಳನ್ನು ಬಿಟ್ಟು ಇರಲಾರದು.)

(೨) ಎನ್ನೈಙ್ಞ್ನಾಲ್ ನೋಕ್ಕಿ ಕ್ಕಾಣೀರೆನ್ನೈ ಮುನಿಯಾದೇ,
ತೆನ್ನನ್ ಶೋಲೈ ತ್ತಿರುಕ್ಕುಱುಙ್ಗುಡಿನಮ್ಬಿಯೈ ನಾನ್
ಕಣ್ಡಪಿನ್,
ಮಿನ್ನುನೂಲುಮ್ ಕುಣ್ಡಲಮುಮ್ ಮಾರ್ಪಿಲ್
ತ್ತಿರುಮಱುವುಮ್,
ಮನ್ನುಪೂಣುಮ್ ನಾನ್ಗುತೋಳುಮ್ ವನ್ದೆಙ್ಗುಮ್
ನಿನ್ಱಿಡುಮೇ.

ಪ್ರ||(ಜನನಿಯರೇ!) ಎನ್ನೈ- ನನ್ನನ್ನು, ಮುನಿಯಾದೇ-ಕೋಪಿಸಿಕೊಳ್ಳದೆ ಎನ್ ನೆಙ್ಞ್ನಾಲ್ - ನನ್ನ ಭಾವಗಳುಳ್ಳ ಮನಸ್ಸಿನಿಂದ, ನೋಕ್ಕಿ ಕ್ಕಾಣೀರ್ - ಅನುಭವಿಸಿನೋಡಿರಿ. ತೆನ್ ನನ್ ಶೋಲೈ-ದಕ್ಷಿಣದಿಕ್ಕಿನಲ್ಲಿ ಒಳ್ಳೇ ಉದ್ಯಾನಗಳುಳ್ಳ, ತಿರುಕ್ಕುಱುಙ್ಗುಡಿ-ತಿರುಕ್ಕುಱುಙ್ಗುಡಿ ದಿವ್ಯದೇಶದ, ನಮ್ಬಿಯೈ-(ಪರಿಪೂರ್ಣನಾದ) ಸ್ವಾಮಿಯನ್ನು, ನಾನ್ ಕಣ್ಡ ಪಿನ್ - ನಾನು ಕಂಡಮೇಲೆ, ಮಿನ್ನುನೂಲುಮ್ - ಪ್ರಕಾಶಿಸುವ ಯಜ್ಞೋಪವೀತವೂ, ಕುಣ್ಡಲಮುಮ್ - ಮಕರಕುಂಡಲಗಳೂ, ಮಾರ್ಪಿಲ್ - ವಕ್ಷಸ್ಸ್ಥಲದಲ್ಲಿರುವ, ತಿರುಮಱುವುಮ್ - ಶ್ರೀವತ್ಸಲಾಂಛನವೂ, ಮನ್ನುಪೂಣುಮ್ - ಯಾವಾಗಲೂ ಧರಿಸಲ್ಪಡುವ ಆಭರಣಗಳೂ, ನಾನ್ಗು ತೋಳುಮ್ - (ಚತುರ್ವಿಧ ಪುರುಷಾರ್ಥಪ್ರದವಾದ) ನಾಲ್ಕು ತೋಳುಗಳೂ

ಎಙ್ಗುಮ್-ಎಲ್ಲೆಲ್ಲಿಯೂ, ಎನ್ನ ನಿನ್ಱಿಡುಮ್ - ನನ್ನನ್ನೇ ಅನುಸರಿಸಿ ಬಂದು ನನ್ನ ಮುಂದೆ ನಿಂತಿರುವುವು.

( ಸ-ಗಾ-ರ ‖ )—

ಮನ್ನಿಸ್ವಿನ್ನು ವಿಶಾಯು ಮೋಽದ್ಯ ಮನಸಾ ಯೂಯಂ ಚ ಭೋಃ! ಪಶ್ಯತ
ಶ್ರೀಶಂ ಪೂರ್ಣಮಮುಂ ಕುರಙ್ಗನಗರೀನಾಥಂ ಹಿ ದೃಷ್ಟ್ವಾ ಮಮ |
ಸರ್ವತ್ರಾಪಿ ಪುರಶ್ಚಕಾಸ್ತಿ ಸತತಂ ಯಜ್ಞೋಪವೀತಂ ಶುಭಂ
ವಿಷ್ಣೋಸ್ತಸ್ಯ ಚ ಕುಣ್ಡಲಂ ಭುಜಯುಗೇ ಶ್ರೀವತ್ಸಭೂಷಾದಿಕಮ್ ‖

ತಾ‖ (ಜನನಿಯರೇ !) ನನ್ನನ್ನು ಕುರಿತು ನೀವು ಕೋಪಮಾಡದೆ ನನ್ನ ಭಾವಗಳುಳ್ಳ ಮನಸ್ಸಿನಿಂದ ಚೆನ್ನಾಗಿ ಪರಿಶೀಲಿಸಿ ನೋಡಿರಿ. ನಮ್ಮ ತಿರುಕ್ಕುಱುಙ್ಗುಡಿ ನಂಬಿಯನ್ನು ನಾನು ಕಂಡಮೇಲೆ-ಅವನ ಯಜ್ಞೋಪವೀತವೂ, ಮಕರ ಕುಂಡಲಗಳೂ, ಶ್ರೀವತ್ಸಲಾಂಛನವೂ, ಸಕಲ ದಿವ್ಯಾಭರಣಗಳೂ, ಚತುರ್ಬಾಹುಗಳೂ, ನನ್ನನ್ನೇ ಅನುಸರಿಸಿ ಬಂದು ಎಲ್ಲೆಲ್ಲಿಯೂ ನನ್ನ ಮುಂದೆ ನಿಂತಿರುವುವು. (ಹೀಗಿರುವಲ್ಲಿ ನೀವು ನನ್ನಮೇಲೆ ಕೋಪಮಾಡಬಹುದೇ ?)

(೩) ನಿನ್ಱಿಡುಮ್ ತಿಶೈಕ್ಕುಮ್ ನೈಯುಮೆನ್ಱನ್ನೈಯರುಮ್ ಮುನಿತಿರ್,
ಕುನ್ಱಮಾಡತ್ತಿರುಕ್ಕುಱುಙ್ಗುಡಿನಮ್ಬಿಯೈ ನಾನ್ ಕಣ್ಡಪಿನ್,
ವೆನ್ಱಿವಿಲ್ಲುಮ್ ತಣ್ಡುಮ್ ವಾಳುಮ್ ಶಕ್ಕರಮುಮ್ ಶಙ್ಗಮುಮ್,
ನಿನ್ಱು ತೋನ್ಱಿ ಕ್ಕಣ್ಣುಳ್ ನೀಙ್ಗಾ ನೆಞ್ಜುಳ್ಳುಮ್ ನೀಙ್ಗಾವೇ.

ಪ್ರ‖ ನಿನ್ಱಿಡುಮ್-ಸುಮ್ಮನೆ ನಿಂತಿರುವಳು; ತಿಶೈಕ್ಕುಮ್-ಒಂದೂ ತಿಳಿಯದೆ ಭ್ರಾನ್ತೆಯಾಗಿರುವಳು, ನೈಯುಮ್-ಚಿನ್ತೆಯಿಂದ ಕೃಶೆಯಾಗುತ್ತಿರುವಳು, ಎನ್ಱು-ಎಂದು ಹೇಳಿ, ಅನ್ನೈಯರುಮ್ - ಜನನಿಯರಾದ ನೀವೂ ಕೂಡ, ಮುನಿದಿರ್-ಕೋಪಿಸಿಕೊಳ್ಳುತ್ತಿದ್ದೀರಿ. ಕುನ್ಱಮ್ - ಪರ್ವತದಂತೆ ಇರುವ, ಮಾಡಮ್ - ಪ್ರಾಸಾದಗಳುಳ್ಳ, ತಿರುಕ್ಕುಱುಙ್ಗುಡಿ - ತಿರುಕ್ಕುಱುಙ್ಗುಡಿಗೆ ಸ್ವಾಮಿಯಾದ, ನಮ್ಬಿಯೈ-ಪೂರ್ಣನಾದ ಭಗವನ್ತನನ್ನು, ನಾನ್-ನಾನು, ಕಣ್ಡಪಿನ್-ನೋಡಿದ -ಮೇಲೆ, ವೆನ್ಱಿ-ಜಯವುಳ್ಳ, ವಿಲ್ಲುಮ್-ಧನುಸ್ಸೂ, ತಣ್ಡುಮ್-ಗದೆಯೂ, ವಾಳುಮ್

ಖಡ್ಗವೂ, ಶಕ್ಕರಮುಮ್-ಚಕ್ರವೂ, ಶಙ್ಗಮುಮ್ - ಶಂಖವೂ, ನಿನ್ರು-ಎಲ್ಲಾ ಸ್ಥಿರವಾಗಿ ನಿಂತು, ಕಣ್ಣುಳ್-ನನ್ನ ಕಣ್ಣಿನೊಳಗೆ, ತೋನ್ರಿ-ತೋರಿ, (ದೃಶ್ಯವಾಗಿ) ನೀಙ್ಗಾ - ಹೋಗುವುದೇ ಇಲ್ಲ. (ಕದಲದೆ ನಿಂತಿವೆ), ನೆಞ್ಜುಳ್ಳುಮ್-ಮನಸಿ ನೊಳಗೂ, ನೀಙ್ಗಾ-(ಸ್ಥಿರವಾಗಿ ನಿಂತು) ಬೇರೆಕಡೆ ಹೋಗುವುದೇ ಇಲ್ಲ

( ಸ-ಗಾ-ರ ॥ )—

ಸ್ತಬ್ಧಾ ತಿಷ್ಠತಿ ಚ ಭ್ರಮಾನ್ಧಹೃದಯಾ ಶೈಥಿಲ್ಯವಶ್ಯಾ ಸ್ವಯಂ
ಚೇತ್ಯೇವಂ ಕಿಲ ಮಾನ್ತು ನಿನ್ದಥ ಜನನ್ಯೋऽದ್ರ್ಯಾಯಿತೈರುನ್ನತೈಃ ।
ಪ್ರಾಸಾದೈರ್ಭರಿತಾಂ ಕುರಙ್ಗನಗರೀಂ ಶಾಸ್ತುರ್ಹರೇರ್ದರ್ಶನಾತ್
ಪಶ್ಚಾಚ್ಛಾರ್ಙ್ಗಗದಾಸಿ ಚಕ್ರಜಲಜಾನ್ಯೇವಾಗ್ರತೋ ಮೇ ಸದಾ ॥

ತಾ॥ ಸ್ತಬ್ಧೆಯಾಗಿ ನಿಂತಿದಾಳೆ, ಭ್ರಾನ್ತೆಯಾಗಿ ಏನೂ ತಿಳಿಯದೆ ಇದಾಳೆ, ಚಿನ್ತೆಯಿಂದ ಕೃಶೆಯಾಗಿದಾಳೆ—ಎಂದು ನನ್ನನ್ನು ನೋಡಿ ಜನನಿಯರಾದ ನೀವೂ ಕೂಡ ಕೋಪಿಸಿಕೊಳ್ಳುತ್ತೀರಿ. ಪರ್ವತದಂತೆ ಉನ್ನತವಾದ ಉಪ್ಪರಿಗೆಗಳುಳ್ಳ ತಿರುಕ್ಕುಱುಙ್ಗುಡಿಗೆ ಸ್ವಾಮಿಯಾದ ನಂಬಿಯನ್ನು ನಾನು ಕಂಡಮೇಲೆ, ಅವನ ಜಯಶೀಲವಾದ ಧನುಸ್ಸೂ ಗದೆಯೂ ಖಡ್ಗವೂ ಚಕ್ರವೂ ಶಂಖವೂ ನನ್ನಮುಂದೆ ಸ್ಥಿರವಾಗಿ ನಿಂತು ನನ್ನ ಕಣ್ಣಿನಿಂದ ಹೊರಗೆ ಹೋಗುವುದೇ ಇಲ್ಲ. ನನ್ನ ಮನಸ್ಸಿನಿಂದ ಹೊರಗೂ ಹೋಗುವುದೇ ಇಲ್ಲ. (ಹೊರಗೂ ಒಳಗೂ ಸರ್ವತ್ರ ಪ್ರಕಾಶಿಸುತ್ತಲೇ ಇವೆಯೆಂದು ಭಾವವು.)

(೪) ನೀಙ್ಗನಿಲ್ಲಾ ಕಣ್ಣನೀರ್‌ಕಳ್‌ಎನ್ರು ಯುರುಮ್ ಮುನಿತಿರ್,
ತೇನ್‌ಕೊಳ್ ಶೋಲೈ ತ್ತಿರುಕ್ಕುಱುಙ್ಗುಡಿನಮ್ಬಿಯೈ
ನಾನ್ ಕಣ್ಡಪಿನ್,
ಪೂನ್ತಣ್‌ಮಾಲೈ ತ್ತಣ್ಡುಳಾಯುಮ್
ಪೊನ್‌ಮುಡಿಯುಮ್ ವಡಿವುಮ್,
ಪಾಙ್ಗುತೋನ್ರುಮ್ ಪಟ್ಟುನಾಣುಮ್ ಪಾವಿಯೇನ್
ಪಕ್ಕತ್ತವೇ

ಪ್ರ॥ ಕಣ್ಣನೀರ್‌ಕಳ್ - (ಇವಳ) ಕಣ್ಣುನೀರಿನ ಪ್ರವಾಹಗಳು, ನೀಙ್ಗ - ಹೋಗುವಂತೆ, ನಿಲ್ಲಾ-ನಿಲ್ಲುವುದೇ ಇಲ್ಲ ; ಎನ್ರು-ಎಂದು, ಅನ್ನೈಯರುಮ್-ಜನನಿಯರಾದ ನೀವೂ, ಮುನಿತಿರ್-ಕೋಪಿಸಿಕೊಳ್ಳುತ್ತಿದ್ದೀರಿ, ತೇಕ್ಕೊಳ್‌ಶೋಲೈ-ಮಧುಭರಿತವಾದ ವೃಕ್ಷಷಂಡಗಳುಳ್ಳ, ತಿರುಕ್ಕುರುಙ್ಗುಡಿ - ತಿರುಕ್ಕುರುಙ್ಗುಡಿಯ, ನಮ್ಬಿಯೈ-ಸ್ವಾಮಿಯನ್ನು, ನಾಕಣ್ಡಪಿನ್-ನಾನು ಕಂಡಮೇಲೆ, ಪೂಮ್-ಸ್ಪೃಹಣೀಯವಾದ, ತಣ್ ಶೀತಳವಾದ (ಶ್ರಮಹರವಾದ), ಮಾಲೈ-ಮಾಲಾರೂಪವಾದ, ತಣ್‌ತುೞಾಯುಮ್-ರಮ್ಯವಾದ ತುಳಸಿಯೂ, ಪೊನ್ಮುಡಿಯುಮ್ - ಸುವರ್ಣ ಕಿರೀಟವೂ, ವಡಿವುಮ್ - (ದಿವ್ಯಸೌನ್ದರ್ಯವುಳ್ಳ) ಅವನ ಮೂರ್ತಿಯೂ, ಪಾಙ್ಗ- ಚೆನ್ನಾಗಿ ಹೊಂದಿಕೊಂಡು, ತೋನ್ರುಮ್-ಪ್ರಕಾಶಿಸುವ, ಪಟ್ಟು-ಪೀತಾಂಬರವೂ, ನಾಣುಮ್-ಉಡಿದಾರವೂ, ಪಾವಿಯೇ-(ಇವುಗಳನ್ನೆಲ್ಲಾ ಅನುಭವಿಸುವ ಭಾಗ್ಯವಿಲ್ಲದ) ಪಾಪಿಷ್ಠೆಯಾದ ನನ್ನ, ಪಕ್ಕತ್ತವೇ-ಪಾರ್ಶ್ವದಲ್ಲೇ ನಿಂತಿವೆ.

( ಸ-ಗಾ-ರ ॥ )—

ನೈಷಾ ಬಾಷ್ಪವಿಯುಕ್ತನೇತ್ರಯುಗಳೇತ್ಯೇವಂ ಹಿ ಮಾಂ ಮಾತರೋ !
ಯೂಯಂ ಚಾಪಿ ವಿನಿನ್ದಥ ಪ್ರಿಯಮಮುಂ ದೃಷ್ಟ್ವಾಽಸ್ಮಿ ಮುಗ್ಧಾ ಹರಿಮ್।
ಶ್ರೀಶಂ ದಿವ್ಯಕುರಙ್ಗರಮ್ಯನಗರೀನಾಥಂ ಹಿ ತಸ್ಮಾದಹೋ !
ದಿವ್ಯಸ್ರಙ್ಮಕುಟಾಙ್ಗಪಟ್ಟವಸನಂ ದಾಮಾದಿ ಪಾರ್ಶ್ವೇ ಮಮ ॥

ತಾ॥ ಇವಳ ಕಣ್ಣುನೀರಿನ ಪ್ರವಾಹಗಳು ನಿಲ್ಲುವುದೇ ಇಲ್ಲವೆಂದು ಜನನಿಯರಾದ ನೀವೂ ಕೂಡ ನನ್ನ ವಿಷಯದಲ್ಲಿ ಕೋಪಿಸಿಕೊಳ್ಳುತ್ತಿದ್ದೀರಿ. ನಾನೋ ಆ (ಮಧುಭರಿತ ವೃಕ್ಷಪರಿವೃತವಾದ) ತಿರುಕ್ಕುರುಙ್ಗುಡಿನಂಬಿಯನ್ನು ಕಂಡಮೇಲೆ, ಆ ಸ್ವಾಮಿಯ ದಿವ್ಯತುಳಸೀಮಾಲೆಯೂ, ಸ್ವರ್ಣಕಿರೀಟವೂ, ಅವನ ದಿವ್ಯಮೂರ್ತಿಯೂ, ದಿವ್ಯಪೀತಾಂಬರವೂ, ದಿವ್ಯ ಕಾಂಚೀದಾಮವೂ (ಪಾಪಿಷ್ಠೆಯಾದ) ನನ್ನ ಪಾರ್ಶ್ವದಲ್ಲೇ ನಿಂತಿವೆ. (ನಾನು ಇವುಗಳನ್ನೆಲ್ಲಾ ಸ್ಪರ್ಶಿಸಿ ಸಂಶ್ಲೇಷವಂ ಪಡೆಯುವ ಭಾಗ್ಯವಿಲ್ಲದ ಪಾಪಿಷ್ಠೆಯಾಗಿದೇನೆಂದು ಭಾವವು.)

(೫) ಪಕ್ಕಮ್ ನೋಕ್ಕಿ ನಿನ್ರುಮ್ ನೈಯುಮ್ಮೆನ್ರನ್ನೈಯರುಮ್
ಮುನಿತಿರ್,
ತಕ್ಕಕೀರ್ತಿ ತ್ತಿರುಕ್ಕುರುಙ್ಗುಡಿನಮ್ಬಿಯೈ ನಾನ್ ಕಣ್ಡಪಿನ್,
ತೊಕ್ಕಶೋದಿ ತ್ತೊಣ್ಡೈವಾಯುಮ್
ನೀಣ್ಡಪುರುವಙ್ಗಳುಮ್,
ತಕ್ಕ ತಾಮರೈಕ್ಕಣ್ಣುಮ್ ಪಾವಿಯೇನಾವಿಯಿನ್ಮೇಲನವೇ.

ಪ್ರ|| ಪಕ್ಕಮ್-ಪಾರ್ಶ್ವವನ್ನು, ನೋಕ್ಕಿ-ನೋಡಿ, ನಿಱ್ಕುಮ್-ನಿಲ್ಲುವಳು; ನೈಯುಮ್-ಶಿಥಿಲೆಯಾಗುತ್ತಿರುವಳು; ಎನ್ನು-ಎಂದು ಅನ್ನೈಯರುಮ್-ಜನನಿಯರಾದ ನೀವೂ, ಮುನಿತಿರ್-ಕೋಪಿಸಿಕೊಳ್ಳುತ್ತೀರಿ. ತಕ್ಕ-ತನ್ನ ಮಹಿಮೆಗೆ ತಕ್ಕ, ಕೀರ್ತ್ತಿ-ಕೀರ್ತಿಯುಳ್ಳ, ತಿರುಕ್ಕುಱುಙ್ಗುಡಿನಮ್ಬಿಯೈ-ತಿರುಕ್ಕುಱುಙ್ಗುಡಿ ಸ್ವಾಮಿಯನ್ನು, ನಾನ್-ನಾನು, ಕಣ್ಡಪಿನ್-ಕಂಡಮೇಲೆ, ತೊಕ್ಕಶೋದಿ – ನಿಬಿಡವಾದ (ಅಧಿಕವಾದ) ತೇಜಸ್ಸುಳ್ಳ, ತೊಣ್ಡೈವಾಯುಮ್-ಬಿಂಬಾಧರವೂ, ನೀಣ್ಡಪುರುವಙ್ಗಳುಮ್ – ದೀರ್ಘವಾದ ಹುಬ್ಬುಗಳೂ, ತಕ್ಕ – ಅವುಗಳಿಗೆ ತಕ್ಕ, ತಾಮರೈಕ್ಕಣ್ಣುಮ್-ತಾವರೆಯಂತಿರುವ ಕಣ್ಣುಗಳೂ, ಪಾವಿಯೇನ್-ಪಾಪಿನಿಯಾದ ನನ್ನ, ಆವಿಯಿನ್‌ಮೇಲನವೇ-ಆತ್ಮವಸ್ತುವಿನಮೇಲೆ ನಿಂತಿವೆ.

( ಸ-ಗಾ-ರ || )—

ಪಾರ್ಶ್ವಂ ಪಶ್ಯತಿ ಚಾಸ್ತಿ ಹನ್ತ! ಶಿಥಿಲೇತ್ಯೇವಂ ಹಿ ಮಾಂ ಮಾತರೋ!
ಯೂಯಂ ನಿನ್ದಥ! ದಿವ್ಯಕೀರ್ತಿಮನಘಂ ದೃಷ್ಟ್ವಾ ಹರಿಂ ಶ್ರೀಧರಮ್ |
ಮುಗ್ಧಾಽಹಂ ಹಿ ಕುರಙ್ಗರಮ್ಯನಗರೀನಾಥಂ ಮಹಾತ್ಮನ್ಯಹೋ!
ತಸ್ಯಾಸ್ತೇ ಹ್ಯಧರೋಽಪಿ ಬಿಮ್ಬಸದೃಶೋ ಭ್ರೂಯುಗ್ಮನೇತ್ರಾಮ್ಬುಜಮ್||

ತಾ|| ಅವನು ಬರುವನೋ ಎಂದು ಪಕ್ಕದಲ್ಲಿ ನೋಡುತ್ತಿರುವಳು, ಶಿಥಿಲೆಯಾಗುತ್ತಿರುವಳು—ಎಂದು ಜನನಿಯರಾದ ನೀವೂ ನನ್ನಮೇಲೆ ಕೋಪಮಾಡುತ್ತೀರಿ. ದಿವ್ಯಕೀರ್ತಿಯುಳ್ಳ ತಿರುಕ್ಕುಱುಂಗುಡಿ ನಂಬಿಯನ್ನು ನಾನು ಕಂಡಮೇಲೆ ಅವನ ತೇಜೋಮಯವಾದ ಬಿಂಬಾಧರವೂ, ದೀರ್ಘವಾದ ಭ್ರೂಯುಗ್ಮವೂ, ಅದಕ್ಕೆ ತಕ್ಕ ದಿವ್ಯ ನೇತ್ರಾರವಿನ್ದಯುಗ್ಮವೂ ನನ್ನ ಆತ್ಮವಸ್ತುವಿನಲ್ಲಿ ನಿಂತಿವೆ. (ಇವುಗಳನ್ನೆಲ್ಲಾ ಅನುಭವಿಸುವ ಭಾಗ್ಯವಿಲ್ಲದ ಪಾಪಿನಿಯಾಗಿದೇನೆ)

(೭) ಮೇಲುಮ್ ವನ್‌ಪೞಿ ನಙ್ಕುಡಿಕ್ಕಿವಳೆನ್ಱನ್ನೈ ಕಾಣಕ್ಕೊಡಾಳ್
ಶೋಲೈಶೂೞ್ ತಣ್‌ತಿರುಕ್ಕುಱುಙ್ಗುಡಿನಮ್ಬಿಯೈ
ನಾನ್ ಕಣ್ಡಪಿನ್,
ಕೋಲನೀಳ್ ಕೊಡಿಮೂಕ್ಕುಮ್ ತಾಮರೈಕ್ಕಣ್ಣುಮ್
ಕನಿವಾಯುಮ್,
ನೀಲಮೇನಿಯುಮ್ ನಾನ್ಗುತೋಳುಮೆನ್ನೆಞ್ಜಮ್
ನಿಱೈನ್ದನವೇ.

ಪ್ರ|| ನಮ್‌ಕುಡಿಕ್ಕು–ನಮ್ಮ ವಂಶಕ್ಕೆ, ಇವಳ್ – ಇವಳು, ಮೇಲುಮ್–ಇನ್ನು ಮೇಲೂ, ವಲ್‌ಪ್ಪಳಿ–ಪ್ರಬಲವಾದ ಅಪವಾದವನ್ನುಂಟುಮಾಡುವವಳು ಎನ್ರು–ಎಂದು, ಅನ್ನೈ–ತಾಯಿಯು, ಕಾಣ – (ನಂಬಿಯನ್ನು) ಕಾಣಲು, ಕೊಡಾಳ್ – ಅವಕಾಶವನ್ನು ಕೊಡುವುದಿಲ್ಲ ಶೋಲೈಶೂಳ್–ಉದ್ಯಾನಗಳಿಂದ ಪರಿವೃತವಾದ, ತಣ್–ಶ್ರಮಹರವಾದ, ತಿರುಕ್ಕುಱುಙ್ಗುಡಿ–ತಿರುಕ್ಕುಱುಙ್ಗುಡಿಯ, ನಮ್ಬಿಯೈ–ನಂಬಿಯನ್ನು, ನಾಙ್‌ಕಣ್ಡ ಪಿನ್–ನಾನು ಕಂಡಮೇಲೆ, ಕೋಲ – ಅಲಂಕಾರಭೂತವಾದ, ನೀಳ್–ದೀರ್ಘವಾದ, ಕೊಡಿ–ಕಲ್ಪಲತೆಯಂತಿರುವ, ಮೂಕ್ಕುಮ್ – ಮೂಗೂ, ತಾಮರೈಕ್ಕಣ್ಣುಮ್–ತಾವರೆಯಂತಿರುವ ಕಣ್ಣುಗಳೂ, ಕನಿವಾಯುಮ್ – ಬಿಂಬಫಲದಂತಿರುವ ವಕ್ತ್ರವೂ, ನೀಲಮೇನಿಯುಮ್–ನೀಲವರ್ಣವುಳ್ಳ ದಿವ್ಯಶರೀರವೂ, ನಾನ್ಗು ತೋಳುಮ್–ನಾಲ್ಕು ತೋಳುಗಳೂ, ಎನ್ ನೆಞ್ಜಮ್ – ನನ್ನ ಮನಸ್ಸಿನಲ್ಲಿ, ನಿಱೈನ್ದನವೇ–ಪರಿಪೂರ್ಣವಾಗಿವೆ.

( ಸ–ಗಾ–ರ || )—

ಅಸ್ಮಾಕಂ ಕುಲಪಾಂಸನೀಂ ಇತಿ ಮಾಂ ಮಾತಾ ಸ್ವಯಂ ವಾರಯ–
ತ್ಯೇವ ಶ್ರೀಹರಿದರ್ಶನಾದಹಮಹೋ! ಮುಗ್ಧಾಽಸ್ಮಿ ದೃಷ್ಟ್ವೈವ ಚ ತಮ್ |
ಶ್ರೀಶಂ ದಿವ್ಯಕುರಙ್ಗರಮ್ಯನಗರೀನಾಥಂ ಮಮಾಸ್ತೇ ಹೃದಿ
ಶ್ರೀನಾಸಾಕ್ಷಿಯುಗಾಧರಾಙ್ಗರುಚಿಭಿಸ್ಸಾಕಂ ಚತುರ್ಬಾಹುಭಿಃ ||

ತಾ|| ನಮ್ಮ ವಂಶಕ್ಕೆ ಇವಳು ಪ್ರಬಲವಾದ ಅಪವಾದವನ್ನು ತರುವವಳಾಗಿದಾಳೆ—ಎಂದು ತಾಯಿಯು ನನಗೆ ನಂಬಿಯನ್ನು ನೋಡುವುದಕ್ಕೆ ಅವಕಾಶವನ್ನು ಕೊಡುವುದಿಲ್ಲ. ಉದ್ಯಾನಪರಿವೃತವಾಗಿ ಶೀತಳವಾಗಿರುವ ತಿರುಕ್ಕುಱುಙ್ಗುಡಿಯ ಸ್ವಾಮಿಯಾದ ನಂಬಿಯನ್ನು ನಾನು ಕಂಡಮೇಲೆ ಅವನ ಅಲಂಕಾರರೂಪವಾದ ದೀರ್ಘವಾದ ಕಲ್ಪಲತಾಸದೃಶವಾದ ನಾಸಿಕೆಯೂ, ತಾವರೆಯಂತಿರುವ ನೇತ್ರಯುಗ್ಮವೂ, ಬಿಂಬಫಲದಂತಿರುವ ಅಧರವೂ, ನೀಲವರ್ಣವುಳ್ಳ ದಿವ್ಯವಿಗ್ರಹವೂ, ಚತುರ್ಭುಜಗಳೂ ನನ್ನ ಮನಸ್ಸಿನಲ್ಲಿ ತುಂಬಿ ಇವೆ.

(೭) ನಿಱೈನ್ದ ವಲ್‌ಪಳಿ ನಙ್ಗುಡಿಕ್ಕಿವಳೆನ್ರನ್ನೈ ಕಾಣಕೊಡಾಳ್,
ಶಿಱನ್ದಕೀರ್ತ್ತಿ ತ್ತಿರುಕ್ಕುಱುಙ್ಗುಡಿನಮ್ಬಿಯೈ ನಾನ್
ಕಣ್ಡಪಿನ್,
ಸಿಱೈನ್ದ ಶೋಲೈವೆಳ್ಳಿಮ್ ಶೂಳ್ನ್ದ
ನೀಣ್ಡಪೊನ್ಮೇನಿಯೊಡುಮ್
ನಿಱೈನ್ದೆನ್ನುಳ್ಳೇನಿನ್ರೊಳಿನ್ದನ ನೇಮಿಯಙ್ಗೈಯುಳದೇ.

ಪ್ರ|| ನಮ್-ನಮ್ಮ ಕುಡಿಕ್ಕು-ವಂಶಕ್ಕೆ, ಇವಳ್-ಇವಳು, ನಿಱೈನ್ದ-ಪರಿಪೂರ್ಣವಾದ, ವಲ್‌ಪೞಿ- ಪ್ರಬಲವಾದ ಅಪವಾದವನ್ನು ತರುವವಳು, ಎನ್ಱು ಎಂದು, ಅನ್ನೈ-ತಾಯಿಯು, ಕಾಣಕ್ಕೊಡಾಳ್-(ನಂಬಿಯನ್ನು) ನೋಡಲು ಅವಕಾಶವನ್ನು ಕೊಡುವುದಿಲ್ಲ. ಶಿಱನ್ದಕೀರ್ತ್ತಿ-ಶ್ರೇಷ್ಠವಾದ ಕೀರ್ತಿಯುಳ್ಳ, ತಿರುಕ್ಕುಱುಙ್ಗುಡಿನಮ್ಬಿಯೈ - ತಿರುಕ್ಕುಱುಙ್ಗುಡಿನಂಬಿಯನ್ನು, ಕಣ್ಡಪಿನ್ - ಕಂಡಮೇಲೆ, ನಿಱೈನ್ದ-ಪೂರ್ಣವಾದ, ಶೋದಿವೆಳ್ಳಮ್-ತೇಜೋರಾಶಿಯಿಂದ, ಶೂೞ್ನ್ದ-ಪರಿವೃತವಾದ, ನೀಣ್ಡ-ದೀರ್ಘವಾದ, ಪೊನ್‌ಮೇನಿಯೊಡುಮ್-(ಸ್ವರ್ಣದಂತೆ) ರಮ್ಯವಾದ ಶರೀರದೊಡನೆ, ಎನ್ನುಳ್ಳೇ-ನನ್ನ ಮನಸ್ಸಿನಲ್ಲಿ, ನಿಱೈನ್ದು-ತುಂಬಿ, ನಿನ್ಱೊೞಿನ್ದಾನ್-ನಿಂತುಬಿಟ್ಟನು. ನೇಮಿ-ಚಕ್ರವು, ಅಮ್ ಕೈ - (ಅವನ) ರಮ್ಯವಾದ ಹಸ್ತದಲ್ಲಿ, ಉಳದು-ಇರುವುದು.

( ಸ-ಗಾ-ರ || )—

ಅಸ್ಮಾಕಂ ಹಿ ಕುಲಸ್ಯ ಹನ್ತ! ಕುರುತೇ ಸೇಯಂ ಕಳಙ್ಕಂ ತ್ವಿತಿ
ದ್ರಷ್ಟುಂ ತಂ ಕಿಲ ನಾವಕಾಶಮಧುನಾ ಮಾತಾ ದದಾತ್ಯತ್ರ ಮೇ |
ಧನ್ಯಾಽಹಂ ಹಿ ಕುರಙ್ಗರಮ್ಯನಗರೀನಾಥಸ್ಯ ಸನ್ದರ್ಶನಾ-
ನ್ಮಯ್ಯೇವಾಸ್ತಿ ಸ ತೇಜಸಾಂನಿಧಿರಹೋ! ದಿವ್ಯಾಕೃತಿಶ್ಚಕ್ರಧೃತ್ ||

ತಾ|| ನಮ್ಮ ವಂಶಕ್ಕೆ ಇವಳು ಪ್ರಬಲವಾದ ಅಪವಾದವನ್ನು ತರುವಳು— ಎಂದು ತಾಯಿಯು ನಂಬಿಯನ್ನು ನೋಡಲು ನನಗೆ ಅವಕಾಶವನ್ನೇ ಕೊಡುವುದಿಲ್ಲ. ದಿವ್ಯಕೀರ್ತಿಯುಳ್ಳ ತಿರುಕ್ಕುಱುಙ್ಗುಡಿಯನ್ನು ನಾನು ಕಂಡಮೇಲೆ ಪೂರ್ಣವಾದ ತೇಜೋರಾಶಿಯಿಂದ ಪರಿವೃತವಾದ ಸ್ವರ್ಣಸಮವಾದ ದಿವ್ಯಶರೀರದೊಡನೆ ಅವನು ನನ್ನ ಮನಸ್ಸಿನಲ್ಲಿ ತುಂಬಿ ನಿಂತುಬಿಟ್ಟನು. ಅವನ ದಿವ್ಯ ಹಸ್ತದಲ್ಲಿ ಚಕ್ರವು ಪ್ರಕಾಶಿಸುತ್ತಿರುವುದು.

(೮) ಕೈಯುಳ್ ನನ್ಮುಕವೈ ವೈಕ್ಕುಮ್
ನೈಯ್ಯುಮೆನ್ನನ್ನೈಯುರುವೈ ಮುನಿತಿರ್,
ಮೈಕೊಳ್ ಮಾಡ ತ್ತಿರುಕ್ಕುಱುಙ್ಗುಡಿನಮ್ಬಿಯೈ
ನಾನ್ ಕಣ್ಡಪಿನ್, ಶೆಯ್ಯತಾ,
ಮರೈಕ್ಕಣ್ಣುಮೆಲ್‌ಕುಲುಮ್ ಶಿಱ್ಱಿಡೈಯುಮ್
ವಡಿವುಮ್, ಮೊಯ್‌ಕೊಳ್,
ನೀಳ್‌ಕುೞಲ್ ತೞ್ನ್ದ ತೋಳ್‌ಕಳುಮ್ ಪಾವಿಯೇನ್
ಮುನ್ನಿಱ್ಕುಮೇ.

ಪ್ರ॥ ಕೈಯುಳ್-ಕೈಯಲ್ಲಿ, ನಲ್-ರಮ್ಯವಾದ, ಮುಕಮ್ - ಮುಖವನ್ನು, ವೈಕ್ಕುಮ್-ಮಡಗುವಳು; ನೈಯುಮ್-ಶಿಥಿಲೆಯಾಗುತ್ತಿರುವಳು, ಎನ್ರು-ಎಂದು, ಅನ್ನೈಯರುಮ್-ಜನನಿಯರೂ, ಮುನಿದಿರ್ - ಕೋಪಮಾಡುತ್ತಿರುವಿರಿ. ಮೈ ಕೊಳ್-(ನೀಲವರ್ಣವುಳ್ಳ ನಂಬಿಯ) ಛಾಯೆಯಿಂದ, ಮಾಡ-ಉಪ್ಪರಿಗೆಗಳುಳ್ಳ, ತಿರುಕ್ಕುಱುಙ್ಗುಡಿನಮ್ಬಿಯೈ-ತಿರುಕ್ಕುಱುಙ್ಗುಡಿಯ ನಮ್ಬಿಯನ್ನು, ನಾನ್-ನಾನು, ಕಣ್ಡಪಿನ್-ಕಂಡಮೇಲೆ, ಶೆಯ್ಯ-ಕೆಂಪಾದ, ತಾಮರೈಕ್ಕಣ್ಣುಮ್-ತಾವರೆಯಂತಿರುವ ಕಣ್ಣುಗಳೂ, ಅಲ್ಕುಲುಮ್-(ಸುನ್ದರವಾದ) ನಿತಮ್ಬವೂ, ಶಿಱು ಇಡೈಯುಮ್-ಸೂಕ್ಷ್ಮವಾದ ಮಧ್ಯವೂ, ವಡಿವುಮ್-ದಿವ್ಯಶರೀರವೂ, ಮೊಯ್ಕೊಳ್-ನಿಬಿಡವಾಗಿ ಸೇರಿರುವ, ನೀಳ್ಕುೞಲ್ - ದೀರ್ಘವಾದ ಕೇಶಗಳೂ, ತಾೞ್ನ್ದತೋಳ್ಕಳುಮ್-ನಿಮ್ನವಾದ ಭುಜಶಿರಸ್ಸುಗಳೂ, ಪಾವಿಯೇನ್-ಪಾಪಿನಿಯಾದ ನನ್ನ, ಮುನ್-ಮುಂದೆ, ನಿಱ್ಕುಮ್-ನಿಂತಿವೆ.

( ಸ-ಗಾ-ರ ॥ )—

**ಹಸ್ತೇ ಹನ್ತ ! ಕರೋತಿ ವಕ್ತ್ರಮಮಲಂ ಶೈಥಿಲ್ಯವಶ್ಯಾ ತ್ವಿಯಂ**
**ಚೇತ್ಯೇವಂ ಕಿಲ ಮಾನ್ತು ನಿನ್ದಥ ಜನನ್ಯೋಽದ್ಯಾಪಿ ಯೂಯಂ ವೃಥಾ ।**
**ದೃಷ್ಟ್ವಾಽಹಂ ಹಿ ಕುರಙ್ಗರಮ್ಯನಗರೀನಾಥಂ ವಶಾಽಸ್ಯೈವ ಯ-**
**ದ್ದಿವ್ಯಂ ಲೋಚನಪದ್ಮಕೇಶಕಟಿಬಾಹ್ವಾದ್ಯಂ ಪುರೋ ಭಾತಿ ಮೇ ॥**

ತಾ॥ ಇವಳು ಕೈಯಲ್ಲಿ ತನ್ನ ಮುಖವನ್ನು ಇಟ್ಟು ಚಿನ್ತಾಕ್ರಾನ್ತೆಯಾಗಿ ಕೃಶೆಯಾಗುತ್ತಿದಾಳೆ-ಎಂದು ಜನನಿಯರಾದ ನೀವು ವೃಥಾ ನನ್ನಮೇಲೆ ಕೋಪ ಮಾಡುತ್ತೀರಿ. ತಿರುಕ್ಕುಱುಙ್ಗುಡಿಯ ನಂಬಿಯನ್ನು ನಾನು ಕಂಡಮೇಲೆ ಆ ಸ್ವಾಮಿಯ ಕೆಂದಾವರೆಯಂತಿರುವ ಕಣ್ಣುಗಳೂ, ರಮ್ಯವಾದ ನಿತಮ್ಬವೂ, ಸೂಕ್ಷ್ಮವಾದ ಮಧ್ಯವೂ, ದಿವ್ಯಶರೀರವೂ, ದೀರ್ಘಕೇಶಗಳೂ, ನಿಮ್ನವಾದ ಭುಜಶಿರಸ್ಸುಗಳೂ ಪಾಪಿನಿಯಾದ ನನ್ನ ಕಣ್ಣಿನಮುಂದೆ ನಿಂತಿವೆ. (ನಾನೇನು ಮಾಡಲಿ ?— ಎಂದು ಭಾವವು )

(೯) ಮುನ್ನಿನ್ಱಾಯೆನ್ಱು ತೋೞಿಮಾರ್ಕಳುಮನ್ನೈಯರುಮ್
ಮುನಿತಿರ್,
ಮನ್ನುಮಾಡ ತ್ತಿರುಕ್ಕುಱುಙ್ಗುಡಿನಮ್ಬಿಯೈ ನಾನ್
ಕಣ್ಡಪಿನ್,
ಶೆನ್ನಿ ನೀಣ್ಮುಡಿಯಾದಿಯಾಯ ವುಲಪ್ಪಿಲಣಿಕಲತ್ತನ್,
ಕನ್ನಲ್ಪಾಲಮುದಾಕಿ ವನ್ದೆನ್ನೆಞ್ಜಮ್ ಕೞಿಯಾನೇ.

ಪ್ರ॥ ಮುೞ-ಮುಂದೆ, ನಿನ್ಱಾಯ್-ನಿಂತೆ, ಎನ್ಱು-ಎಂದು, ತೋೞಿಮಾರ್ ಕಳುಮ್-ಸಖಿಯರೂ, ಅನ್ನೈಯರುಮ್ - ಜನನಿಯರೂ, ಮುನಿತಿರ್-ಕೋಪ ಮಾಡುತ್ತೀರಿ ಮನ್ನುಮ್-ಸ್ಥಿರವಾದ, ಮಾಡ-ಉಪ್ಪರಿಗೆಗಳುಳ್ಳ, ತಿರುಕ್ಕುಱುಙ್ಗುಡಿ ನಮ್ಬಿಯೈ-ತಿರುಕ್ಕುಱುಙ್ಗುಡಿಯ ಸ್ವಾಮಿಯನ್ನು, ನಾಱ-ನಾನು, ಕಣ್ಡಪಿೞ-ಕಂಡಮೇಲೆ, ಶೆನ್ನಿ-ಶಿರಸ್ಸಿಲ್, ನೀಳ್-ಉನ್ನತವಾದ, ಮುಡಿ-ಕಿರೀಟವೇ, ಆದಿಯಾಯ-ಮೊದಲಾದ, ಉಲಪ್ಪಿಲ್-ಅಸಂಖ್ಯೇಯವಾದ, ಅಣಿ-ಅಲಂಕರಿಸಲ್ಪಟ್ಟ, ಕಲತ್ತುೞ - ಆಭರಣಗಳುಳ್ಳವನು, ಕನ್ನಲ್ - ಸಕ್ಕರೆಯೂ, ಪಾಲ್ - ಹಾಲೂ, ಅಮುದು-ಅಮೃತವೂ ಸೇರಿದಂತೆ ಆಗಿ ಆಕಿ-ಭೋಗ್ಯತಮನಾಗಿ, ವನ್ದು-ಬಂದು, ಎೞ ನೆಞ್ಜಮ್-ನನ್ನ ಮನಸ್ಸನ್ನೂ, ಕೞಿಯಾೞ-ಬಿಟ್ಟುಹೋಗುವುದಿಲ್ಲ

( ಸ ಗಾ-ರ ॥ )—

ಅಗ್ರೇ ತ್ವಂ ಕಥಮದ್ಯ ಭಾಸಿ ಚ ನೃಣಾಮಿತ್ಯೇವ ನಿನ್ದನ್ತಿ ಮಾಂ
ತೇಽಪಿಸಾ ಹನ್ತ ! ಸಖೀಜನಾಶ್ಚ ಜನನೀವರ್ಗಾ ಭವನ್ತ್ಯೇಽಧುನಾ ।
ದೃಷ್ಟ್ವಾತ್ರ ರಮ್ಯಕುರಙ್ಗದಿವ್ಯನಗರೀನಾಥಾ ಹಿ ಧನ್ಯಾಽಸ್ಮಿ ಮೇ
ಚಿತ್ತಂ ನ ತ್ಯಜತೀಕ್ಷುದುಗ್ಧಮಧುರೋ ಭೂಷಾನ್ವಿತೋ ಮೌಳಿಭೃತ್ ॥

ತಾ॥ "ನೀನು ಮುಂದೆ ಬಂದು ನಿಂತೆ"—ಎಂದು ಸಖೀಜನರೂ ಜನನಿಯರೂ ನನ್ನಮೇಲೆ ಕೋಪಮಾಡುತ್ತೀರಿ ತಿರುಕ್ಕುಱುಙ್ಗುಡಿಯ ನಂಬಿಯನ್ನು ನಾನು ಕಂಡಮೇಲೆ, ದಿವ್ಯ ಕಿರೀಟಾದ್ಯಾಭರಣಾಲಂಕೃತನಾದ ಅವನೇ ನನಗೆ ಸಕ್ಕರೆಯೂ ಹಾಲೂ ಅಮೃತವೂ ಸೇರಿದಂತೆ ಭೋಗ್ಯತಮನಾಗಿ ಬಂದು ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ನಿಂತುಬಿಟ್ಟನು (ಇದನ್ನು ಬಿಟ್ಟುಹೋಗುವುದೇ ಇಲ್ಲ)

(೧೦) ಕೞಿಯು ಮಿಕ್ಕದೋರ್ ಕಾದಲಳಿವಳೆನ್ಱನ್ನೈ ಕಾಣ
ಕೊಡಾಳ್,
ವೞುವಿಲ್‌ಕೀರ್ತ್ತಿ ತ್ತಿರುಕ್ಕುಱುಙ್ಗುಡಿನಮ್ಬಿಯೈ ನಾೞ
ಕಣ್ಡಪಿೞ,
ಕುೞುಮಿತ್ತೇವರ್‌ಕುೞಾಙ್ಗಳ್ ಕೈತೊೞ
ಚ್ಚೋದಿವೆಳ್ಳತ್ತಿನುಳ್ಳೇ,
ಎೞುವದೋರುರು ವೆನ್ನೆಞ್ಜುಳ್ಳೆೞುಮಾಕುೞಮಱಿವರಿದೇ.

ಪ್ರ|| ಇವಳ್-ಇವಳು, ಕೈೞಿಯು-ಕೈಮಿಾರಿದ, ಮಿಕ್ಕದೋರ್-ಅತ್ಯಧಿಕವಾದ, ಕಾದಲಳ್-ಆಶೆಯುಳ್ಳವಳು, ಎನ್ರು-ಎಂದು, ಅನ್ನೈ-ತಾಯಿಯು, ಕಾಣಕೊಡಾಳ್-(ನಂಬಿಯನ್ನು) ನೋಡಲು ಅವಕಾಶವನ್ನು ಕೊಡುವುದಿಲ್ಲ. ವೞುವಿಲ್-ನಿರ್ದೋಷವಾದ (ಅವಿಚ್ಛಿನ್ನವಾದ), ಕೀರ್ತ್ತಿ-ಕೀರ್ತ್ತಿಯುಳ್ಳ, ತಿರುಕ್ಕುಱುಙ್ಗುಡಿನಮ್ಬಿಯೈ-ತಿರುಕ್ಕುಱುಙ್ಗುಡಿಯ ನಮ್ಬಿಯನ್ನು, ನಾನ್-ನಾನು, ಕಣ್ಡಪಿನ್-ಕಂಡಮೇಲೆ, ತೇವರ್ ಕುೞಾಙ್ಗಳ್ ನಿತ್ಯಸೂರಿಗಳ ಸಂಘಗಳು, ಕುೞುಮಿ-ಪರಸ್ಪರ ಸೇರಿಕೊಂಡು ಕೈತೊೞ-ಕೈಂಕರ್ಯಮಾಡುವಂತೆ, ಶೋದಿವೆಳ್ಳತ್ತಿನುಳ್ಳೇ-ತೇಜೋರಾಶಿಯ ಮಧ್ಯದಲ್ಲಿ, ಎೞುವದು-ಮೇಲಕ್ಕೆ ಎದ್ದು ತೋರುವ, ಓರ್ ಉರು-ಅದ್ವಿತೀಯವಾದ ಒಂದು ದಿವ್ಯರೂಪವು (ಮೂರ್ತಿಯು), ಎನ್ ನೆಞ್ಜುಳ್-ನನ್ನ ಮನಸ್ಸಿನಲ್ಲಿ, ಎೞುಮ್-ಪ್ರಕಾಶಿಸುತ್ತಿದೆ. ಆರ್ಕ್ಕುಮ್-ಎಂಥವರಿಗೂ, ಅಱಿವು ಅರಿದು-(ಇದು) ಸ್ವಯತ್ನದಿಂದ ತಿಳಿಯಲು ಅಸಾಧ್ಯವಾಗಿರುವುದು.

( ಸ-ಗಾ-ರ || )—

ಸೇಯಂ ಕಾಮವಶೇತಿ ಮಾನ್ತು ಜನನೀ ತದ್ದರ್ಶನಾದ್ವಾರಯ-
ತ್ಯೇವಂ ಹನ್ತ ! ಕುರಙ್ಗದಿವ್ಯನಗರೀನಾಥಂ ಹಿ ದೃಷ್ಟ್ವಾಽಸ್ಮ್ಯಹಮ್ |
ದೇವೈಸ್ಸೂರಿವರೈಶ್ಚ ಸೇವ್ಯಮತುಲಂ ತೇಜೋಮಯಂ ತದ್ವಪು-
ಶ್ಚಿತ್ತೇ ಮೇ ಸತತಂ ಚಕಾಸ್ತಿ ! ತದಿದಂ ವೇದ್ಯಂ ಹಿ ನಾನ್ಯೈರಹೋ! ||

ತಾ|| ಇವಳು ಮಿತಿಮಿಾರಿದ ಅತ್ಯಾಶೆಯುಳ್ಳವಳು-ಎಂದು ತಾಯಿಯು ನನಗೆ ನಂಬಿಯನ್ನು ನೋಡಲು ಅವಕಾಶವನ್ನು ಕೊಡುವುದೇ ಇಲ್ಲ. ದಿವ್ಯಕೀರ್ತಿಯುಳ್ಳ ತಿರುಕ್ಕುಱುಙ್ಗುಡಿಯ ನಂಬಿಯನ್ನು ನಾನು ಕಂಡಮೇಲೆ, ನಿತ್ಯಸೂರಿಗಳೆಲ್ಲರೂ ಸಂಘಗಳಾಗಿ ಸೇರಿ ಕೈಙ್ಕರ್ಯಮಾಡಲು ಅನುಕೂಲವಾಗುವಂತೆ ಒಂದು ಅತ್ಯದ್ಭುತವಾದ ದಿವ್ಯತೇಜೋರಾಶಿಯುಳ್ಳ ಮೂರ್ತಿಯು ನನ್ನ ಮನಸ್ಸಿನಲ್ಲಿ ಪ್ರಕಾಶಿಸುತ್ತಿದೆ. ಇದು ಯಾರಿಗೂ ತಿಳಿಯಲಾರದು. (ಅಷ್ಟು ಅದ್ಭುತವಾದ ರೂಪವು—ಎಂದು ಭಾವವು)

(೧೧)ಅಱಿವರಿಯ ಪಿರಾನೈ ಯಾೞಿಯಙ್ಕೈಯನೈಯೇಯಾಲಱ್ಱಿ,
ನಱಿಯ ನನ್ಮಲರ್ನಾಡಿ ನಲ್ಕುರುಕೂರ್
ಚ್ಚಡಕೋಪನ್ ಶೊನ್ನ,
ಕುಱಿಕೊಳಾಯಿರತ್ತುಳ್ಳಿವೈಪತ್ತುಮ್
ತಿರುಕ್ಕುಱುಙ್ಗುಡಿಯದನ್ಮೇಲ್,
ಅಱಿಯಕ್ಕಱ್ಱು ವಲ್ಲಾರ್ ವೈಟ್ಟಣವರಾೞ್ಕಡಲ್
ಞಾಲತ್ತುಳ್ಳೇ.

ಪ್ರ|| ಅಱಿವು ಅರಿಯ-ತಿಳಿಯಲು ಅಶಕ್ಯವಾದ (ಮಹಿಮೆಯುಳ್ಳ), ಪಿರಾನ್ೖೆ-ಸ್ವಾಮಿಯನ್ನು, ಆೞಿ ಅಮ್ ಕೈಯನ್ೖೆ-ಚಕ್ರವನ್ನು ರಮಣೀಯವಾದ ಹಸ್ತದಲ್ಲಿ ಧರಿಸಿರುವವನನ್ನು, ಅಲಱ್ಱಿ-ಸ್ತೋತ್ರಮಾಡಿ, ನಱಿಯ- ಪರಿಮಳಭರಿತವಾದ, ನಲ್-ಶ್ಲಾಘ್ಯವಾದ, ಮಲರ್-ಪುಷ್ಪಗಳಂತೆ (ಸೂಕ್ತಿಗಳನ್ನು), ನಾಡಿ-ಅರಿಸಿ, ನಲ್ ಕುರುಕೂರ್-ವಿಲಕ್ಷಣವಾದ ಕುರುಕಾಪುರಿಯ, ಶಡಕೋಪರ್-ಶ್ರೀ ಶಠಾರಿ ಮುನಿಯು, ಶೊನ್ನ-ಹೇಳಿದ, ಆಯಿರತ್ತುಳ್-ಸಹಸ್ರ ಪದ್ಯಮಾಲೆಯೊಳು, ಕುಱಿ ಕೊಳ್ - ಆಯುಧಾವಯವಾಭರಣರೂಪ ಚಿಹ್ನೆಗಳುಳ್ಳ, ತಿರುಕ್ಕುಱುಙ್ಗುಡಿಯ ದನ್ಮೇಲ್ - ತಿರುಕ್ಕುಱುಙ್ಗುಡಿಯೆಂಬ ದಿವ್ಯದೇಶದಮೇಲೆ ರಚಿತವಾದ, ಇವೈ ಪಱ್ಱುಮ್-ಈ ದಶಕವನ್ನು, ಅಱಿಯಕಱ್ಱು-ಜ್ಞಾನಪ್ರಕಾಶವಾಗುವಂತೆ ಅಭ್ಯಾಸ ಮಾಡಿ, ವಲ್ಲಾರ್-ಅರ್ಥಾನುಸನ್ಧಾನಮಾಡಬಲ್ಲವರು, ಆೞಿಕಡಲ್-ಅಗಾಧವಾದ ಸಮುದ್ರದಿಂದ ಪರಿವೃತವಾದ, ಞಾಲತ್ತುಳ್ಳೇ-ಭೂಲೋಕದಲ್ಲೇ, ವೈಟ್ಟಣವರ್-ವಿಷ್ಣುಭಕ್ತರಾಗುವರು.

( ಸ-ಗಾ-ರ || )-

ಜ್ಞಾತುಂ ದುಶ್ಶಕಮಚ್ಯುತಂ ಹಿ ಜಗತಾಂ ನಾಥಂ ಹರಿಂ ಶ್ರೀಧರಂ
ಸ್ತೋತುಂ ಚಕ್ರಧರಂ ಚ ದಿವ್ಯಕುರುಕಾಪುರ್ಯಾಶ್ಶಠಾರಿಃ ಪ್ರಭುಃ ।
ಸಾಹಸ್ರಂ ಶುಭದಿವ್ಯಪದ್ಯಕುಸುಮಾವಲ್ಯಾತ್ಮಕಂ ವ್ಯಾತನೋ-
ತ್ತತ್ರೇದಂ ದಶಕಂ ಕುರಙ್ಗಪುರಗಂ ಜ್ಞಾತ್ವಾ ಜನಾ ವೈಷ್ಣವಾಃ ||

ತಾ|| ತಿಳಿಯಲು ಅಶಕ್ಯವಾದ ಮಹಿಮೆಯುಳ್ಳ ಸ್ವಾಮಿಯಾದ ಚಕ್ರಪಾಣಿಯನ್ನು ಸ್ತೋತ್ರಮಾಡಿ ದಿವ್ಯಸುಗನ್ಧಿಪುಷ್ಪಮಾಲಾಸದೃಶವಾದ ಪದ್ಯಮಾಲೆಯನ್ನು ಶ್ರೀಕುರುಕಾಪುರೀಶ್ವರರಾದ ಶಠಾರಿಮುನಿವರ್ಯರು ಸಹಸ್ರ ಗಾಥಾತ್ಮಕವಾಗಿ ರಚಿಸಿ ಇರುವುದರಿಂದ ಅದರೊಳು ತಿರುಕ್ಕುಱುಙ್ಗುಡಿನಂಬಿ ವಿಷಯಕವಾದ ಈ ದಶಕವನ್ನು ಅನುಸನ್ಧಾನಮಾಡಬಲ್ಲವರು ಈ ಭೂಲೋಕದಲ್ಲೇ ವಿಷ್ಣುಭಕ್ತರಾಗಿ ಮುಕ್ತರಾಗುವರೆಂದು ಭಾವವು

( ದ್ರಾ-ಉ-ಸಂ )—

ತಾದೃಕ್ ಸ್ವಮೋಹಗಳಸೇ ಸತಿ ಭಾವನಾಯಾ-
ಭೂಮ್ನಾ ಹರೇರವಯವಾಭರಣಾದಿದೃಷ್ಟ್ಯಾ ।
ಪ್ರತ್ಯಕ್ಷತಸ್ತದನುಭೂತ್ಯನವಾಪ್ತಿತಶ್ಚ
ಪ್ರೀತ್ಯಾ ಶುಚಾ ಮುನಿರಯುಜ್ಯತ ಪಞ್ಚಮೇ ಸಃ ||

( ದ್ರ—ಉ—ತಾ—ರ)—

ಶಙ್ಖಾದ್ಯೈರ್ಯಜ್ಞಸೂತ್ರಾದಿಭಿರಪಿ ಚ ತಥಾ ಶಾರ್ಙ್ಗಮುಖ್ಯೈಸ್ತುಲಸ್ಯಾ
ಬಿಮ್ಬೋಷ್ಠಾದ್ಯೈಸ್ಸುನಾಸಾವ್ರತತಿನಿರವಧಿಜ್ಯೋತಿರೂರ್ಜಸ್ವಿಮೂರ್ತ್ಯಾ |
ನೇತ್ರಾಬ್ಜಾದ್ಯೈರಶೇಷಾಭರಣಸುಷುಮಯಾ ಸ್ವೈಶ್ಚ ಭಕ್ತೈರ್ಮನೋಜ್ಞೋ
ದೇವಸ್ಸ್ವನಾಮಜಸ್ರಂ ಸ್ಮೃತಿವಿಷಯತಯಾ ಭಾತಿ ಚೇತ್ಯಭ್ಯಧಾಯಿ ||

(ಈ ಪಞ್ಚಮದಶಕದ ಸಾರಾಂಶ—)

ಈ ಐದನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ತನ್ನನ್ನು ಜನನಿಯರೂ ಸಖೀಜನರೂ ಆಕ್ಷೇಪಿಸುತ್ತ ಕೋಪಮಾಡುತ್ತಿದಾರೆಂದು ಭಾವಿಸಿ, ತಿರುಕ್ಕುಱುಙ್ಗುಡಿ ನಂಬಿಯಾದ ಭಗವನ್ತನನ್ನು ತಾನು ದರ್ಶನಮಾಡಿದಮೇಲೆ ಈ ನಾಯಕಿಯು ಪ್ರತ್ಯಕ್ಷವಾಗಿ ಅನುಭವಿಸಲಿಲ್ಲವೆಂದು ಖಿನ್ನೆಯಾಗಿ ತನಗೆ ಉಂಟಾಗಿರುವ ದಶೆಯನ್ನು ಅವನ ದಿವ್ಯಸೌನ್ದರ್ಯ—ದಿವ್ಯಾಭರಣ—ದಿವ್ಯಾಯುಧಾದಿ ವರ್ಣನದೊಡನೆ ಅವರಿಗೆ ತಾನು ನಿರೂಪಿಸುತ್ತಿರುವುದಾಗಿ ಭಾವಿಸಿ—ವರ್ಣಿಸಿ ಇರುತ್ತಾರೆ.

# ಪಞ್ಚಮಶತಕದಲ್ಲಿ—ಷಷ್ಠದಶಕ.

## (ಕಡಲ್ಞಾಲಮ್—)

(ಈ ದಶಕದಲ್ಲ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂಪಡೆದು ಈಶ್ವರ ಕೃತ್ಯಗಳನ್ನೆಲ್ಲಾ ಅನುಕಾರದಿಂದ ಗೋಪಿಗಳಂತೆ ತಾನೇ ಮಾಡಿದುದಾಗಿ ಹೇಳುವ ನಾಯಕಿಯ ದಶೆಯನ್ನು ಅವಳ ತಾಯಿಯು ವರ್ಣಿಸುವಂತೆ—ವಿವರಿಸಿ ಇರುತಾರೆ

(೧) ಕಡಲ್ಞಾಲಮ್ ಶೆಯ್ದೇನುಮ್ ಯಾನೇ ಯೆನ್ನುಮ್,
ಕಡಲ್ಞಾಲಮಾವೇನುಮ್ ಯಾನೇ ಯೆನ್ನುಮ್,
ಕಡಲ್ಞಾಲಮ್ ಕೊಣ್ಡೇನುಮ್ ಯಾನೇ ಯೆನ್ನುಮ್
ಕಡಲ್ಞಾಲಮ್ ಕೀಣ್ಡೇನುಮ್ ಯಾನೇ ಯೆನ್ನುಮ್,
ಕಡಲ್ಞಾಲಮುಣ್ಡೇನುಮ್ ಯಾನೇ ಯೆನ್ನುಮ್,
ಕಡಲ್ಞಾಲತ್ತೀಶನ್ ವನ್ದೇಱಕ್ಕೊಲೋ,
ಕಡಲ್ಞಾಲತ್ತೀರ್ಕ್ಕಿವೈಯೆನ್ ಶೊಲ್ಲುಕೇನ್,
ಕಡಲ್ಞಾಲತ್ತೆನ್ ಮಕಳ್ ಕಱ್ಕಿನ್ಱವೇ.

ಪ್ರ॥ ಕಡಲ್ ಞಾಲಮ್ - ಸಮುದ್ರದಿಂದ ಪರಿವೃತವಾದ ಭೂಮಿಯನ್ನು, ಶೆಯ್ದೇನುಮ್-ಸೃಷ್ಟಿಮಾಡಿದ ಸ್ವಾಮಿಯೂ, ಯಾನೇ—ನಾನೇ, ಎನ್ನುಮ್-ಎಂದು ಹೇಳುತ್ತಾಳೆ, ಕಡಲ್ ಞಾಲಮಾವೇನುಮ್ - ಈ ಜಗದ್ರೂಪಿಯಾಗಿರುವ ಸ್ವಾಮಿಯೂ, ಯಾನೇ ಯೆನ್ನುಮ್—ನಾನೇ ಎನ್ನುತ್ತಾಳೆ, ಕಡಲ್ ಞಾಲಮ್ ಕೊಣ್ಡೇನಮ್ - (ವಾಮನಾವತಾರದಲ್ಲಿ) ಈ ಜಗತ್ತನ್ನೆಲ್ಲಾ ಅಳೆದುಕೊಂಡ ಸ್ವಾಮಿಯೂ, ಯಾನೇ ಯೆನ್ನುಮ್—ನಾನೇ ಎನ್ನುತ್ತಾಳೆ, ಕಡಲ್ ಞಾಲಮ್ ಕೀಣ್ಡೇನುಮ್—ಈ ಭೂಮಿಯನ್ನು (ವರಾಹಾವತಾರದಲ್ಲಿ) ಉದ್ಧರಿಸಿದ ಸ್ವಾಮಿಯೂ, ಯಾನೇ ಯೆನ್ನುಮ್—ನಾನೇ ಎನ್ನುತ್ತಾಳೆ, ಕಡಲ್ ಞಾಲಮುಣ್ಡೇನುಮ್—ಈ ಪ್ರಪಂಚವನ್ನೆಲ್ಲಾ (ಪ್ರಳಯಕಾಲದಲ್ಲಿ) ಭಕ್ಷಿಸಿದ ಸ್ವಾಮಿಯೂ, ಯಾನೇ

ಯೆನ್ನವಮ್ - ತಾನೇ ಎನ್ನುತ್ತಾಳೆ; ಕಡಲ್ ಜ್ಞಾಲತ್ತೀಶರ್-ಸಕಲ ಜಗದೀಶ್ವರನಾದ ಸ್ವಾಮಿಯು, ವನ್ದು ಏತ್ತಿಕ್ಕೊಲೋ ?—ಬಂದು ಇವಳನ್ನು ಆವೇಶಿಸಿ ಇರಬಹುದೋ ?. ಕಡಲ್ ಜ್ಞಾಲತ್ತೀರ್‌ಕ್ಕು-ಈ ಪ್ರಪಂಚದಲ್ಲಿ ವಾಸವಾಡುವ ನಿಮಗೆ, ಕಡಲ್ ಜ್ಞಾಲತ್ತು-ಈ ಪ್ರಪಂಚದಲ್ಲಿ ಜೀವಿಸಿಕೊಂಡಿರುವ, ಎನ್ ಮಕಳ್-ಈ ನನ್ನ ಮಗಳು, ಕತ್ತಿಕ್ಕಿನ್ದ-ಅಭ್ಯಸಿಸುವ, ಇವ್ವೈ-ಈ ಅದ್ಭುತ ವ್ಯಾಪಾರಗಳನ್ನು, ಎನ್ ಶೊಲ್ಲುಕೇನ್-ಏನೆಂದು ವರ್ಣಿಸಲಿ ?

( ಸ-ಗಾ-ರ || )—

ಪೃಥ್ವೀಂ ಪಯೋನಿಧಿವೃತಾಮಹಮೇವ ಕೃತ್ವಾ
ಪೃಥ್ವೀ ಪಯೋನಿಧಿವೃತಾಽಪ್ಯಹಮಸ್ಮಿ ಸತ್ಯಮ್ |
ಪೃಥ್ವೀಂ ಪಯೋನಿಧಿವೃತಾಂ ಯದಹಂ ಗೃಹೀತ್ವಾ
ಪೃಥ್ವೀಂ ಪಯೋನಿಧಿವೃತಾಂ ಧೃತವತ್ಯಹಂ ಹಿ ||
ಪೃಥ್ವೀಂ ಪಯೋನಿಧಿವೃತಾಮಹಮೇವ ಭುಕ್ತ್ವಾ
ವರ್ತೇ ಕಿಲೇತಿ ಜಗದೀಶ್ವರಸಂಪ್ರವಿಷ್ಟಾ |
ಸೇಯಂ ಸುತಾ ಮಮ ಕಥಂ ಭವತೀಹ ಲೋಕೇ
ಯುಷ್ಮಾಕ್ ವದಾನಿ ಕಥಮದ್ಯ ಚರಿತ್ರಮಸ್ಯಾಃ ? ||

ತಾ|| (ಸಾಕ್ಷಾದ್ಭಗವನ್ತನಿಂದ ಆವಿಷ್ಟೆಯಾಗಿರುವಂತೆ ಅವನು ಮಾಡಿದ ಕಾರ್ಯಗಳನ್ನೆಲ್ಲಾ ತಾನೇ ಮಾಡಿದುದಾಗಿ ಈ ನಾಯಕಿಯು ಭಾವಿಸಿ ಹೇಳುತ್ತಾಳೆಂದು ತಾಯಿಯು ವರ್ಣಿಸುತ್ತಾಳೆ) ಸಮುದ್ರದಿಂದ ಪರಿವೃತವಾದ ಭೂಮಿಯನ್ನು ನಾನೇ ಸೃಷ್ಟಿಮಾಡಿದೆನೆಂದೂ, ಆ ಭೂಮಿಯು ನಾನೇ ಎಂದೂ, ಆ ಭೂಮಿಯನ್ನು (ವಾಮನನಾಗಿ) ಅಳೆದುಕೊಂಡವನೂ ನಾನೇ ಎಂದೂ, (ವರಾಹರೂಪಿಯಾಗಿ) ಆ ಭೂಮಿಯನ್ನು ಉದ್ಧಾರ ಮಾಡಿದವನೂ ನಾನೇ ಎಂದೂ, (ಪ್ರಳಯಕಾಲದಲ್ಲಿ) ಆ ಭೂಮಿಯನ್ನು ಭಕ್ಷಿಸಿದವನೂ ನಾನೇ ಎಂದೂ, ಈ ನಾಯಕಿಯು ಹೇಳುತ್ತಾಳೆ. ಇವಳನ್ನು ಸಕಲಲೋಕೇಶ್ವರನು ಆವೇಶಿಸಿ ಇರುವಂತೆ ತೋರುತ್ತದೆ. ಈ ನನ್ನ ಮಗಳು ಮಾಡುವ ವ್ಯಾಪಾರಗಳನ್ನೆಲ್ಲಾ ಈ ಲೋಕದಲ್ಲಿ ವಾಸಮಾಡುವ ನಿಮಗೆ ನಾನು ಏನೆಂದು ವರ್ಣಿಸಲಿ ?

(೨) ಕಱ್ಕುಮ್ ಕಲ್ವಿಕ್ಕೆಲ್ಲೈಯಿಲನೇ ಯೆನ್ನುಮ್,
ಕಱ್ಕುಮ್ ಕಲ್ವಿಯಾವೇನುಮ್ ಯಾನೇ ಯೆನ್ನುಮ್,
ಕಱ್ಕುಮ್ ಕಲ್ವಿಶೆಯ್ವೇನುಮ್ ಯಾನೇ ಯೆನ್ನುಮ್,
ಕಱ್ಕುಮ್ ಕಲ್ವಿ ತೀರ್ಪ್ಪೇನುಮ್ ಯಾನೇ ಯೆನ್ನುಮ್
ಕಱ್ಕುಮ್ ಕಲ್ವಿಚ್ಚಾರಮುಮ್ ಯಾನೇ ಯೆನ್ನುಮ್,
ಕಱ್ಕುಮ್ ಕಲ್ವಿನಾತನ್ ವನ್ದೇಱಕ್ಕೊಲೋ,
ಕಱ್ಕುಮ್ ಕಲ್ವಿಯೀರ್ಕ್ಕಿವೈ ಯೆನ್ ಶೊಲ್ಲುಕೇನ್,
ಕಱ್ಕುಮ್ ಕಲ್ವಿಯೆನ್ ಮಕಳ್ ಕಾಣ್ಕಿನ್ಱವೇ.

ಪ್ರ॥ ಕಱ್ಕುಮ್ ಕಲ್ವಿಕ್ಕು – (ಆಚಾರ್ಯದ್ವಾರಾ) ಕಲಿಯುವ ವೇದಶಾಸ್ತ್ರಕ್ಕೆ, ಎಲ್ಲೈ ಇಲನೇ ಎನ್ನುಮ್ – ನಾನು ಎಲ್ಲೆಯೇ ಇಲ್ಲದ ಅಧಿಕಾರಿ ಎನ್ನುತ್ತಾಳೆ, ಕಱ್ಕುಮ್ ಕಲ್ವಿ ಆವೇನುಮ್ – ಆ ವೇದರೂಪ ವಿದ್ಯಾತ್ಮಕನಾದ ಸ್ವಾಮಿಯೂ, ಯಾನೇ ಎನ್ನುಮ್–ನಾನೇ ಎನ್ನುತ್ತಾಳೆ, ಕಱ್ಕುಮ್ ಕಲ್ವಿ ಶೆಯ್ವೇನುಮ್–ಆ ವಿದ್ಯೆಯನ್ನೆಲ್ಲಾ ಉಂಟುಮಾಡುವ ಸ್ವಾಮಿಯೂ, ಯಾನೇ ಎನ್ನುಮ್–ನಾನೇ ಎನ್ನುತ್ತಾಳೆ, ಕಱ್ಕುಮ್ ಕಲ್ವಿ ತೀರ್ಪ್ಪೇನುಮ್-ಆ ವಿದ್ಯೆಯನ್ನೆಲ್ಲಾ ಉಪಸಂಹಾರ ಮಾಡುವ ಸ್ವಾಮಿಯೂ, ಯಾನೇ ಎನ್ನುಮ –ನಾನೇ ಎನ್ನುತ್ತಾಳೆ, ಕಱ್ಕುಮ್ ಕಲ್ವಿ ಚ್ಚಾರಮುಮ್–ಆ ವೇದವಿದ್ಯಾ ಸಾರರೂಪವಾದ (ಮೂಲಮನ್ತ್ರಾದಿ) ಮನ್ತ್ರ ಶಾಸ್ತ್ರವೂ, ಯಾನೇ ಎನ್ನುಮ್–ನಾನೇ ಎನ್ನುತ್ತಾಳೆ, ಕಱ್ಕುಮ್ ಕಲ್ವಿನಾತನ್–ಸಕಲವೇದಶಾಸ್ತ್ರಕ್ಕೂ ಸ್ವಾಮಿಯಾದ ಭಗವನ್ತನು, ವನ್ದೇಱಕ್ಕೊಲೋ-ಇವಳನ್ನು ಆವೇಶಿಸಿ ಇರಬಹುದೋ ಕಱ್ಕುಮ್ ಕಲ್ವಿಯೀರ್ಕ್ಕು-ಈ ಪ್ರಕಾರ ನನ್ನ ಮೂಲಕ ಶಿಕ್ಷಿಸಲ್ಪಡುವ ನಿಮಗೆ, ಕಱ್ಕುಮ್ ಕಲ್ವಿ-ಈಗ ತಾನೇ ಮಾತನಾಡುವ ವಿದ್ಯೆಯನ್ನು ಕಲಿಯುವ ಬಾಲ್ಯದಲ್ಲಿರುವ, ಎನ್ ಮಕಳ್–ನನ್ನ ಈ ಮಗಳು, ಕಾಣ್ಕಿನ್ಱ-ತಾನು ಕಂಡುಹೇಳುವ, ಇವೈ-ಈ ಪ್ರಕಾರಗಳನ್ನು, ಎನ್ ಶೊಲ್ಲುಕೇನ್-ನಾನು ಏನೆಂದು ವರ್ಣಿಸಲಿ ?

( ಸ-ಗಾ-ರ ॥ )—

ವಿದ್ಯಾಸು ಚಾಸ್ಮ್ಯನವಧಿಃ ಕಿಲ ಸೀಮಭೂಮಿ
ರ್ವಿದ್ಯಾತ್ಮಿಕಾಽಪಿ ಸಕಲಾ ತ್ವಹಮೇವ ಸತ್ಯಮ್ ।
ವಿದ್ಯಾಂ ಕಿಲಾಹಮಖಿಲಾಂ ಸ್ವಯಮೇವ ಕೃತ್ವಾ
ವಿದ್ಯಾಮಹಾರ್ಣಮಖಿಲಾಮುಕಮೇವ ಚಾನ್ತೇ ॥
ವಿದ್ಯಾಸು ಸಾರತಮಮಸ್ಯಹಮಸ್ಮಿ ಸತ್ಯಂ
ಚೇತ್ಯೇವ ವಕ್ತಿ ತನಯಾ ಮಮ ಸಂಪ್ರವಿಷ್ಟಾ ।
ವಿದ್ಯೇಶ್ವರೇಣ ಹರಿಣಾ ಕಥಮದ್ಯ ಯುಷ್ಮಾನ್
ವಿದ್ಯಾಶ್ರಯಾನ್ ಕಿಮಿತಿ ವಚ್ಮಿ ಕಥಾಮಿಹಾಸ್ಯಾಃ ? ॥

ತಾ॥ ನಾನೇ ವೇದಶಾಸ್ತ್ರಕ್ಕೆಲ್ಲಾ ಅಧಿಕಾರಿ ಎಂದೂ, ನಾನೇ ವೇದಶಾಸ್ತ್ರವೆಲ್ಲಾ ಎಂದೂ, ನಾನೇ ಆ ಶಾಸ್ತ್ರವನ್ನು ಉಂಟುಮಾಡುವವನೆಂದೂ, ನಾನೇ ಶಾಸ್ತ್ರವನ್ನೆಲ್ಲಾ ಉಪಸಂಹಾರ ಮಾಡುವವನೆಂದೂ, ಆ ವೇದಶಾಸ್ತ್ರದ ಸಾರರೂಪವಾದ ಮನ್ತ್ರಶಾಸ್ತ್ರವೂ ನಾನೇ ಎಂದೂ—ಇವಳು ಹೇಳುತ್ತಾಳೆ. ಇವಳನ್ನು ವಿದ್ಯೇಶ್ವರನಾದ ಭಗವನ್ತನು ಆವೇಶಿಸಿದಂತೆ ತೋರುತ್ತದೆ. ಇವಳು ಹೇಳುವಪ್ರಕಾರಗಳನ್ನೆಲ್ಲಾ ನಿಮಗೆ ನಾನು ಏನೆಂದು ವರ್ಣಿಸಲಿ ?

(೩) ಕಾಣ್ಕಿನ್ಱ ನಿಲಮೆಲ್ಲಾಮ್ ಯಾನೇ ಯೆನ್ನುಮ್,
ಕಾಣ್ಕಿನ್ಱ ವಿಶುಮ್ಬೆಲ್ಲಾಮ್ ಯಾನೇ ಯೆನ್ನುಮ್,
ಕಾಣ್ಕಿನ್ಱ ವೆನ್ದೀಯೆಲ್ಲಾಮ್ ಯಾನೇ ಯೆನ್ನುಮ್,
ಕಾಣ್ಕಿನ್ಱ ಇಕ್ಕಾಱ್ಱೆಲ್ಲಾಮ್ ಯಾನೇ ಯೆನ್ನುಮ್,
ಕಾಣ್ಕಿನ್ಱ ಕಡಲೆಲ್ಲಾಮ್ ಯಾನೇ ಯೆನ್ನುಮ್,
ಕಾಣ್ಕಿನ್ಱ ಕಡಲ್ವಣ್ಣನೇಱಕೊಲೋ,
ಕಾಣ್ಕಿನ್ಱ ವುಲಕತ್ತೀರ್ಕ್ಕೆನ್ ಶೊಲ್ಲುಕೇನ್,
ಕಾಣ್ಕಿನ್ಱ ಎನ್ಕಾರಿಕ್ಕೈ ಶೆಯ್ಕಿನ್ಱನವೇ.

ಪ್ರ॥ ಕಾಣ್ಕಿನ್ನ ನಿಲವೆಲ್ಲಾಮ್ – (ನೋಡುವವರಿಗೆ) ಕಾಣುವ ಭೂಮಿ ಯೆಲ್ಲಾ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ, ಕಾಣ್ಕಿನ್ನ ವಿಶುಮ್ಬೆಲ್ಲಾಮ್- ಕಾಣುವ ಆಕಾಶವೆಲ್ಲಾ, ಯಾನೇ ಎನ್ನುಮ್ – ನಾನೇ ಎನ್ನುತ್ತಾಳೆ; ಕಾಣ್ಕಿನ್ನ-ಕಾಣುವ, ವೆಮ್ ತೀ ಎಲ್ಲಾಮ್ – ಉಷ್ಣವಾದ ಅಗ್ನಿಯೆಲ್ಲಾ, ಯಾನೇ ಎನ್ನುಮ್–ನಾನೇ ಎನ್ನುತ್ತಾಳೆ; ಕಾಣ್ಕಿನ್ನ ಇಕ್ಕಾಱ್ಱೆಲ್ಲಾಮ್–ಕಾಣುವ ಈ ಗಾಳಿಯೆಲ್ಲಾ, ಯಾನೇ ಎನ್ನುಮ್ – ನಾನೇ ಎನ್ನುತ್ತಾಳೆ; ಕಾಣ್ಕಿನ್ನ ಕಡಲೆಲ್ಲಾಮ್ – ಕಾಣುವ ಸಮುದ್ರ (ಜಲ) ವೆಲ್ಲಾ, ಯಾನೇ ಎನ್ನುಮ್–ನಾನೇ ಎನ್ನುತ್ತಾಳೆ; ಕಾಣ್ಕಿನ್ನ-ದರ್ಶನೀಯವಾದ, ಕಡಲ್–ಸಮುದ್ರದಂತೆ, ವಣ್ಣ– ದಿವ್ಯಕಾನ್ತಿಯುಳ್ಳ ಸರ್ವೇಶ್ವರನು, ಏಱಿಕ್ಕೊಲೋ–(ಇವಳನ್ನು) ಆವೇಶಿಸಿದಾನೆಯೋ? ಕಾಣ್ಕಿನ್ನ ಉಲಕತ್ತೀರ್ಕ್ಕ–ಕಾಣುವ ಈ ಲೋಕದ ಜನರಾದ ನಿಮಗೆ, ಕಾಣ್ಕಿನ್ನ– ಕಣ್ಣಿಗೆ ದರ್ಶನೀಯಳಾದ, ಎನ್ ಕಾರಿಕೈ – (ಈ) ನನ್ನ ಮಗಳು, ಶೆಯ್ಕಿನ್ನ (ನ)ವೇ – ಮಾಡುವ ಕೃತ್ಯಗಳನ್ನು, ಎನ್ ಶೊಲ್ಲುಕೇನ್ – ಏನೆಂದು ವರ್ಣಿಸಲಿ?

( ಸ–ಗಾ–ರ ॥ )—

ದೃಶ್ಯಾ ಕಿಲಾಸ್ಮಿ ಪೃಥಿವೀ ಸಕಲಾಽಹಮೇವ
ದೃಶ್ಯಂ ಕಿಲಾಹಮಖಿಲಂ ಗಗನಂ ಸ್ವಯಂ ತತ್ ।
ದೃಶ್ಯೋಽಪಿ ಹನ್ತ! ದಹನೋಽಸ್ಯಹಮೇವ ಚೋಷ್ಣೋ
ದೃಶ್ಯೋಽಪಿ ವಾಯುರಖಿಲೋ ಽಸ್ಮ್ಯಹಮೇವ ಸತ್ಯಮ್ ॥
ದೃಶ್ಯೋಽಪಿ ವಾರಿನಿಧಿರಸ್ಮ್ಯಹಮೇವ ಸರ್ವ–
ಶ್ಚೇತ್ಯೇವ ವಕ್ತಿ ತನಯಾ ಮಮ ಸಂಪ್ರವಿಷ್ಟಾ ।
ದೃಶ್ಯೇನ ಚಾಮ್ಬುನಿಧಿವರ್ಣಯುತೇನ ತೇನೇ–
ತ್ಯೇವಂ ಕಿಮದ್ಯ ಚರಿತಂ ತು ವದಾನಿ ವೋಽಸ್ಯಾಃ? ॥

ತಾ॥ (ಜನರಿಗೆ) ಕಾಣುವ ಭೂಮಿಯೂ, ಆಕಾಶವೂ, ಅಗ್ನಿಯೂ, ವಾಯುವೂ, ಸಮುದ್ರವೂ, ಎಲ್ಲವೂ ನಾನೇ ಎಂದು ಈ ನನ್ನ ಮಗಳು ಹೇಳುತ್ತಾಳೆ ಸಮುದ್ರ ವರ್ಣನಾದ ಆ ಸ್ವಾಮಿಯು ಇವಳನ್ನು ಆವೇಶಿಸಿ ಇರಬಹುದಷ್ಟೆ. ಇವಳ ಚರಿತ್ರೆಗಳನ್ನು ನಿಮಗೆ ನಾನು ಏನೆಂದು ವರ್ಣಿಸಲಿ?

(೪) ಶೆಯ್‌ಕಿನ್ಱ ಕಿದಿಯೆಲ್ಲಾಮ್ ಯಾನೇ ಯೆನ್ನುಮ್,
ಶೆಯ್‌ವಾನಿನ್ಱನಕಳುಮ್ ಯಾನೇ ಯೆನ್ನುಮ್,
ಶೆಯ್ದುಮುನ್ನಿಱನ್ದವುಮ್ ಯಾನೇ ಯೆನ್ನುಮ್,
ಶೆಯ್‌ಕೈಪ್ಪಯನುಣ್ಬೇನುಮ್ ಯಾನೇ ಯೆನ್ನುಮ್,
ಶೆಯ್‌ವಾರ್‌ಕಳ್ಳೈ ಚ್ಚೆಯ್ವೇನುಮ್ ಯಾನೇ ಯೆನ್ನುಮ್,
ಶೆಯ್ಯಕಮಲಕ್ಕಣ್ಣನೇಱಕೊಲೋ,
ಶೆಯ್ಯವುಲಕತ್ತೀರ್‌ಕ್ಕಿವೈಯೆನ್ ಶೊಲ್ಲುಕೇನ್,
ಶೆಯ್ಯ ಕನಿವಾಯಿಳಮಾನ್ ತಿಱತ್ತೇ.

ಪ್ರ|| ಶೆಯ್‌ಕಿನ್ಱ-ಮಾಡಲ್ಪಡುವ, ಕಿದಿಯೆಲ್ಲಾಮ್-ಕಾರ್ಯವೆಲ್ಲಾ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ; ಶೆಯ್‌ವಾನಿನ್ಱನಕಳುಮ್ - ಮುಂದೆ ನಡೆಯ ಬೇಕಾದ ಕಾರ್ಯಗಳೂ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ; ಮುನ್ ಶೆಯ್ದು ಇಱನ್ದವುಮ್ - ಮುಂಚೆ (ಹಿಂದೆ) ಮಾಡಲ್ಪಟ್ಟು ಅತೀತವಾದ ಕಾರ್ಯಗಳೂ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ. ಶೆಯ್‌ಕೈ ಪಯನ್-ಕಾರ್ಯಗಳ ಫಲವನ್ನು, ಉಣ್ಬೇನುಮ್ - ಭುಜಿಸುವವನೂ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ; ಶೆಯ್ವಾರ್‌ಕಳ್ಳೈ - ಕಾರ್ಯಗಳನ್ನು ಮಾಡುವವರನ್ನು, ಶೆಯ್ವೇನುಮ್ - ಉಂಟು ಮಾಡುವವನೂ, ಯಾನೇ ಎನ್ನುಮ್ - ನಾನೇ ಎನ್ನುತ್ತಾಳೆ; ಶೆಯ್ಯ ಕಮಲ ಕ್ಕಣ್ಣನ್ - ಕೆಂದಾವರೆಯಂತೆ ಕಣ್ಣುಗಳುಳ್ಳ ಸರ್ವೇಶ್ವರನು, ಏಱಕೊಲೋ- ಇವಳನ್ನು ಆವೇಶಿಸಿರಬಹುದೋ? ಶೆಯ್ಯ ಉಲಕತ್ತೀರ್‌ಕ್ಕು-ಸಾಧುಜನರಾದ ಈ ಲೋಕವಾಸಿಗಳಾದ ನಿಮಗೆ, ಶೆಯ್ಯ ಕನಿವಾಯ್-ಬಿಂಬಾಧರವುಳ್ಳ, ಇಳಮಾನ್- ಸುಕುಮಾರವಾದ ಹುಲ್ಲೆಕರುವಿನಂತಿರುವ ಇವಳ, ತಿಱತ್ತು ಪ್ರಕಾರಗಳಾದ, ಇವೈ-ಈ ಲೀಲೆಗಳನ್ನು, ಎನ್ ಶೊಲ್ಲುಕೇನ್-ಏನೆಂದು ವರ್ಣಿಸಲಿ?

( ಸ–ಗಾ–ರ || )—

ಕೃತ್ಯಂ ಚ ಸರ್ವಮಹಮೇವ ಹಿ ವರ್ತಮಾನಂ
ಕೃತ್ಯಂ ಚ ಭಾವಿ ಸಕಲಂ ತ್ವಹಮೇವ ಸತ್ಯಮ್ |
ಕೃತ್ಯಂ ಚ ಭೂತಮಖಿಲಂ ತ್ವಹಮೇವ ಸತ್ಯಂ
ಕೃತ್ಯಾವಳೇಶ್ಚ ಫಲಭುಕ್ ಸ್ವಯಮೇವ ಚಾಸ್ಮಿ ||
ಕರ್ತ್ರಾವಳೀಂ ಚ ಸಕಲಾಮಹಮೇವ ಕೃತ್ವಾ
ವರ್ತೇ ಕಿಲೇತಿ ತನಯಾ ಮಮ ವಕ್ತಿ ಮುಗ್ಧಾ |
ಶ್ರೀಪುಣ್ಡರೀಕನಯನೇನ ಹಿ ಸಂಪ್ರವಿಷ್ಟಾ
ವೃತ್ತಂ ಕಥಂ ಬತ! ವದಾನಿ ಚ ಕೋಮಲಾಂಗ್ಯಾಃ ? ||

ತಾ|| ವರ್ತಮಾನವಾದ ಕೃತ್ಯವೂ, ಭವಿಷ್ಯತ್ಕೃತ್ಯವೂ, ಭೂತಕಾಲದ ಕೃತ್ಯವೂ ನಾನೇ ಎಂದೂ, ಸರ್ವಕಾರ್ಯ ಫಲಭೋಕ್ತಾ ನಾನೇ ಎಂದೂ, ಸರ್ವಕಾರ್ಯ ಕರ್ತೃಗಳನ್ನು ಉಂಟುಮಾಡಿದವನೂ ನಾನೇ ಎಂದೂ, ಈ ನನ್ನ ಮಗಳು ಹೇಳುತ್ತಾಳೆ. ಇವಳನ್ನು ಪುಂಡರೀಕಾಕ್ಷನಾದ ಭಗವನ್ತನು ಆವೇಶಿಸಿದಂತೆ ತೋರುತ್ತದೆ. ಈ ಕೋಮಲಾಂಗಿಯ ಲೀಲೆಗಳನ್ನು ನಿಮಗೆ ಏನೆಂದು ವರ್ಣಿಸಲಿ?

(೫) ತಿಱಮ್ಬಾಮಲ್ ಮಣ್ ಕಾಕ್ಕಿನ್ಱೇನ್ ಯಾನೇ ಯೆನ್ನುಮ್,
ತಿಱಮ್ಬಾಮಲ್ ಮಲೈಯೆಡುತ್ತೇನೇ ಯೆನ್ನುಮ್,
ತಿಱಮ್ಬಾಮಲಶುರರೈ ಕ್ಕೊನ್ಱೇನೇ ಯೆನ್ನುಮ್,
ತಿಱಮ್ ಕಾಟ್ಟಿ ಯನ್ಱವರೈ ಕ್ಕಾತ್ತೇನೇ ಯೆನ್ನುಮ್,
ತಿಱಮ್ಬಾಮಲ್ ಕಡಲ್‌ಕಡೈನ್ದೇನೇ ಯೆನ್ನುಮ್,
ತಿಱಮ್ಬಾದ ಕಡಲ್‌ವಣ್ಣನೇಱಕ್ಕೊಲೋ,
ತಿಱಮ್ಬಾದ ವುಲಕತ್ತೀರ್ ಕ್ಕೆನ್ ಶೊಲ್ಲುಕೇನ್,
ತಿಱಮ್ಬಾದೆನ್ ತಿರುಮಕಳೆಯ್ದಿನವೇ.

ಪ್ರ|| ತಿಱಮ್ಬಾಮಲ್-ಆಜ್ಞಾತಿಲಂಘನವಂ ಮಾಡದೆ, ಮಣ್-ಭೂಮಿಯನ್ನು, ಕಾಕ್ಕಿನ್ಱೇನ್-ರಕ್ಷಿಸುವವನು, ಯಾನೇ ಎನ್ನುಮ್- ನಾನೇ ಎನ್ನುತ್ತಾಳೆ ; ತಿಱಮ್ಬಾಮಲ್-ಚಲಿಸದಂತೆ, ಮಲೈ - ಪರ್ವತವನ್ನು, ಎಡುತ್ತೇನೇ ಎನ್ನುಮ್-ಎತ್ತಿ

ದವನು ನಾನೇ ಎನ್ನುತ್ತಾಳೆ; ತಿರುಮ್ಬಾಮಲ್ – ತಪ್ಪದಂತೆ, ಅಶುರರ್ೈ–ರಾಕ್ಷಸರನ್ನು, ಕೊನ್ರೇನೇ ಎನ್ನುಮ್- ಕೊಂದವನು ನಾನೇ ಎನ್ನುತ್ತಾಳೆ, ತಿರುಮ್ ಕಾಟ್ಟಿ- ಉಪಾಯಗಳನ್ನು ತೋರಿಸಿ, ಅನ್ರು–ಆ ಯುದ್ಧಕಾಲದಲ್ಲಿ, ಐವರ್ೈ–ಐದುಮಂದಿ ಪಾಂಡವರನ್ನು, ಕಾತ್ತೇನೇ ಎನ್ನುಮ್ – ರಕ್ಷಿಸಿದವನು ನಾನೇ ಎನ್ನುತ್ತಾಳೆ; ತಿರುಮ್ಬಾಮಲ್ – ಸಂಕಲ್ಪವು ತಪ್ಪದಂತೆ, ಕಡಲ್ ಕಡೈನ್ದೇನೇ ಎನ್ನುಮ್– ಸಮುದ್ರವನ್ನು ಕಡೆದವನು ನಾನೇ ಎನ್ನುತ್ತಾಳೆ, ತಿರುಮ್ಬಾದ–(ಆಶ್ರಿತರಕ್ಷಣದಲ್ಲಿ) ಮಾತಿಗೆ ತಪ್ಪದ, ಕಡಲ್‌ವಣ್ಣರ್–ಸಮುದ್ರವರ್ಣನಾದ ಸ್ವಾಮಿಯು, ಏರುಕ್ಕೊಲೋ–ಇವಳನ್ನು ಆವೇಶಿಸಿದಾನೆಯೋ! ತಿರುಮ್ಬಾದ ಉಲಕತ್ತೀರ್‌ಕ್ಕು–ತಿಳಿಯಬೇಕೆಂಬ ಆಶೆಯುಳ್ಳ ಈ ಲೋಕದ ಜನರಾದ ನಿಮಗೆ, ಎನ್ ತಿರುಮಕಳ್–ನನ್ನ ಈ ಮಗಳು, ತಿರುಮ್ಬಾದು ಎಯ್ದಿನ – ತಪ್ಪದೆ ಹೊಂದಿದ ಪ್ರಕಾರಗಳನ್ನು, ಎನ್ ಶೊಲ್ಲುಕೇನ್–ಏನೆಂದು ನಾನು ವರ್ಣಿಸಲಿ?

(ಸ–ಗಾ–ರ ||)—

ಆಜ್ಞಾಂ ಪ್ರಚಾರ್ಯ ಪೃಥಿವೀಂ ಪರಿಪಾಲಯಾಮಿ
ಸ್ವೈರಂ ಗಿರಿಂ ತಮುಚಲಂ ಸಮಧಾರಯಂ ಪ್ರಾಕ್ |
ಸರ್ವಾಸುರಾವಳಿಮಹಂ ನ್ಯಹನಂ ಪುರಾ ತಾಂ
ತಾನ್ ಪಾಣ್ಡವಾನಪಿ ಚ ತನ್ತ್ರಗಿರಾಽಭ್ಯರಕ್ಷಮ್ ||
ಸಙ್ಕಲ್ಪಸಿದ್ಧಿವಿಧಯೇ ಜಲಧಿಂ ಪ್ರಮಥ್ಯ
ಸ್ವಾಭೀಷ್ಟಭಾಗಹಮಿತೀಹ ಸುತಾಽದ್ಯ ವಕ್ತಿ |
ಸೇಯಂ ಮಹಾಮ್ಬುಧಿನಿಭೇನ ಹಿ ಸಂಪ್ರವಿಷ್ಟಾ
ಕಿಂ ವಾಽದ್ಯ ವಚ್ಮಿ ತನಯಾಂ ಪ್ರತಿ ವೋಽಮ್ಬುಜಾಕ್ಷೀಮ್ ? ||

ತಾ|| ಈ ಪೃಥ್ವಿಯನ್ನು ರಕ್ಷಿಸುವವನೂ ನಾನೇ ಎಂದೂ, (ಗೋವರ್ಧನ) ಪರ್ವತವನ್ನು ಎತ್ತಿದವನೂ ನಾನೇ ಎಂದೂ, ರಾಕ್ಷಸರನ್ನೆಲ್ಲಾ ಧ್ವಂಸಮಾಡಿದವನೂ ನಾನೇ ಎಂದೂ, ಆ ಐದುಮಂದಿಪಾಂಡವರಿಗೆ ಉಪಾಯಗಳನ್ನು ತೋರಿಸಿ ರಕ್ಷಿಸಿದವನೂ ನಾನೇ ಎಂದೂ, ಸಮುದ್ರಮಥನವಂಮಾಡಿ ಸಂಕಲ್ಪಸಿದ್ಧಿಯಂ ಪಡೆದವನೂ ನಾನೇ ಎಂದೂ—ಈ ನನ್ನ ಮಗಳು ಹೇಳುತ್ತಾಳೆ. ಸಮುದ್ರವರ್ಣನಾದ ಸ್ವಾಮಿಯು ಇವಳನ್ನು ಆವೇಶಿಸಿ ಇರಬಹುದಷ್ಟೆ! ಈ ನನ್ನ ಮಗಳ ಪ್ರಕಾರಗಳನ್ನು ನಿಮಗೆ ಏನೆಂದು ವರ್ಣಿಸಲಿ?

(೬) ಇನವೇಯ್ ಮಲೈಯೇನ್ದಿನೇನ್ ಯಾನೇ ಯೆನ್ನುಮ್,
ಇನವೇಱುಕಳ್ ಶೆಱ್ಱೇನುಮ್ ಯೊನೇ ಯೆನ್ನುಮ್,
ಇನವಾನ್ ಕನ್ಱುಮೇಯ್‌ತ್ತೇನುಮ್ ಯಾನೇ ಯೆನ್ನುಮ್,
ಇನವಾನಿರೈ ಕಾತ್ತೇನುಮ್ ಯಾನೇ ಯೆನ್ನುಮ್,
ಇನವಾಯರ್ ತಲೈವನುಮ್ ಯಾನೇ ಯೆನ್ನುಮ್,
ಇನತ್ತೇವರ್ ತಲೈವನ್ ವನ್ದೇಱಕ್ಕೊಲೋ,
ಇನವೇಲ್ಕಣ್ ನಲ್ಲೀರ್‌ಕ್ಕಿವೈಯೆನ್ ಶೊಲ್ಲುಕೇನ್,
ಇನವೇಲ್ಕಣ್ಣಿ ಯೆನ್ ಮಕಳುಱ್ಱನವೇ.

ಪ್ರ॥ ಇನವೇಯ್ ಮಲೈ-ಗುಂಪಾದ ಬಿದುರು ಪೊದರುಗಳುಳ್ಳ (ಗೋವರ್ಧನ) ಪರ್ವತವನ್ನು, ಏನ್ದಿನೇನ್‌ಯಾನೇ ಎನ್ನುಮ್ – ಎತ್ತಿದವನು ನಾನೇ ಎನ್ನುತ್ತಾಳೆ; ಇನ- ಗುಂಪಾದ, ಏಱುಕಳ್-(ಏಳು) ಎತ್ತುಗಳನ್ನು, ಶೆಱ್ಱೇನುಮ್ ಯಾನೇ ಎನ್ನುಮ್–ಕೊಂದವನೂ ನಾನೇ ಎನ್ನುತ್ತಾಳೆ; ಇನ ಆನ್‌ಕನ್ಱು–ಗುಂಪಿನಲ್ಲಿರುವ ಕರುಗಳನ್ನು, ಮೇಯ್‌ತ್ತೇನುಮ್ ಯಾನೇ ಎನ್ನುಮ್ – ಮೇಯಿಸಿದವನೂ ನಾನೇ ಎನ್ನುತ್ತಾಳೆ; ಇನ ಆನಿರೈ–ಗುಂಪಾದ ಹಸುಗಳನ್ನು, ಕಾತ್ತೇನುಮ್ ಯಾನೇ ಎನ್ನುಮ್–ರಕ್ಷಿಸಿದವನೂ ನಾನೇ ಎನ್ನುತ್ತಾಳೆ; ಇನ ಆಯರ್ ತಲೈವನುಮ್–ಗುಂಪಾದ ಗೋಪಾಲಬಾಲಕರಿಗೆ ನಾಯಕನೂ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ, ಇನ ತೇವರ್‌ತಲೈವನ್–ಸಂಘೀಭೂತರಾದ ದೇವತೆಗಳಿಗೆ ಅಧಿಪತಿಯಾದ ಸರ್ವೇಶ್ವರನು, ವನ್ದು ಏಱಕ್ಕೊಲೋ–ಬಂದು ಆವೇಶಿಸಿದನೋ ? ಇನವೇಲ್‌ಕಣ್ - ಒಂದಕ್ಕೊಂದು ಸೇರಿ ವೇಲಾಯುಧದಂತೆ ಇರುವ ಕಣ್ಣುಗಳುಳ್ಳ, ನಲ್ಲೀರ್‌ಕ್ಕು–ಒಳ್ಳೆಯವರಾದ ನಿಮಗೆ, ವೇಲ್ ಇನಮ್ ಕಣ್ಣಿ–ವೇಲಾಯುಧಕ್ಕೆ ಸಮಾನವಾದ ಕಣ್ಣುಗಳುಳ್ಳ, ಎನ್ ಮಕಳ್–ನನ್ನ ಮಗಳು, ಉಱ್ಱನವೇ ಇವೈ–ಹೊಂದಿದ ಈ ಪ್ರಕಾರಗಳನ್ನು, ಎನ್ ಶೊಲ್ಲುಕೇನ್- ಏನೆಂದು ವರ್ಣಿಸಲಿ ?

( ಸ–ಗಾ–ರ || )—

ಗೋವರ್ಧನೋದ್ಧರಣಕೃತ್ ಸ್ವಯಮೇವ ಚಾಹಂ
ಸಪ್ತರ್ಷಭಾನಪಿ ವಿನಾಶ್ಯ ಜಗತ್ಪ್ರಸಿದ್ಧಾ |
ಕ್ಷೇತ್ರೇಷು ವತ್ಸನಿವಹಾನಪಿ ಘಾಸಯನ್ತೀ
ಸರ್ವಾನಹಂ ಪಶುಗಣಾನಪಿ ತಾನರಕ್ಷಮ್ ||
ಗೋಪಾಲಬಾಲನಿವಹಾಧಿಪತಾಂ ಗತಾಽಹಂ
ತ್ವಿತ್ಯೇವ ವಕ್ತಿ ತನಯಾ ಮಮ ಸಂಪ್ರವಿಷ್ಟಾ |
ದೇವೇಶ್ವರೇಣ ಖಲು ತೇನ ! ಕಥಂ ವದೇಯಂ
ಶೀಲಂ ತು ಪ್ರೋದ್ಯ ಲಲಿತಾಙ್ಗ್ಯ ಇಹೋತ್ಪಲಾಕ್ಷ್ಯಾಃ ? ||

ತಾ|| ಗೋವರ್ಧನ ಗಿರಿಯನ್ನು ಎತ್ತಿದವನು ನಾನೇ ಎಂದೂ, ಸಪ್ತ ವೃಷಭಗಳನ್ನೂ ಸಂಹರಿಸಿದವನು ನಾನೇ ಎಂದೂ, ಕರುಗಳನ್ನೆಲ್ಲಾ ಮೇಯಿಸಿದವನು ನಾನೇ ಎಂದೂ, ಪಶುಗಳನ್ನು ರಕ್ಷಿಸಿದವನು ನಾನೇ ಎಂದೂ, ಗೋಪಾಲ ಬಾಲಕರಿಗೆಲ್ಲಾ ಸ್ವಾಮಿಯು ನಾನೇ ಎಂದೂ—ಈ ನನ್ನ ಮಗಳು ಹೇಳುತ್ತಾಳೆ ಇವಳನ್ನು ಸರ್ವದೇವಾಧಿದೇವನಾದ ಭಗವಂತನು ಆವೇಶಿಸಿ ಇರಬಹುದಷ್ಟೆ! ಈ ಉತ್ಪಲಾಕ್ಷಿಯ ವ್ಯಾಪಾರಗಳನ್ನೆಲ್ಲಾ ನಿಮಗೆ ನಾನು ಏನೆಂದು ವರ್ಣಿಸಲಿ ?

(೭) ಉಱ್ಱಾರ್‌ಕಳೆನಕ್ಕಿಲ್ಲೈ ಯಾರುಮೆನ್ನುಮ್,
ಉಱ್ಱಾರ್‌ಕಳೆನಕ್ಕಿಙ್ಗೆಲ್ಲಾರುಮೆನ್ನುಮ್,
ಉಱ್ಱಾರ್‌ಕಳೈ ಚ್ಚೆಯ್‌ವೇನುಮ್ ಯಾನೇ ಯೆನ್ನುಮ್,
ಉಱ್ಱಾರ್‌ಕಳೈ ಯ್ಯಳಿಪ್ಪೇನುಮ್ ಯಾನೇ ಯೆನ್ನುಮ್,
ಉಱ್ಱಾರ್‌ಕಳುಕ್ಕುಱ್ಱೇನುಮ್ ಯಾನೇ ಯೆನ್ನುಮ್,
ಉಱ್ಱಾರಿಲಿಮಾಯನ್ ವನ್ದೇಱಕ್ಕೊಲೋ,
ಉಱ್ಱೀರ್‌ಕಳ್ಕ್ಕೆನ್ ಶೊಲ್ಲಿ ಚ್ಚೊಲ್ಲುಕೇನ್ ಯಾನ್,
ಉಱ್ಱೆನ್ನುಡೈಪ್ಪೇದೈ ಯುರೈಕ್ಕಿನ್ಱವೇ.

ಪ್ರ|| ಉಱ್ಱಾರ್‌ಕಳ್-ಬನ್ಧುಗಳು, ಎನಕ್ಕು–ನನಗೆ, ಯಾರುಮ್ ಇಲ್ಲೈ ಎನ್ನುಮ್–ಯಾರೂ ಇಲ್ಲ ಎನ್ನುತ್ತಾಳೆ, ಇಙ್ಗು–ಈ ಲೋಕದಲ್ಲಿ, ಎಲ್ಲಾರುಮ್–

ಎಲ್ಲರೂ, ಎನಕ್ಕು-ನನಗೆ, ಉಱ್ಱಾರ್‌ಕಳೇ ಎನ್ನುಮ್-ಬನ್ಧುಗಳು ಎನ್ನುತ್ತಾಳೆ; ಉಱ್ಱಾರ್‌ಕಳೈ - ಬನ್ಧುಗಳನ್ನು, ಶೆಯ್ವೇನುಮ್ - ಉಂಟುಮಾಡುವವನೂ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ; ಉಱ್ಱಾರ್‌ಕಳೈ-(ಪ್ರಯೋಜನಾನ್ತರಪರರಾದ) ಬನ್ಧುಗಳನ್ನು, ಅೞಿಪ್ಪೇನುಮ್ - ನಾಶಪಡಿಸುವವನೂ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ, ಉಱ್ಱಾರ್‌ಕಳುಕ್ಕು-(ಅನನ್ಯ ಪ್ರಯೋಜನರಾದ) ಆಶ್ರಿತರಿಗೆ, ಉಱ್ಱೇನುಮ್ - ಸಕಲವಿಧ ಬನ್ಧುವೂ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ, ಉಱ್ಱಾರ್ ಇಲಿ - ಎಷ್ಟು ಮಹತ್ತ್ವವುಳ್ಳವರಾದಾಗ್ಯೂ ತನಗೆ ಸಮಾನರಾಗುವಂತೆ ಸಮಿಾಪಿಸುವವರಿಲ್ಲದ, ಮಾಯನ್ - ಆಶ್ಚರ್ಯಭೂತನಾದ ಭಗವನ್ತನು, ವನ್ದೇಱಕ್ಕೊಲೋ-ಬಂದು ಇವಳನ್ನು ಆವೇಶಿಸಿ ಇರುತ್ತಾನೋ! ಉಱ್ಱೀರ್‌ಕಳ್ಕು-ಬನ್ಧುಗಳಾದ ನಿಮಗೆ, ಎನ್ನುಡೈಪ್ಪೇದೈ-ನನ್ನ ಸುಕುಮಾರಿಯಾದ ಇವಳು, ಉಱ್ಱು-ಪರಿಶೀಲಿಸಿ, ಉರೈಕ್ಕಿನ್ಱ-ಹೇಳುವ ಮಾತುಗಳನ್ನು, ಯಾನ್-ನಾನು, ಎನ್ ಶೊಲ್ಲಿ ಶೊಲ್ಲುಕೇನ್-ಯಾನ ಮಾತುಗಳಿಂದ ವರ್ಣಿಸಲಿ?

( ಸ–ಗಾ–೮ ; )—

ನೈವಾತ್ರ ಬಾನ್ಧವಜನಾ ಮಮ ಸನ್ತಿ ಲೋಕೇ
ಸರ್ವೇಽತ್ರ ಬಾನ್ಧವಜನಾ ಮಮ ಸನ್ತಿ ಚೇತಿ |
ಸರ್ವಾನ್ ಕರೋಮಿ ಮಮ ಬನ್ಧುಜನಾನ್ ಕಿಲಾಹಂ
ಮಾಮಾಶ್ರಿತಾನಪಿ ಫಲೈಕರತಾಂಸ್ತ್ಯಜಾಮಿ ||
ಮಾಮೇವ ಸಂಶ್ರಿತವತಾಮಹಮಸ್ಮಿ ಬನ್ಧು-
ರಿತ್ಯೇವ ವಕ್ತಿ ತನಯಾ ಮಮ ಸಮ್ಪ್ರವಿಷ್ಟಾ |
ಮಾಯಾಮಯೇನ ಹರಿಣಾ ಕಿಲ ನಿಸ್ಸಮೇನ
ಕಿಂ ವೋ ವದಾಮಿ ವಚಸಾ ವಚನಂ ಕೃಶಾಂಗ್ಯಾಃ ? ||

ತಾ|| ಇಲ್ಲಿ ನನಗೆ ಬನ್ಧುಗಳು ಯಾರೂ ಇಲ್ಲವೆಂತಲೂ, ನನಗೆ ಇಲ್ಲಿ ಇರುವವರೆಲ್ಲಾ ಬನ್ಧುಗಳೆಂತಲೂ, ನಾನೇ ಸರ್ವಬನ್ಧುಗಳನ್ನೂ ಉಂಟುಮಾಡಿದವನೆಂತಲೂ, ಪ್ರಯೋಜನಾನ್ತರಪರರಾದ ಬನ್ಧುಗಳನ್ನು ನಾನೇ ನಾಶಪಡಿಸುತ್ತೇನೆಂತಲೂ, ನನ್ನನ್ನೇ ಆಶ್ರಯಿಸುವವರಿಗೆ ನಾನೇ ಸರ್ವವಿಧ ಬನ್ಧುವೆಂತಲೂ—ಈ ನನ್ನ ಮಗಳು ಹೇಳುತ್ತಾಳೆ. ಇವಳನ್ನು ಮಾಯಾಚೇಷ್ಟಿತನಾದ ಸರ್ವೇಶ್ವರನು ಆವೇಶಿಸಿದಂತೆ ಇದೆ ಈ ಕೃಶಾಂಗಿಯು ಹೇಳುವ ಮಾತುಗಳನ್ನು ನಿಮಗೆ ನಾನು ಏನೆಂದು ವರ್ಣಿಸಲಿ?

(೮) ಉರೈಕ್ಕಿನ್ಱ ಮುಕ್ಕಣ್‌ಪಿರಾನ್ ಯಾನೇ ಯೆನ್ನುಮ್,
ಉರೈಕ್ಕಿನ್ಱ ತಿಶೈಮುಕನ್ ಯಾನೇ ಯೆನ್ನುಮ್,
ಉರೈಕ್ಕಿನ್ಱ ವಮರರುಮ್ ಯಾನೇ ಯೆನ್ನುಮ್,
ಉರೈಕ್ಕಿನ್ಱ ವಮರರ್‌ಕೋನ್ ಯಾನೇ ಯೆನ್ನುಮ್,
ಉರೈಕ್ಕಿನ್ಱ ಮುನಿವರುಮ್ ಯಾನೇ ಯೆನ್ನುಮ್,
ಉರೈಕ್ಕಿನ್ಱ ಮುಕಿಲ್‌ವಣ್ಣನೇಱಕ್ಕೊಲೋ,
ಉರೈಕ್ಕಿನ್ಱ ವುಲಕತ್ತೀರ್‌ಕ್ಕೆನ್ ಶೊಲ್ಲುಕೇನ್,
ಉರೈಕ್ಕಿನ್ಱ ವೆನ್‌ಕೋಮಳ ವೊಣ್‌ಕೊಡಿಕ್ಕೇ.

ಪ್ರ|| ಉರೈಕ್ಕಿನ್ಱ – (ಭಗವತ್ಪ್ರಕಾರವೆಂದು) ವರ್ಣಿಸಲ್ಪಡುವ, ಮುಕ್ಕಣ್ ಪಿರಾನ್ – ತ್ರಿಣೇತ್ರನಾದ ಈಶ್ವರನೆಂಬ ರುದ್ರನು, ಯಾನೇ ಎನ್ನುಮ್–ನಾನೇ ಎನ್ನುತ್ತಾಳೆ; ಉರೈಕ್ಕಿನ್ಱ–(ಭಗವತ್ಪ್ರಕಾರವೆಂದು) ವರ್ಣಿಸಲ್ಪಡುವ, ತಿಶೈಮುಕನ್–ಚತುರ್ಮುಖನು, ಯಾನೇ ಎನ್ನುಮ್–ನಾನೇ ಎನ್ನುತ್ತಾಳೆ; ಉರೈಕ್ಕಿನ್ಱ–(ಹಾಗೆಯೇ) ವರ್ಣಿಸಲ್ಪಡುವ, ಅಮರರುಮ್–ದೇವತೆಗಳೂ, ಯಾನೇ ಎನ್ನುಮ್–ನಾನೇ ಎನ್ನುತ್ತಾಳೆ, ಉರೈಕ್ಕಿನ್ಱ–(ಹಾಗೆಯೇ) ವರ್ಣಿಸಲ್ಪಡುವ, ಅಮರರ್ ಕೋನ್–ದೇವೇನ್ದ್ರನೂ, ಯಾನೇ ಎನ್ನುಮ್–ನಾನೇ ಎನ್ನುತ್ತಾಳೆ; ಉರೈಕ್ಕಿನ್ಱ–(ಹಾಗೆಯೇ) ವರ್ಣಿಸಲ್ಪಡುವ, ಮುನಿವರುಮ್–ಋಷಿಗಳೂ, ಯಾನೇ ಎನ್ನುಮ್–ನಾನೇ ಎನ್ನುತ್ತಾಳೆ, ಉರೈಕ್ಕಿನ್ಱ–(ವೇದಾನ್ತಗಳಲ್ಲಿ) ಪ್ರತಿಪಾದ್ಯನಾದ, ಮುಕಿಲ್ ವಣ್ಣನ್–ನೀಲಮೇಘಶ್ಯಾಮನು, ಏಱಕ್ಕೊಲೋ–ಇವಳನ್ನು ಆವೇಶಿಸಿರಬಹುದೋ!; ಉರೈಕ್ಕಿನ್ಱ– ಪ್ರಶ್ನೆಮಾಡುತ್ತಿರುವ, ಉಲಕತ್ತೀರ್‌ಕ್ಕು – ಈ ಲೋಕದಲ್ಲಿರುವ ನಿಮಗೆ, ಉರೈಕ್ಕಿನ್ಱ–ಮನಸ್ಸು ಬಂದಂತೆ ಮಾತನಾಡುವ, ಎನ್ ಕೋಮಳಮ್–ನನ್ನ ಕೋಮಲೆಯಾದ, ಒಣ್ ಕೊಡಿಕ್ಕು – ರಮ್ಯವಾದ ಲತೆಯಂತೆ ಇರುವ ಈ ಕನ್ಯೆಗೆ (ಉಂಟಾದ ಪ್ರಕಾರಗಳನ್ನು), ಎನ್ ಶೊಲ್ಲುಕೇನ್–ಏನೆಂದು ವರ್ಣಿಸಲಿ ?

( ಸ-ಗಾ-ರ || )—

ಸೋಽಪಿ ತ್ರಿಣೇತ್ರ ಉದಿತಸ್ಸ್ವಯಮಸ್ಮಿ ಚೇಶ
ಸ್ಸೋಽಪಿ ಸ್ವಯಂ ಕಿಲ ಚತುರ್ಮುಖ ಏವ ಚಾಸ್ಮಿ |
ದೇವಾಶ್ಚ ತೇ ಸ್ವಯಮಹಂ ಜಗತಿ ಪ್ರಸಿದ್ಧಾ-
ದೇವೇಶ್ವರೋಽಪಿ ವಿದಿತಸ್ಸ್ವಯಮೇವ ಚಾಹಮ್ ||
ತೇಽಪಿ ಸ್ವಯಂ ಚ ಮುನಯಃ ಪ್ರಥಿತಾಃ ಕಿಲಾಹಂ
ತ್ವಿತ್ಯೇವ ವಕ್ತಿ ತನಯಾ ಮಮ ಸಮ್ಪ್ರವಿಷ್ಟಾ |
ನೀಲಾಮ್ಬುದಾಭವಪುಷಾ ಹರಿಣಾಽದ್ಯ ಕಿಂ ವಾ
ಯುಷ್ಮಾನ್ ವದಾನಿ ಚರಿತಂ ಮಮ ಕೋಮಲಾಂಗ್ಯಾಃ ? ||

ತಾ|| ತ್ರಿಣೇತ್ರನಾದ ಈಶ್ವರನು ನಾನೇ ಎಂದೂ, ಚತುರ್ಮುಖನಾದ ಬ್ರಹ್ಮನು ನಾನೇ ಎಂದೂ, ದೇವತೆಗಳೆಲ್ಲಾ ನಾನೇ ಎಂದೂ, ದೇವೇನ್ದ್ರನೂ ನಾನೇ ಎಂದೂ, ಋಷಿಗಳೆಲ್ಲಾ ನಾನೇ ಎಂದೂ—ಈ ನನ್ನ ಮಗಳು ಹೇಳುತ್ತಾಳೆ. ಇವಳನ್ನು ನೀಲಮೇಘವರ್ಣನಾದ ಸ್ವಾಮಿಯು ಆವೇಶಿಸಿ ಇರಬಹುದಷ್ಟೆ! ಈ ಲತಾಂಗಿಯ ವ್ಯಾಪಾರಗಳನ್ನು ಏನೆಂದು ನಿಮಗೆ ವರ್ಣಿಸಲಿ ?

(೯) ಕೊಡಿಯ ವಿನ್ನೈಯಾದುಮಿಲನೇ ಯೆನ್ನುಮ್,
ಕೊಡಿಯ ವಿನ್ನೈಯಾವೇನುಮ್ ಯಾನೇ ಯೆನ್ನುಮ್,
ಕೊಡಿಯ ವಿನ್ನೈಶೆಯ್‌ವೇನುಮ್ ಯಾನೇ ಯೆನ್ನುಮ್,
ಕೊಡಿಯ ವಿನ್ನೈತೀರ್‌ಪ್ಪೇನುಮ್ ಯಾನೇ ಯೆನ್ನುಮ್,
ಕೊಡಿಯಾನಿಲಙ್ಗೈ ಶೆಱ್ಱೇನೇ ಯೆನ್ನುಮ್,
ಕೊಡಿಯ ಪುಳ್ಳುಡೈಯೆವನೇಱಕ್ಕೊಲೋ
ಕೊಡಿಯ ವುಲಕತ್ತೀರ್‌ಕ್ಕಿವೈ ಯೆನ್ ಶೊಲ್ಲುಕೇನ್,
ಕೊಡಿಯೇನ್ ಕೊಡಿ ಯೆನ್ಮಕಳ್ ಕೋಲಙ್ಗಳೇ.

ಪ್ರ॥ ಕೊಡಿಯ-ತೀವ್ರವಾದ, ವಿನ್ಯೆ-ಪಾಪಕರ್ಮವು, ಯಾದುಮ್-ಯಾವುದೂ, ಇಲನೇ ಎನ್ನುಮ್-ನನಗೆ ಇಲ್ಲವೆಂದು ಹೇಳುತ್ತಾಳೆ, ಕೊಡಿಯವಿನ್ಯೆ-ತೀವ್ರವಾದ ಕರ್ಮವೂ, ಆವೇನುಮ್-ಆಗಿರುವವನು (ಸರ್ವ್ವಕರ್ಮರೂಪಿಯೂ), ಯಾನೇಎನ್ನುಮ್-ನಾನೇ ಎನ್ನುತ್ತಾಳೆ, ಕೊಡಿಯ ವಿನ್ಯೆ-ಕ್ರೂರವಾದ ಕರ್ಮಗಳನ್ನು, ಶೆಯ್ವೇನುಮ್-ಮಾಡಿಸುವವನೂ (ಮಾಡುವವನೂ), ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ, ಕೊಡಿಯವಿನ್ಯೆ-ಕ್ರೂರ ಕರ್ಮಗಳನ್ನೆಲ್ಲಾ, ತೀರ್ಪ್ಪೇನುಮ್-ನಾಶಪಡಿಸುವವನೂ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ; ಕೊಡಿಯಾಃ - ಕ್ರೂರಕೃತ್ಯವುಳ್ಳ ರಾವಣನ, ಇಲಙ್ಗ್ಯೆ-ಲಂಕೆಯನ್ನು, ಶೆಱ್ಱೇನೇ ಎನ್ನುಮ್-ನಾನೇ ನಾಶಪಡಿಸಿದೆನು ಎನ್ನುತ್ತಾಳೆ ಕೊಡಿಯ - ಶತ್ರುಧ್ವಂಸಕನಾದ, ಪುಳ್ - ಗರುಡನನ್ನು, ಉಡ್ಯೆಯರ್ವ - ವಾಹನವಾಗಿ ಉಳ್ಳ ಸ್ವಾಮಿಯು, ಏಱಕ್ಕೊಲೋ - ಇವಳನ್ನು ಆವೇಶಿಸಿ ಇರಬಹುದೋ! ಕೊಡಿಯ ಉಲಕತ್ತೀರ್ಕ್ಕು-ತೀವ್ರಸ್ವಭಾವವುಳ್ಳ ಈ ಲೋಕವಾಸಿಗಳಾದ ನಿಮಗೆ, ಕೊಡಿಯೇಃ-ಪಾಪಿಷ್ಠೆಯಾದ, ಎಃ-ನನ್ನ, ಕೊಡಿಮಕಳ್-ಲತೆಯಂತೆ ಇರುವ ಈ ಕನ್ಯೆಯ, ಕೋಲಙ್ಗಳ್-ಅದ್ಭುತಚೇಷ್ಟಿತಗಳಾದ, ಇವ್ಯೆ-ಇವುಗಳನ್ನು, ಎಃ ಶೊಲ್ಲುಕೇಃ-ಏನೆಂದು ವರ್ಣಿಸಲಿ?

( ಸ-ಗಾ- ರ ॥ )—

ಕರ್ಮಾದಿದೋಷರಹಿತಾ ಸ್ವಯಮಸ್ಮಿ ಚಾಹಂ
ಸರ್ವಾತ್ಮಕರ್ಮಸರಣಿಸ್ಸ್ವಯಮಸ್ಮಿ ಚಾಹಮ್ ।
ದುಷ್ಕರ್ಮರಾಶಿಜನನೀ ಸ್ವಯಮೇವ ಚಾಹಂ
ದುಷ್ಕರ್ಮಬನ್ಧತತಿಮೋಕ್ಷಕರೀ ಚ ಸಾಽಹಮ್ ॥
ದುಷ್ಟಾಶ್ರಿತಾಮಹಮನಾಶಯಮೇವ ಲಙ್ಕಾ-
ಮಿತ್ಯೇವ ವಕ್ತಿ ತನಯಾ ಮಮ ಸಮ್ಪ್ರವಿಷ್ಟಾ ।
ತಾರ್ಕ್ಷ್ಯಧ್ವಜೇನ ಹರಿಣಾ ಖಲು! ಕಿಂ ವದೇಯಂ
ವೇಷಾನಿಹಾದ್ಯ ಭುವಿ ವೋ ಬತ! ಮೇ ಲತಾಂಗ್ಯಾಃ? ॥

ತಾ॥ ನಾನು ಕರ್ಮದೋಷ ರಹಿತನೆಂದೂ, ನಾನೇ ಸರ್ವಕರ್ಮ ಸ್ವರೂಪನೆಂದೂ, ದುಷ್ಕರ್ಮರಾಶಿಯನ್ನುಂಟುಮಾಡಿದವನು ನಾನೇ ಎಂದೂ, ಸರ್ವ ಕರ್ಮನಾಶಕನೂ ನಾನೇ ಎಂದೂ, ಕ್ರೂರಕೃತ್ಯನಾದ ರಾವಣನ ಲಂಕಾಪುರಿಯನ್ನು ನಾಶಪಡಿಸಿದವನು ನಾನೇ ಎಂದೂ—ಈ ನನ್ನ ಮಗಳು ಹೇಳುತ್ತಾಳೆ. ಗರುಡವಾಹನನಾದ ಸ್ವಾಮಿಯು ಇವಳನ್ನು ಆವೇಶಿಸಿ ಇರಬಹುದಷ್ಟೆ! ಈ ಲೋಕವಾಸಿಗಳಾದ ನಿಮಗೆ ನಾನು ಈ ಲತಾಂಗಿಯ ಅದ್ಭುತವ್ಯಾಪಾರಗಳನ್ನು ಏನೆಂದು ವರ್ಣಿಸಲಿ?

(೧೦) ಕೋಲಙ್ಗೊಳ್ ಶುವರ್ಕ್ಕಮುಮ್ ಯಾನೇ ಯೆನ್ನುಮ್,
ಕೋಲಮಿನ್ನರಕಮುಮ್ ಯಾನೇ ಯೆನ್ನುಮ್,
ಕೋಲನ್ತಿಕಳ್ ಮೋಕ್ಕಮುಮ್ ಯಾನೇ ಯೆನ್ನುಮ್,
ಕೋಲಙ್ಗೊಳುಯಿರ್ಕಳುಮ್ ಯಾನೇ ಯೆನ್ನುಮ್,
ಕೋಲಙ್ಗೊಳ್ ತನಿಮುದಲ್ ಯಾನೇ ಯೆನ್ನುಮ್,
ಕೋಲಙ್ಗೊಳ್ ಮುಕಿಲ್ವಣ್ಣನೇಱಕ್ಕೊಲೋ,
ಕೋಲಙ್ಗೊಳುಲಕತ್ತೀರ್ಕ್ಕೆನ್ ಶೊಲ್ಲುಕೇನ್,
ಕೋಲನ್ತಿಕಳ್ ಕೋದೈ ಯೆನ್ಕೂನ್ದಲುಕ್ಕೇ.

ಪ್ರ॥ ಕೋಲಮ್ ಕೊಳ್-ಭೋಗ್ಯತೆಯುಳ್ಳ, ಶುವರ್ಕ್ಕಮುಮ್-ಸ್ವರ್ಗವೂ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ, ಕೋಲಮ್ ಇಲ್-ವೈಲಕ್ಷಣ್ಯವಿಲ್ಲದ, ನರಕಮುಮ್-ನರಕವೂ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ ; ಕೋಲಮ್ ತಿಕಳ್-ನಿರತಿಶಯಾನನ್ದರೂಪ ವೈಲಕ್ಷಣ್ಯದಿಂದ ಪ್ರಕಾಶಿಸುವ, ಮೋಕ್ಕಮುಮ್-ಮೋಕ್ಷವೂ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ; ಕೋಲಮ್ ಕೊಳ್-ಈ ಪುರುಷಾರ್ಥಗಳನ್ನು ಅಪೇಕ್ಷಿಸುವ, ಉಯಿರ್ಕಳುಮ್-ಪ್ರಾಣಿಗಳೂ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ, ಕೋಲಮ್ ಕೊಳ್-ಇವುಗಳನ್ನೆಲ್ಲಾ ತನ್ನ ಸಂಕಲ್ಪದಿಂದ ನಿರ್ವಹಿಸುವ, ತನಿಮುದಲ್-ಅದ್ವಿತೀಯವಾದ ಕಾರಣವಸ್ತುವೂ, ಯಾನೇ ಎನ್ನುಮ್-ನಾನೇ ಎನ್ನುತ್ತಾಳೆ, ಕೋಲಮ್ ಕೊಳ್-ದಿವ್ಯರೂಪಧರನಾದ, ಮುಕಿಲ್ವಣ್ಣನ್-ಮೇಘದ ವರ್ಣವುಳ್ಳ ಸ್ವಾಮಿಯು, ಏಱಕ್ಕೊಲೋ!-ಆವೇಶಿಸಿ ಇಱಬಹುದೋ!, ಕೋಲಮ್ ಕೊಳ್-ಅತ್ಯನ್ತ ಕುತೂಹಲವುಳ್ಳ, ಉಲಕತ್ತೀರ್ಕ್ಕು-ಈ ಲೋಕವಾಸಿಗಳಾದ ನಿಮಗೆ, ಕೋಲಮ್ ತಿಕಳ್-ಸೌನ್ದರ್ಯಭರಿತವಾದ, ಕೋದೈ-ಮಾಲೆಯುಳ್ಳ, ಎನ್ ಕೂನ್ದಲುಕ್ಕು-ಕೇಳಪಾಶವುಳ್ಳ ಈ ನನ್ನ ಮಗಳಿಗೆ, ಎನ್ ಶೊಲ್ಲುಕೇನ್-ಏನು ಉಂಟಾಗಿದೆಯೆಂದು ಹೇಳಲಿ?

( ಸ-ಗಾ-ರ || )—

ಭೋಗ್ಯಂ ಸ್ವಯಂ ದಿವಿಷದಾಂ ಪದಮಪ್ಯಹಂ ಹಿ
ಕ್ಲೇಶಾಸ್ಪದಂ ಚ ನರಕಂ ತ್ವಹಮೇವ ಚಾಸ್ಮಿ ।
ಮೋಕ್ಷೋಽಪ್ಯನನ್ತಸುಖದಃ ಪರಮೋಽಹಮೇವ
ಸ್ವಾಂಶ್ಚೈರಹಂ ಹಿ ಸಕಲಾ ಅಪಿ ಜೀವವರ್ಗಾಃ ||
ಸರ್ವಸ್ಯ ಮೂಲಮಪಿ ಚಾಸ್ಮ್ಯಹಮೇವ ಚಾದ್ಯಂ
ತ್ವಿತ್ಯೇವ ವಕ್ತಿ ತನಯಾ ಮಮ ಸಮ್ಪ್ರವಿಷ್ಟಾ ।
ದಿವ್ಯಾಮ್ಬುದಾಭವಪುಷಾ ಹರಿಣಾ ಕಿಲಾಹಂ
ಕಿಂ ವೋಽದ್ಯ ವಚ್ಮಿ ತನಯಾಂ ಪ್ರತಿ ಮೇ ಸುಕೇಶೀಮ್? ||

ತಾ|| ಭೋಗಸ್ಥಾನವಾದ ಸ್ವರ್ಗವೂ, ಕ್ಲೇಶಾಸ್ಪದವಾದ ನರಕವೂ, ಅನನ್ತ ಸುಖಾಸ್ಪದವಾದ ಮೋಕ್ಷವೂ ನಾನೇ ಎಂದೂ, ಸಕಲ ಜೀವವರ್ಗಗಳೂ ನಾನೇ ಎಂದೂ, ಎಲ್ಲಕ್ಕೂ ಮೂಲಕಾರಣವು ನಾನೇ ಎಂದೂ—ಈ ನನ್ನ ಮಗಳು ಹೇಳುತ್ತಾಳೆ. ನೀಲಮೇಘಶ್ಯಾಮನಾದ ಸ್ವಾಮಿಯು ಇವಳನ್ನು ಆವೇಶಿಸಿದಂತೆ ತೋರುತ್ತದೆ. ಈ ಸುಕೇಶಿಯ ವಿಷಯದಲ್ಲಿ ನಾನು ನಿಮಗೆ ಏನು ಹೇಳಬಲ್ಲೆನು?

(೧೧) ಕೊನ್ದಲ್ ಮಲರ್ ಮೆಞ್ಞಿಕ್ಕುಮ್ ಮಣ್ಣಾಡನ್ದೈಕ್ಕುಮ್,
ಕುಲವಾಯರ್ ಕೊೞುನ್ದುಕ್ಕುಮ್ ಕೇೞ್ವನ್ ತನ್ನೈ,
ವಾಯ್ನ್ದ ವೞುದಿವಳನಾಡನ್ ಮನ್ನುಕುರುಕೂರ್
ಚ್ಚಡಕೋಪನ್ ಕುತ್ತೇವಲ್ ಶೆಯ್ದು,
ಆಯ್ನ್ದ ತಮಿೞ್ಮಾಲೈ ಯಾಯಿರತ್ತು
ಳಿವೈಯುಮೊರುಪತ್ತುಮ್ ವಲ್ಲಾರ್, ಉಲಕಿಲ್
ಏಯ್ನ್ದ ಪೆರುಮಾ ಶೆಲ್ವತ್ತರಾಯ್,
ತಿರುಮಾಲಡಿಯಾರ್ಕಳೈ ಪ್ಪೂಶಿಕ್ಕ ನೋಱ್ಱಾರ್ಕಳೇ.

ಪ್ರ|| ಕೂನ್ದಲ್-ದಿವ್ಯ ಕೇಶಗಳುಳ್ಳ, ಮಲರ್ಮಙ್ಗೈಕ್ಕುಮ್-ಪದ್ಮೋದ್ಭವೆಯಾದ ಲಕ್ಷ್ಮೀದೇವಿಗೂ, ಮಣ್ಮಡನ್ದೈಕ್ಕುಮ್-ಭೂದೇವಿಗೂ, ಕುಲಆಯರ್ - ಸತ್ಕುಲಪ್ರಸೂತರಾದ ಗೋಪಾಲಕರಿಗೆ, ಕೊಟ್ಪನ್ದುಕ್ಕುಮ್ - ತಿಲಕಪ್ರಾಯೆಯಾದ ನೀಳಾದೇವಿಗೂ, ಕೇಳ್ವನ್ ತನ್ನೈ - ಪ್ರಿಯವಲ್ಲಭನಾದ ಸರ್ವೇಶ್ವರನನ್ನು ಕುರಿತು, ವಾಯ್ನ್ದ-ಅತ್ಯನ್ತ ಭಾವನಾತಿಶಯವುಳ್ಳ, ವೞುದಿವಳನಾಡನ್-ವೞುದಿನಾಡಿಗೆ ಅಧಿಪತಿಯಾದ, ಮನ್ನುಕುರ ಕೂರ್-ಸುಸ್ಥಿರವಾದ ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್-ನಮ್ಮಾೞ್ವಾರ್ರು, ಕುಱ್ಱೇವಲ್-ಅನ್ತರಂಗವೃತ್ತಿಯಾಗಿ, ಶೆಯ್ದ-ರಚಿಸಿರುವ, ಆಯ್ನ್ದ-ಪರಿಶೀಲಿಸಿ ಆರಿಸಿಹೇಳಿದ, ತಮಿೞ್ಮಾಲೈ-ದ್ರಾವಿಡ ಪ್ರಬನ್ಧಮಾಲೆಯಾದ, ಆಯಿರತ್ತುಳ್ - ಸಹಸ್ರಪದ್ಯಾವಳಿಯಲ್ಲಿ, ಇವ್ವೈಯುಮ್ ಒರುಪತ್ತುಮ್ ವಲ್ಲಾರ್-ಈ ಒಂದು ದಶಕವನ್ನು ಬಲ್ಲವರು, ಉಲಕಿಲ್-ಲೋಕದಲ್ಲಿ, ಏಯ್ನ್ದಪೆರುಮ್ ಶೆಲ್ವತ್ತರಾಯ್-ಶ್ಲಾಘ್ಯವಾದ ಮಹಾಸಮ್ಪತ್ತುಳ್ಳವರಾಗಿ (ಶ್ರೀ ವೈಷ್ಣವ ಶ್ರೀ ವಿಶಿಷ್ಟರಾಗಿ), ತಿರುಮಾಲ್ ಅಡಿಯಾರ್ಕಳೈ-ಶ್ರಿಯಃಪತಿಯ ಭಕ್ತರನ್ನು, ಪೂಶಿಕ್ಕ-ಆರಾಧಿಸಲು, ನೋಱ್ಱಾರ್ಕಳೇ-ಭಾಗ್ಯವುಳ್ಳವರು.

( ಸ-ಗಾ-ರ || )—

ಲಕ್ಷ್ಮ್ಯಾಃ ಪ್ರಿಯಂ ಚ ಪತಿಮಚ್ಯುತಮತ್ರ ಭೂಮ್ಯಾಃ
ನೀಳಾಪ್ರಿಯಂ ಚ ಹರಿಮೇವ ಹೃದಿ ಪ್ರಪದ್ಯ |
ಸ್ತೋತುಂ ಶಠಾರಿರತನೋತ್ಕುರುಕಾಪುರೇಶೋ
ದಿವ್ಯಾಂ ಸಹಸ್ರಶುಭಪದ್ಯತತಿಂ ಹಿ ಹೃದ್ಯಾಮ್ ||
ತತ್ರಾನ್ತರಙ್ಗಹರಿಕಿಂಕರವೃತ್ತಿಬೋಧಿ
ಶ್ರೇಯಃ ಪಠನ್ತಿ ಭುವಿ ಯೇ ದಶಕಂ ತ್ವಿದಂ ತೇ |
ಲೋಕೇಽತ್ರ ಭಾಗ್ಯಮಪಿ ಭೋಗ್ಯತಮಂ ಪ್ರಪನ್ನಾ -
ಶ್ಶ್ರೀಶಸ್ಯ ಭಕ್ತನಿವಹಾನಪಿ ಪೂಜಯನ್ತಿ ||

ತಾ|| ಶ್ರೀದೇವಿಗೂ ಭೂದೇವಿಗೂ ನೀಳಾದೇವಿಗೂ ಪ್ರಿಯವಲ್ಲಭನಾದ ಭಗವನ್ತನನ್ನು ಕುರಿತು, ತಿರುವೞುದಿವಳನಾಡಿನಲ್ಲಿ ಶ್ರೀ ಕುರುಕಾಪುರಿಗೆ ನಿರ್ವಾಹಕರಾದ ಶ್ರೀ ಶಠಾರಿಮುನಿವರ್ಯರು ಅನ್ತರಂಗ (ವಾಚಿಕ) ಕೈಂಕರ್ಯರೂಪವಾಗಿ ರಚಿಸಿ ಇರುವ ದ್ರಾವಿಡ ದಿವ್ಯಪ್ರಬನ್ಧಮಾಲೆಯಾದ ಸಹಸ್ರಪದ್ಯಾವಳಿಯೊಳು, ಈ ದಶಕವನ್ನು ಬಲ್ಲವರು ಈ ಲೋಕದಲ್ಲಿ ಸರ್ವೈಶ್ವರ್ಯ ಸಮ್ಪನ್ನರಾಗಿ, ಶ್ರಿಯಃಪತಿಯ ಭಕ್ತರನ್ನು ಆರಾಧಿಸುವ ಮಹಾಭಾಗ್ಯವುಳ್ಳವರಾಗುವರು.

( ದ್ರ–ಉ–ಸಂ )—

ಶ್ಲೋಕಂ ಚ ತಂ ಪರಿಜಹೌ ಸ್ಫುರಿತಾಖಿಲಾನಾಂ
ಸರ್ಗಾದಿಕರ್ತುರನುಕಾರರಸೇನ ಶೌರೇಃ |
ತಸ್ಯ ಪ್ರವೃತ್ತಿರಖಿಲಾ ಚರಿತಾ ಮಯೇತಿ
ತದ್ಭಾವಭಾವಿತಮನಾ ಮುನಿರಾಹ ಷಷ್ಠೇ ||

( ದ್ರ–ಉ-ತಾ–ರ)—

ಸೃಷ್ಟ್ಯಾದ್ಯೈರ್ಜಗತ್ಯಾಸ್ಸಕಲವಿಧಕಲಾವರ್ತಕತ್ವೇನ ಭೂತಾ-
ನ್ತರ್ಯಾಮಿತ್ವೇನ ಕೃತ್ಯುದ್ಧರಣಪರತಯಾ ಭೂಭಗಾಪಾಕೃತೇಶ್ಚ |
ಶೈಲೇನ್ದ್ರೋದ್ಧಾರಣಾದ್ಯೈಃ ಸ್ವಜನಹಿತತಯಾ ಬ್ರಹ್ಮರುದ್ರೇನ್ದ್ರಭಾವಾ-
ದ್ದುಷ್ಕರ್ಮೋನ್ಮೂಲನಾದ್ಯೈಃ ಪ್ರಭುರನಿಶಮುಹನ್ಮುಗ್ಧಬೋಧ್ಯೋ
ಽನ್ವಭಾವಿ ||

( ಈ ಷಷ್ಠದಶಕದ ಸಾರಾಂಶ ) —

ಈ ಆರನೆಯದಶಕದಲ್ಲಿ— ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ಸರ್ವೇಶ್ವರನಿಂದ ಅವಿಷ್ಟೆಯಾದ ಆ ನಾಯಕಿಯು ತಾನೇ ಸರ್ವೇಶ್ವರನ ಕಾರ್ಯಗಳನ್ನೆಲ್ಲಾ ಮಾಡಿರುದಾಗಿ ಭಾವಿಸಿ, ಜಗತ್ಸೃಷ್ಟಿ–ಸ್ಥಿತಿ–ಲಯಾದಿಗಳನ್ನೂ ಅವತಾರಗಳಲ್ಲಿ ಅವನು ಮಾಡಿದ ಅತಿಮಾನುಷ ಕೃತ್ಯಗಳನ್ನೂ ತಾನೇ ಮಾಡಿದು ದಾಗಿ ಹೇಳುತ್ತಾಳೆಂದು ಇವಳ ತಾಯಿಯು ಲೋಕದ ಜನರಿಗೆ ಹೇಳುವಂತೆ ವರ್ಣಿಸಿ ಇರುತ್ತಾರೆ.

ಶ್ರೀಃ

# ಪಞ್ಚಮಶತಕದಲ್ಲಿ—ಸಪ್ತಮದಶಕ.

(ನೋಱ್ಱ ನೋನ್ಬಿಲೇನ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಶ್ರೀವರಮಙ್ಗಲನಗರವೆಂದು ಪ್ರಸಿದ್ಧವಾದ ತೋತಾದ್ರಿ—ವಾನಮಾಮಲೈ ಎಂಬ ದಿವ್ಯಕ್ಷೇತ್ರದ ಸ್ವಾಮಿಯ ವಿಷಯದಲ್ಲಿ ತಮ್ಮ ಭಕ್ತಿಪಾರವಶ್ಯವನ್ನು ಪ್ರಕಾಶಪಡಿಸುತ್ತಾರೆ)

---

(೧) ನೋಱ್ಱನೋನ್ಬಿಲೇನ್ ನುಣ್ಣಱಿವಿಲೇನಾಕಿಲುಂ-
ಮಿನಿಯುನ್ನೈವಿಟ್ಟು ಒನ್ಱುಮ್
ಆಱ್ಱಕಿಱ್ಕಿನ್ಱಿಲೇನರವಿನಣೈಯಮ್ಮಾನೇ,
ಶೇಱ್ಱುತ್ತಾಮರೈ ಶೆನ್ನೆಲೂಡು ಮಲರ್
ಶಿರೀವರಮಙ್ಗಲನಕರ್
ವೀಱ್ಱಿರುನ್ದವೆನ್ದಾಯುನಕ್ಕುಮಿಕೈಯಲ್ಲೇನಙ್ಗೇ.

ಪ್ರ॥ ನೋಱ್ಱ - ಅನುಷ್ಠಿತವಾದ (ಆಚರಿಸಲ್ಪಟ್ಟ), ನೋನ್ಬು - ಕರ್ಮಯೋಗವು (ವ್ರತವು), ಇಲೇನ್-ಉಳ್ಳವನಾಗಿ (ನಾನು) ಇಲ್ಲ. ನುಣ್-ಸೂಕ್ಷ್ಮವಾದ, ಅಱಿವು - ಜ್ಞಾನಯೋಗವೂ, ಇಲೇನ್-ಉಳ್ಳವನಾಗಿಲ್ಲ. ಆಕಿಲುಮ್-ಆದಾಗ್ಯೂ, ಇನಿ - ಇನ್ನುಮೇಲೆ (ನಿನ್ನ ಗುಣಾನುಭವವು ಉಂಟಾದಮೇಲೆ), ಉನ್ನೈ-ನಿನ್ನನ್ನು, ವಿಟ್ಟು-ಬಿಟ್ಟು, ಒನ್ಱುಮ್-ಒಂದುಕ್ಷಣವೂ, ಆಱ್ಱಕಿಱ್ಕಿನ್ಱಿಲೇನ್ - ಇರಲು ಸಹಿಸಲಾರೆನು ಅರವು ಅಣೈ - ಶೇಷಶಾಯಿಯಾದ, ಅಮ್ಮಾನೇ - ಸ್ವಾಮಿಯೇ !, ಶೇಱ್ಱುತ್ತಾಮರೈ - ಪಂಕದಲ್ಲಿ ಉತ್ಪನ್ನವಾದ ತಾವರೆಯು, ಶೆನ್ನೆಲೂಡು - ಕೆಂಪುಬತ್ತದ ಪೈರಿನೊಡನೆ, ಮಲರ್- ವಿಕಸಿತವಾಗಿ ರಮ್ಯವಾದ, ಶಿರೀವರಮಙ್ಗಲನಕರ್ - ಶ್ರೀವರಮಂಗಲನಗರದಲ್ಲಿ, ವೀಱ್ಱು ಇರುನ್ದ-ಬಿಜಯಮಾಡಿ ಇರುವ, ಎನ್ದಾಯ್-ನನ್ನ ಸ್ವಾಮಿಯೇ !, ಅಙ್ಗು-ಅಲ್ಲಿ, ಉನಕ್ಕು-ನಿನಗೆ, ಮಿಕೈ-(ರಕ್ಷಿಸಲು ಅಶಕ್ಯನಾಗಿ) ಬಹಿರ್ಭೂತನಾದವನಾಗಿ, ಅಲ್ಲೇನ್-ನಾನು ಇಲ್ಲ.

( ಪ-ಗಾ-ರ || )—

ನಾಹಂ ಕರ್ಮವಿದಾಂ ವರೋ ನ ಚ ಹರೇ ! ಶ್ರೀಜ್ಞಾನಯೋಗಾನ್ವಿತೋ
ವಿಷ್ಣೋ! ತ್ವದ್ವಿರಹಂ ತಥಾಽಪಿ ನ ಸಹೇ ಜಾತು ಸ್ವಯಂ ಶ್ರೀಪತೇ!!
ಸ್ವಾಮಿನ್ ! ಶೇಷಶಯ ! ಪ್ರಕಾಶಿತತನೋ ! ಶ್ರೀಪಙ್ಕಜಪ್ರೀಹಿಭಿ-
ರ್ದೀಪ್ತೇ ಶ್ರೀವರಮಙ್ಗಲಾಹ್ವಯಪುರೇ ! ನೈವಾಸ್ಮಿ ತೇಽಹಂ ಬಹಿಃ ||

ತಾ|| ನಾನು ಕರ್ಮಯೋಗವನ್ನೂ ಆಚರಿಸಲಿಲ್ಲ, ಜ್ಞಾನಯೋಗವನ್ನೂ ಆಶ್ರಯಿಸಲಿಲ್ಲ; ಆದಾಗ್ಯೂ ನಿನ್ನನ್ನು ಬಿಟ್ಟು ಒಂದು ಕ್ಷಣವೂ ಇರಲಾರೆನು. ಶೇಷಶಾಯಿಯಾದ ಸ್ವಾಮಿಯೇ ! ಪಂಕಜಪ್ರೀಹ್ಯಾದಿ ಸಸ್ಯಭರಿತವಾದ ಶ್ರೀ ವರ ಮಂಗಲನಗರದಲ್ಲಿ ಬಿಜಯಮಾಡಿರುವ ನನ್ನ ಸ್ವಾಮಿಯೇ ! ಅಲ್ಲಿ ನಾನು ನಿನ್ನ ರಕ್ಷ್ಯಕೂಟದಲ್ಲಿ ಸೇರಿದವನೇ ಹೊರತು ಬಹಿರ್ಭೂತನಲ್ಲ.

(೨) ಅಙ್ಗುಱ್ಱೇನಲ್ಲೇನಿಙ್ಗುಱ್ಱೇನಲ್ಲೇನುನ್ನೈಕ್ಕಾಣುಮವಾವಿಲ್
ವೀೞ್ನ್ದು, ನಾನ್

ಎಙ್ಗುಱ್ಱೇನುಮಲ್ಲೇನಿಲಙ್ಗೈ ಶೆಱ್ಱ ವಮ್ಮಾನೇ,
ತಿಙ್ಗಳ್ ಶೇರ್ ಮಣಿಮಾಡನೀಡು ಶಿರೀವರಮಙ್ಗಲನಕರುತ್ತೈ,
ಶಙ್ಗುಶಕ್ಕರತ್ತಾಯ್ ತಮಿಯೇನುಕ್ಕರುಳಾಯೇ.

ಪ್ರ|| ಅಙ್ಗುಱ್ಱೇನ್ ಅಲ್ಲೇನ್ – ನೀನು ಇರುವ ಪ್ರಾಪ್ಯಸ್ಥಲವನ್ನು ನಾನು ಸೇರಿದವನಲ್ಲ; ಇಙ್ಗುಱ್ಱೇನ್ ಅಲ್ಲೇನ್- ಈ ನನ್ನ (ಇದ್ದ) ಜಾಗದಲ್ಲಿ ಇರುವವನೂ ಅಲ್ಲ ಉನ್ನೈ-ನಿನ್ನನ್ನು, ಕಾಣುಮ್-ನೋಡಬೇಕೆಂಬ, ಅವಾವಿಲ್-ಆಶೆಯಲ್ಲಿ, ವೀೞ್ನ್ದು – ಮಗ್ನನಾಗಿ, ನಾನ್-ನಾನು, ಎಙ್ಗುಱ್ಱೇನುಮ್ ಅಲ್ಲೇನ್ ಎಲ್ಲಿ ಇರುವವನಾಗಿಯೂ ಇಲ್ಲ. ಇಲಙ್ಗೈ ಶೆಱ್ಱ-ಲಂಕೆಯನ್ನು ನಾಶಮಾಡಿದ, ಅಮ್ಮಾನೇ-ಸ್ವಾಮಿಯೇ, ತಿಙ್ಗಳ್ ಶೇರ್ – ಚಂದ್ರನೊಡನೆ ಸೇರುವ, ಮಣಿಮಾಡ ನೀಡು-ರತ್ನಖಚಿತವಾದ ಉಪ್ಪರಿಗೆಗಳಿಂದ ಭರಿತವಾದ, ಶಿರೀವರಮಙ್ಗಲನಕರ್ – ಶ್ರೀ ವರಮಙ್ಗಲನಗರದಲ್ಲಿ, ಉತ್ತೈ-ನಿತ್ಯವಾಸಮಾಡುವ, ಶಙ್ಗುಶಕ್ಕರತ್ತಾಯ್-ಶಂಖ ಚಕ್ರಧಾರಿಯೇ !, ತಮಿಯೇನುಕ್ಕು-ಅನನ್ಯಶರಣನಾದ ನನಗೆ, ಅರುಳಾಯ್-ಕೃಪೆಮಾಡು.

( ಸ-ಗಾ-ರ || )—
ನಾಹಂ ತತ್ರ ಭವಾಮಿ! ನಾತ್ರ ಚ ಭವಾಮ್ಯಾಶಾವಶೋಽಹಂ ತವ
ಪ್ರಾಪ್ತ್ಯೈ ನೈವ ಭವಾಮಿ ಕುತ್ರಚಿದಪಿ ಶ್ರೀಮನ್! ಹರೇ! ಮೇ ಪ್ರಭೋ!|
ಲಙ್ಕಾಧ್ವಂಸಕ! ಚನ್ದ್ರಸಙ್ಗಿಮಣಿಸೌಧಾವಳ್ಯುಪೇತೇ ವರೇ !
ದಿವ್ಯೇ ಶ್ರೀವರಮಙ್ಗಲಾಹ್ವಯಪುರೇ ಚಕ್ರಿನ್! ಪ್ರಸನ್ನೋ ಭವ ||

ತಾ|| ಅಲ್ಲಿ ನಿನ್ನ ಸ್ಥಾನವಾದ ಪ್ರಾಪ್ಯಭೂಮಿಯನ್ನೂ ನಾನು ಸೇರಿದವನಲ್ಲ; ಇಲ್ಲಿ ನನ್ನ ಸ್ಥಾನವಾದ ಈ ಪ್ರದೇಶದಲ್ಲಿ ಇರುವವನೂ ಅಲ್ಲ. ನಿನ್ನನ್ನು ಕಾಣ ಬೇಕೆಂಬ ಆಶಾಸಮುದ್ರದಲ್ಲಿ ಮಗ್ನನಾಗಿ, ನಾನು ಎಲ್ಲಿ ಇರುವವನಾಗಿಯೂ ಇಲ್ಲ. ಲಂಕಾಧ್ವಂಸಕನಾದ ಸ್ವಾಮಿಯೇ! ಚಂದ್ರಸಂಗಿ ಮಣಿ ಸೌಧೋಪೇತವಾದ ಶ್ರೀ ವರಮಙ್ಗಲನಗರದಲ್ಲಿ ನಿತ್ಯವಾಸಮಾಡುವ ಶಂಖಚಕ್ರಧರನಾದ ಸ್ವಾಮಿಯೇ! ಅನನ್ಯಶರಣನಾದ ನನ್ನ ವಿಷಯದಲ್ಲಿ ನೀನು ಕೃಪೆಮಾಡು.

(೩) ಕರುಳಪ್ಪುಳ್ಕೊಡಿ ಶಕ್ಕರಪ್ಪಡೈ ವಾನನಾಡ
ಎನ್ಕಾರ್‌ಮುಕಿಲ್‌ವಣ್ಣಾ,
ಪೊರುಳಲ್ಲಾದ ವೆನ್ನೈ ಪ್ಪೊರುಳಾಕ್ಕಿ ಯಡಿಮೈ ಕೊಣ್ಡಾಯ್,
ತೆರುಳ್‌ಕೊಳ್ ನಾನ್ಮರೈವಲ್ಲವರ್ ಪಲರ್‌ವಾೞ್
ಶಿರೀವರಮಙ್ಗಲನಕರ್‌ಕ್ಕು,
ಅರುಳ್‌ಶೆಯ್ದಙ್ಗಿರುನ್ದಾಯಱಿಯೇನೊರು ಕೈಮ್ಮಾಱೇ.

ಪ್ರ|| ಕರುಳ-ಗರುಡನೆಂಬ, ಪುಳ್-ಪಕ್ಷಿಯನ್ನು, ಕೊಡಿ-ಧ್ವಜವಾಗಿ ಉಳ್ಳ, ಶಕ್ಕರಪ್ಪಡೈ-ಚಕ್ರಾಯುಧಧಾರಿಯಾದ, ವಾನನಾಡ-ಪರಮಪದಸ್ಥಾನನಿರ್ವಾಹಕನಾದ, ಎನ್ ಕಾರ್‌ಮುಕಿಲ್‌ವಣ್ಣಾ-ನನ್ನ ನೀಲಮೇಘವರ್ಣನೇ!, ಪೊರುಳಲ್ಲಾದ-ಅಸತ್ಪ್ರಾಯನಾದ, ಎನ್ನೈ-ನನ್ನನ್ನು, ಪೊರುಳ್ ಆಕ್ಕಿ – ಒಂದು ವಸ್ತುವೆನ್ನುವಂತೆ ಮಾಡಿ (ಗಣ್ಯವಾಗಿ ಮಾಡಿ), ಅಡಿಮೈಕೊಣ್ಡಾಯ್ – ನನ್ನ (ವಾಚಿಕ) ಕೈಂಕರ್ಯವನ್ನೂ ಅಂಗೀಕರಿಸಿರುತ್ತೀಯೆ. ತೆರುಳ್‌ಕೊಳ್-ಜ್ಞಾನಾತಿಶಯವುಳ್ಳ, ನಾನ್ಮರೈ-ನಾಲ್ಕುವೇದಗಳನ್ನೂ, ವಲ್ಲವರ್ – ಬಲ್ಲವರು, ಪಲರ್ – ಅನೇಕರು, ವಾೞ್-ಬಾಳುವ, ಶಿರೀವರಮಙ್ಗಲನಕರ್‌ಕ್ಕು-ಶ್ರೀವರಮಙ್ಗಲನಗರಕ್ಕೆ, ಅರುಳ್ ಶೆಯ್ದು-ಕೃಪೆಮಾಡಿ, ಅಙ್ಗು ಇರುನ್ದಾಯ್ – ಅಲ್ಲಿ ವಾಸಮಾಡಿ ಇರುವವನೇ!, ಒರು ಕೈಮ್ಮಾಱು-ಒಂದು ಸಾಧನವನ್ನೂ (ಕೃತಜ್ಞತಾಸೂಚಕವಾದ ಪ್ರತ್ಯುಪಕಾರವನ್ನೂ), ಅಱಿಯೇನ್-ನಾನು ತಿಳಿದವನಲ್ಲ.

( ಸ-ಗಾ-ರ || )—

ಹೇ ತಾರ್ಕ್ಷ್ಯಧ್ವಜ ! ಚಕ್ರಭೃಚ್ಛ ! ಪರಮವ್ಯೋಮೇಶ್ವರ ! ಶ್ರೀಧರ
ಸ್ತ್ವಂ ನೀಲಾಮ್ಬುದಸನ್ನಿಭೋಽಸಿ! ಕೃತವಾನ್ ಸನ್ತಂ ಹ್ಯಸನ್ತಂ ತು
ಮಾಮ್
ಕೈಙ್ಕರ್ಯಂ ಪರಿಗೃಹ್ಯ ಮೇ ವಿಜಯಸೇ ದಿವ್ಯೇ ಚತುರ್ವೇದವಿ-
ದ್ವಾಸೇ ಶ್ರೀವರಮಙ್ಗಲಾಹ್ವಯಪುರೇ ! ನಾಹಂ ಕೃತಜ್ಞಾಸ್ತ್ವಯಿ ||

ತಾ|| ಎಲೈ ಗರುಡಧ್ವಜನಾದ ಸ್ವಾಮಿಯೇ ! ಚಕ್ರಪಾಣಿಯೇ ! ಪರಮಪದ ನಾಥನೇ ! ನೀಲಮೇಘವರ್ಣನೇ ! ಅಸತ್ಪ್ರಾಯನಾದ ನನ್ನನ್ನೂ ಕೂಡ ಒಂದು (ಗಣ್ಯವಾದ) ವಸ್ತುವೆನ್ನುವಂತೆ ಮಾಡಿ ನನ್ನ (ವಾಚಿಕ) ಕೈಂಕರ್ಯವನ್ನು ಅಂಗೀಕರಿಸಿ ಇರುತ್ತೀಯೆ. ಜ್ಞಾನಾತಿಶಯವುಳ್ಳ ಚತುರ್ವೇದ ವಿದ್ವರ್ಯರು ಅನೇಕರು ಬಾಳುವ ಶ್ರೀ ವರಮಙ್ಗಲನಗರದಲ್ಲಿ ಕೃಪೆಯಿಂದ ವಾಸಮಾಡಿ ಇರುವ ಸ್ವಾಮಿಯೇ ! ನಾನು (ಅಕಿಂಚನನಾದುದರಿಂದ) ಒಂದು ಸಾಧನವನ್ನೂ ಪಡೆದವನಲ್ಲ. ಯಾವ ಪ್ರತ್ಯುಪಕಾರವನ್ನೂ ತಿಳಿದವನಲ್ಲ. (ನೀನೇ ನನ್ನನ್ನು ರಕ್ಷಿಸಬೇಕೆಂದು ಭಾವವು)

(೪) ಮಾಱುಶೇರ್ ಪಡೈ ನೂಱ್ಱುವರ್ ಮಙ್ಗ
ವೋರೈವರ್ ಕ್ಕಾಯನ್ಱು ಮಾಯಪ್ಪೋರ್ ಪಣ್ಣಿ,
ನೀಱುಶೆಯ್ದ ವೆನ್ನಾದಿಯಾ ನಿಲಙ್ಗೀಣ್ಡವವಮ್ಮಾನೇ,
ತೇಱುಞಾನತ್ತರ್ ವೇದವೇಳ್ವಿಯಱಾ ಚ್ಚಿರೀವರಮಙ್ಗಲನಕರ್,
ಏಱಿ ವೀಱ್ಱಿರುನ್ದಾಯುನ್ನೈ ಯೆಙ್ಗೆಯ್ದ ಕ್ಕೂವುವನೇ.

ಪ್ರ|| ಮಾಱುಶೇರ್-ಶತ್ರುಗಳಾಗಿ ಸಂಘೀಭೂತರಾದ, ಪಡೈ-ಸೈನ್ಯವುಳ್ಳ, ನೂಱ್ಱುವರ್ - ನೂರುಮಂದಿ ಕೌರವರು, ಮಙ್ಗ-ನಾಶಹೊಂದುವಂತೆ, ಓರ್-ಅದ್ವಿತೀಯಮಹಿಮೆಯುಳ್ಳ, ಐವರ್ಕ್ಕು ಆಯ್ - ಐದುಮಂದಿ ಪಾಣ್ಡವರಿಗೆ ಸಹಾಯಭೂತನಾಗಿ, ಅನ್ಱು-ಆಗ (ಯುದ್ಧಕಾಲದಲ್ಲಿ), ಮಾಯಪ್ಪೋರ್ ಪಣ್ಣಿ-ಆಶ್ಚರ್ಯಕರವಾದ ಯುದ್ಧವನ್ನು ನಡೆಸಿ, ನೀಱುಶೆಯ್ದ - (ಸಮಸ್ತ ಸೇನೆಯನ್ನೂ) ಧೂಳಿಯಾಗಿ ಮಾಡಿದ, ಎನ್ನಾದಿಯ್-ನನ್ನ ಮಹೋಪಕಾರಕನಾದ ಸ್ವಾಮಿಯೇ !, ನಿಲಮ್ ಕೀಣ್ಡ-(ಪ್ರಳಯದಲ್ಲಿ ಹೊತು ಇದ್ದ) ಭೂಮಿಯನ್ನು ಕಿತ್ತು ಎತ್ತಿದ, ಅಮ್ಮಾನೇ-ಸ್ವಾಮಿಯೇ !, ತೇಱುಞಾನತ್ತರ್ - ನಿರ್ಮಲಜ್ಞಾನವುಳ್ಳವರ, ವೇದ

ವೇಳ್ವಿ–ವೈದಿಕ ಕರ್ಮಗಳು, ಅಱಾ–ಅವಿಚ್ಛಿನ್ನವಾಗಿ ನಡೆಯುವ, ಶಿರೀವರಮಙ್ಗಲನ ಕರ್-ಶ್ರೀವರಮಙ್ಗಲನಗರದಲ್ಲಿ, ಏಱಿ–(ದಿವ್ಯ ಸಿಂಹಾಸನವನ್ನು) ಹತ್ತಿ, ವೀಱ್ಱಿ-ಪೀಠವನ್ನು ಅಲಂಕರಿಸಿ, ಇರುನ್ದಾಯ್ – ಇರುವವನೇ !, ಉನ್ನೈ-ನಿನ್ನನ್ನು, ಎಙ್ಗ–ಎಲ್ಲಿ, ಎಯ್ದ- ಹೊಂದಲು, ಕೂವುರ್ವ–ಕೂಗುತ್ತಿದೇನೋ !

( ಸ–ಗಾ–ರ || )—

ಸಙ್ಕ್ಷೀಭೂತಶತಾರಿಸೈನ್ಯನಿಧನಸ್ತ್ವಂ ಪಾಣ್ಡವಾನ್ ಪಞ್ಚ ತಾನ್
ಮಾಯಾಯೋಧನಕೃತ್ ಪ್ರಪಾಲ್ಯ ಚ ರಿಪೂನ್ ಧೂಳೀಕೃತಾಂಶ್ಚಾಕರೋಃ|
ಸ್ವಾಮಿನ್! ಭೂಮಿಸಮುದ್ಧೃತಿಂ ಚ ಕೃತವಾಂಸ್ತ್ವಂ ವೈದಿಕಾರಾಧಿತೇ
ದಿವ್ಯೇ ಶ್ರೀವರಮಙ್ಗಲಾಹ್ವಯಪುರೇ ಭಾಸಿ ! ಕ್ವ ವಾ ತ್ವಾಂ ಭಜೇ ? ||

ತಾ|| ಸಂಕ್ಷೀಭೂತವಾದ ಶತ್ರುಸೈನ್ಯವುಳ್ಳ ನೂರುಮಂದಿ ಕೌರವರೂ ನಾಶ ಹೊಂದುವಂತೆ, ಐದುಮಂದಿ ಪಾಣ್ಡವರಿಗೆ ಸಹಾಯಭೂತನಾಗಿ ಆಶ್ಚರ್ಯಕರವಾದ ಯುದ್ಧವನ್ನು ನಡೆಸಿ ಸೈನ್ಯವನ್ನೆಲ್ಲಾ ಧೂಳಿಮಾಡಿದ ನನ್ನ ಸ್ವಾಮಿಯೇ! ವರಾಹ ರೂಪಿಯಾಗಿ ಭೂಮಿಯನ್ನು ಎತ್ತಿದವನೇ ! ನಿರ್ಮಲಜ್ಞಾನವುಳ್ಳವರು ಆಚರಿಸುವ ವೈದಿಕಕರ್ಮಗಳಿಂದ ಅವಿಚ್ಛಿನ್ನವಾಗಿ ಕೂಡಿ ಇರುವ ಶ್ರೀ ವರಮಂಗಲನಗರದಲ್ಲಿ ದಿವ್ಯ ಸಿಂಹಾಸನವನ್ನು ಹತ್ತಿ ಪೀಠವನ್ನು ಅಲಂಕರಿಸಿ ಬಿಜಯಮಾಡಿರುವವನೇ ! ನಿನ್ನನ್ನು ಎಲ್ಲಿ ಹೊಂದಲು ನಾನು ಹೀಗೆ ಮೊರೆಯಿಡುತ್ತೇನೋ ?

(೫) ಎಯ್ದ ಕ್ಕೂವುದಲಾವದೇ ಯೆನಕ್ಕೆವ್ವೆ
ದೆವ್ವತ್ತುಳಾಯುಮಾಯ್ ನಿನ್ಱು,
ಕೈತವಙ್ಗಳ್ ಶೆಯ್ಯುಮ್ ಕರುಮೇನಿ ಯಮ್ಮಾನೇ,
ಶೆಯ್ದವೇಳ್ವಿಯರ್ ವೈಯತ್ತೇವರಱಾ ಚ್ಚಿರೀವರಮಙ್ಗಲನಕರ್,
ಕೈತೊಱ್ಱ ವಿರುನ್ದಾಯುದು ನಾನುಮ್ ಕಣ್ಡೇನೇ.

ಪ್ರ|| ಎನಕ್ಕು ನನಗೆ, ಎಯ್ದ–ಸಾಧನವಾಗಿ ಹೊಂದಲು, ಕೂವುದಲ್–ಅಪೇಕ್ಷಿಸಿ ಕೂಗೋಣವು, ಆವದೇ – ಉಚಿತವೋ ?; ಎವ್ವ – ಯಾವ ಯಾವ ವಿಧವಾದ, ದೆವ್ವತ್ತುಳ್–ಆಸುರವರ್ಗಗಳಲ್ಲೂ, ಆಯುಮಾಯ್ – ಆವೇಶದಿಂದ ನೀನು ಪ್ರವೇಶಿಸಿ, ನಿನ್ಱು-ನಿಂತು, ಕೈತವಙ್ಗಳ್-ಕೃತ್ರಿಮಗಳನ್ನು (ಮಾಯಾಚೇಷ್ಟಿತ ಗಳನ್ನು), ಶೆಯ್ಯುಮ್-ಮಾಡುವ, ಕರುಮೇನಿ-ಶ್ಯಾಮಲವಿಗ್ರಹವುಳ್ಳ, ಅಮ್ಮಾನೇ-ಸ್ವಾಮಿಯೇ !, ಶೆಯ್ದವೇಳ್ವಿಯರ್–ಅನುಷ್ಠಿತವಾದ ವೈದಿಕ ಕರ್ಮಗಳುಳ್ಳ, ವೈಯ

ತ್ತೀವರ್-ಭೂಸುರರಾದ ಮಹನೀಯರು, ಅಜ್ಞಾ-ಅವಿಚ್ಛಿನ್ನವಾಗಿ ವಾಸಮಾಡುವ, ಶಿರೀವರಮಙ್ಗಲನಕರ್-ಶ್ರೀವರಮಙ್ಗಲನಗರವೆಲ್ಲಾ, ಕೈತೊೞ-ನಿನ್ನನ್ನು ಸೇವಿಸುವಂತೆ, ಇರುನ್ದಾಯ್ – ಬಿಜಯಮಾಡಿ ಇರುತ್ತೀಯೇ!. ನಾನುಮ್ - ನಾನೂ, ಅದು-ಆ ನಿನ್ನ ಸ್ಥಿತಿಯನ್ನು, ಕಣ್ಡೇನೇ ಕಂಡೇ ಇದೇನಷ್ಟೆ.

( ಸ-ಗಾ-ರ || )—

ತ್ವತ್ಪ್ರಾಪ್ತ್ಯೈ ಕಿಮಹಂ ಚ ಸಾಧನಪರಸ್ಸ್ಯಾಂ ತ್ವಂ ಹಿ ಮಾಯಾವಿನಾಂ
ಮಧ್ಯೇ ಕೃತ್ರಿಮಚೇಷ್ಟಿತೋಽಮ್ಬುದನಿಭಸ್ಸ್ವಾಮಿನ್ನಭೂಃ ಖ್ಯಾತಿಮಾನ್ |
ಲೋಕೇಽಸ್ಮಿನ್ ಕೃತಕೃತ್ಯತಾಮುಪಗತೈಸ್ಸ್ನೇವ್ಯೇ ಚ ದಿವ್ಯೇ ವಸನ್
ಶೇಷೇ ಶ್ರೀವರಮಙ್ಗಲಾಹ್ವಯಪುರೇ ! ದೃಷ್ಟಂ ಮಯಾಽಪಿ ಸ್ವಯಮ್ ||

ತಾ|| ನನಗೆ ಸಾಧನವನ್ನು ಪಡೆಯಲು ಹೀಗೆ ಕೋಗೋಣವು ಉಚಿತವೋ ? ಯಾವಯಾವ ವಿಧವಾದ ಅಸುರವರ್ಗಗಳಲ್ಲೂ ನೀನೇ ಆವೇಶಿಸಿ ನಾನಾ (ಕೃತ್ರಿಮ) ಮಾಯಾಚೇಷ್ಟಿತಗಳನ್ನೂ ಮಾಡುವ ನೀಲಮೇಘಶ್ಯಾಮಲನಾದ ಸ್ವಾಮಿಯಾಗಿರುತ್ತೀಯೆ ವೈದಿಕ ಕರ್ಮಾನುಷ್ಠಾನತತ್ಪರರಾದ ಭೂಸುರರು ನಿತ್ಯವಾಸಮಾಡುವ ಶ್ರೀ ವರಮಂಗಲನಗರವೆಲ್ಲಾ ನಿನ್ನನ್ನು ಸೇವಿಸುವಂತೆ ನೀನು ಅಲ್ಲಿ ಬಿಜಯಮಾಡಿ ಇರುತ್ತೀಯೆ. ಇದನ್ನು ನಾನೂ ಕಂಡೆನಷ್ಟೆ !

(೭) ಏನಮಾಯ್ ನಿಲಙ್ಕೀಣ್ಡ ವೆನ್ನಪ್ಪನೇ ಕಣ್ಣಾ
ಎನ್ರುಮೆನ್ನೈ ಯಾಳುಡೈ
ವಾನನಾಯಕನೇ ಮಣಿಮಾಣಿಕ್ಕಚ್ಚುಡರೇ,
ತೇನಮಾವ್ಪೊೞಿಲ್‌ತಣ್ ಶಿರೀವರಮಙ್ಗಲತ್ತವರ್ ಕೈತೊೞವುರ್ರ್ರ
ವಾನಮಾಮಲೈಯೇ ಯಡಿಯೇನ್ ತೊೞ ವನ್ದರುಳೇ.

ಪ್ರ|| ಏನಮಾಯ್-ವರಾಹವೇಷವುಳ್ಳವನಾಗಿ, ನಿಲಮ್ ಕೀಣ್ಡ-ಭೂಮಿಯನ್ನು ಎತ್ತಿದ, ಎನ್ ಅಪ್ಪನೇ-ನನ್ನ ಸ್ವಾಮಿಯೇ!, ಕಣ್ಣಾ-ಸರ್ವ ಸುಲಭನಾದ ಕೃಷ್ಣನೇ!, ಎನ್ರುಮ್-ಯಾವಾಗಲೂ, ಎನ್ನೈ-ನನ್ನನ್ನು, ಆಳುಡೈ-ಕಿಂಕರನಾಗಿ ಮಾಡಿಕೊಂಡಿರುವ, ವಾನನಾಯಕನೇ – ಪರಮಪದನಾಥನೇ!, ಮಣಿಮಾಣಿಕ್ಕಚ್ಚುಡರೇ-(ನೀಲಮಣಿಯಂತೆ) ವಿಲಕ್ಷಣವಾದ ಮಾಣಿಕ್ಯದ ತೇಜಸ್ಸುಳ್ಳವನೇ, ತೇನ-ಮಧುಸ್ಯನ್ದಿಯಾದ, ಮಾವ್ಪೊೞಿಲ್ – ಮಾವಿನ ತೋಪುಗಳುಳ್ಳ, ತಣ್-

ಶ್ರಮಹರವಾದ, ಶಿರೀವರಮಙ್ಗಲತ್ತವರ್–ಶ್ರೀವರಮಙ್ಗಲನಗರದಲ್ಲಿ ವಾಸಮಾಡು ವವರು, ಕೈತೊೞ–ಅಂಜಲಿಮಾಡಿ ಸೇವಿಸುವಂತೆ, ಉಱೈ – ನಿತ್ಯವಾಸಮಾಡು ವವನೇ!, ವಾನ–ಪರಮಪದವಾಸಿಗಳಿಗೂ ಅನುಭಾವ್ಯವಾದ, ಮಾಮಲೈಯೇ–ಮಹಾಪರ್ವತದಂತೆ ಸುಸ್ಥಿರನಾದವನೇ (ವಾನಮಾಮಲೈ–ಎಂಬ ಸ್ವಾಮಿಯೇ!) ಅಡಿಯೇಱ ತೊೞ–ನಾನು (ನಿನ್ನನ್ನು) ಸೇವಿಸಲು ಅನುಕೂಲವಾಗುವಂತೆ, ವನ್ದು-ಬಂದು, ಅರುಳ್–ಕೃಪೆಮಾಡು.

( ಸ–ಗಾ–೮ || )–

ವಾರಾಹೋ ಧರಣೀಸಮುದ್ಧರಣಕೃತ್ತ್ವಂ ಮೇಽಸಿ ನಾಥೋ ಹರೇ !
ಕೃಷ್ಣ ! ತ್ವಂ ಮಮ ದಾಸ್ಯಮೇತದಖಿಲಂ ಮಾಣಿಕ್ಯವರ್ಣಾವೃಣೋಃ||
ಸೂರೀನ್ದ್ರಾಧಿಪ ! ಸದ್ರಸಾಲಮಧುರೇ ಸೇವ್ಯೋಽಸ್ಯಹೋ ! ಶೀತಲೇ
ದಿವ್ಯೇ ಶ್ರೀವರಮಙ್ಗಲೇ ನಿವಸತಾಂ ! ಮಾಂ ಪಶ್ಯ ದಿವ್ಯಾಚಲ ! ||

ತಾ|| ವರಾಹರೂಪಿಯಾಗಿ ಭೂಮಿಯನ್ನು ಉದ್ಧರಿಸಿದ ನನ್ನ ಸ್ವಾಮಿಯೇ! ಸರ್ವಸುಲಭನಾದ ಕೃಷ್ಣನೇ! ಯಾವಾಗಲೂ ನನ್ನನ್ನು ಕಿಂಕರನಾಗಿ ಮಾಡಿ ಕೊಂಡಿರುವ ಪರಮಪದನಾಥನೇ! ನೀಲಮಣಿವರ್ಣನೇ! ಮಧುಸ್ಯನ್ದಿಯಾದ ಮಾವಿನತೋಪುಗಳುಳ್ಳ ಶ್ರಮಹರವಾದ ಶ್ರೀ ವರಮಂಗಲದಲ್ಲಿ ವಾಸಮಾಡುವ ವರಿಗೆ ನಿತ್ಯಸೇವ್ಯನಾದ ಸ್ವಾಮಿಯೇ! ಪರಮಪದವಾಸಿಗಳಿಗೂ ಸೇವ್ಯನಾದ ವಾನಮಾಮಲೈಯೇ! ನನಗೂ ಸೇವ್ಯನಾಗಿ ಬಂದು ಕೃಪೆಮಾಡು.

(೭) ವನ್ದರುಳಿ ಯೆನ್ನೆಞ್ಜಿಡಙ್ಕೊಣ್ಡ ವಾನವರ್ಕೊೞುನ್ದೇ,
ಉಲಕುಕ್ಕೋರ್
ಮುನ್ದೈ ತ್ತಾಯ್ತನ್ದೈಯೇ ಮುೞುವೇೞುಲಕುಮುಣ್ಡಾಯ್,
ಶೆನ್ದೊಱಿಲವರ್ ವೇದವೇಳ್ವಿಯಱಾ ಚ್ಚಿರೀವರಮಙ್ಗಲನಕರ್,
ಅನ್ದಮಿಲ್ ಪುಕೞಾಯಡಿಯೇನೈ ಯಕಱ್ಱಲೇ.

ಪ್ರ|| ವನ್ದರುಳಿ–ಕೃಪೆಯೊಡನೆ ಬಂದು, ಎನ್–ನನ್ನ, ನೆಞ್ಜು–ಮನಸ್ಸನ್ನು, ಇಡಮ್ಕೊಣ್ಡ–ವಾಸಸ್ಥಾನವಾಗಿ ಮಾಡಿಕೊಂಡ, ವಾನವರ್ಕೊೞುನ್ದೇ–ನಿತ್ಯ ಸೂರಿಗಳಿಗೆ ಅಧಿಪತಿಯಾದವನೇ!, ಉಲಕುಕ್ಕು–ಲೋಕಕ್ಕೆ, ಓರ್ಮುನ್ದೈ–ಅದ್ವಿತೀಯವಾದ ಪ್ರಥಮಕಾರಣವಸ್ತುವಾದ, ತಾಯ್ತನ್ದೈಯೇ–ತಾಯಿಯೂ ತಂದೆಯೂ ಆದವನೇ, ಮುೞು ಏೞುಲಕುಮುಣ್ಡಾಯ್ – ಸಮಗ್ರವಾದ ಸಪ್ತ

ಲೋಕಗಳನ್ನೂ ಭಕ್ಷಿಸಿದವನೇ, ಶೆಮ್‌ತೊೞಿಲವರ್–ಋಜುವಾದ ಕೈಂಕರ್ಯವನ್ನೇ ಮಾಡುತ್ತಿರುವವರ, ವೇದವೇಳ್ವಿ–ವೈದಿಕಕರ್ಮಗಳು, ಅಱಾ - ಅವಿಚ್ಛಿನ್ನವಾಗಿ ನಡೆಯುವ, ಶಿರೀವರಮಙ್ಗಲನಕರ್ – ಶ್ರೀ ವರಮಙ್ಗಲನಗರದಲ್ಲಿ, ಅನ್ದಮಿಲ್ ಪುಕೞಾಯ್–ಅನನ್ತಕಲ್ಯಾಣಗುಣಪ್ರಾಶಸ್ತ್ಯವುಳ್ಳವನೇ!, ಅಡಿಯೇನೈ–ದಾಸ ಭೂತನಾದ ನನ್ನನ್ನು, ಅಕಱಿಲ್–ದೂರದಲ್ಲಿ ಬಿಟ್ಟಿರಬೇಡ (ತ್ಯಜಿಸಬೇಡ).

( ಸ–ಗಾ–ರ ॥ )—

ಆಗತ್ಯಾತ್ರ ಹೃದೀಹ ಮೇ ವಸಸಿ ಭೋ! ದೇವಾಧಿದೇವಾಚ್ಯುತ!
ಶ್ರೀಶಸ್ತ್ವಂ ಜಗತಾಂ ಪ್ರಸೂರಪಿ ಪಿತಾ ಲೋಕಾಃ ಕಿಲಾಭಕ್ಷಯಃ।
ಸೇವ್ಯಸ್ತ್ವಂ ಕಿಲ ವೈದಿಕೈಸ್ಸುಚರಿತ್ರೈರ್ನಿಸ್ಸೀಮಕೀರ್ತಿರ್ಹರೇ!
ದಿವ್ಯೇ ಶ್ರೀವರಮಙ್ಗಲಾಹ್ವಯಪುರೇ! ಮಾಂ ನ ತ್ಯಜೇರ್ಜಾತು ಚಿತ್ ॥

ತಾ॥ ಕೃಪೆಯಿಂದ ಬಂದು ನನ್ನ ಹೃದಯದೊಳಗೆ ವಾಸಮಾಡುವ ನಿತ್ಯ ಸೂರೀಶ್ವರನೇ! ಲೋಕಗಳಿಗೆಲ್ಲಾ ಮೂಲಕಾರಣಭೂತನಾಗಿ ತಾಯಿಯೂ ತಂದೆಯೂ ಆದವನೇ! ಸಕಲಲೋಕಗಳನ್ನೂ (ಪ್ರಳಯಕಾಲದಲ್ಲಿ) ಭಕ್ಷಿಸಿದ ವನೇ!, ಕೈಂಕರ್ಯನಿಷ್ಠರಾದವರ ವೈದಿಕಕರ್ಮಗಳು ಅವಿಚ್ಛಿನ್ನವಾಗಿ ನಡೆಯು ತ್ತಿರುವ ಶ್ರೀ ವರಮಂಗಲನಗರದಲ್ಲಿ ವಾಸಮಾಡುವ ಅನನ್ತ ಕಲ್ಯಾಣಗುಣಪ್ರಶಸ್ತಿ ಯುಳ್ಳ ಸ್ವಾಮಿಯೇ! ದಾಸಭೂತನಾದ ನನ್ನನ್ನು ದೂರದಲ್ಲಿ ಬಿಟ್ಟಿರಬೇಡ. (ನಿನ್ನ ಸಾನ್ನಿಧ್ಯದಲ್ಲೇ ಯಾವಾಗಲೂ ಇರುವಂತೆ ಕೃಪೆಮಾಡು)

(ಲ) ಅಕಱ್ಱ ನೀ ವೈತ್ತ ಮಾಯವಲ್ಲೈಮ್ಬುಲಙ್ಗಳಾಮವೈ ನನ್ಗಱಿನ್ದನನ್,
ಅಕಱ್ಱಿ ಯೆನ್ನೈಯುಮ್ ನೀ ಯರುಮ್ ಶೇಱ್ಱಿಲ್ ವೀೞ್ತ್ತಿ ಕಣ್ಡಾಯ್,
ಪಕಲ್‌ಕದಿರ್ ಮಣಿಮಾಡನೀಡು ಶಿರೀವರಮಙ್ಗೈವಾಣನೇ ಎನ್ಱುಮ್,
ಪುಕಱ್ಕುರಿಯ ವೆನ್ದಾಯ್ ಪುಳ್ಳಿಙ್ವಾಯ್‌ಪಿಳನ್ದಾನೇ.

ಪ್ರ॥ ಅಕಱ್ಱ–(ಅನಾಶ್ರಿತರನ್ನು) ದೂರ ಬಿಟ್ಟಿರಲು, ನೀ ವೈತ್ತ – ನೀನು ಉಂಟುಮಾಡಿದ, ಮಾಯವಲ್–ಮಾಯಾಮಯವಾಗಿ ಬಲಿಷ್ಠವಾದ, ಐಮ್ಬುಲ

ಕೆಳಿಱಮನ್ಯೆ – ಪಂಚೇನ್ದ್ರಿಯಗಳಾದವುಗಳನ್ನು, ನನ್ನು ಅಱಿನ್ದನ್ – ಚೆನ್ನಾಗಿ ತಿಳಿದುಕೊಂಡೆನು. ಎನ್ನೈಯುಮ್ - (ಹೀಗೆ ತಿಳಿದಿರುವ) ನನ್ನನ್ನೂ ಕೂಡ, ಅಕಱ್ಱಿ-ದೂರದಲ್ಲಿ ತ್ಯಜಿಸಿ, ನೀ-ನೀನು, ಅರುಂಶೇಱ್ಱಿಲ್-ದುಸ್ತರವಾದ (ವಿಷಯ ರೂಪವಾದ) ಕೆಸರಿನಲ್ಲಿ, ವೀೞ್ತ್ತಿಕಣ್ಡಾಯ್–ಬೀಳುವಂತೆ ಮಾಡುತ್ತೀಯೋ?— (ಎಂದು ಭಯಪಡುತ್ತೇನೆ). ಪಕಲ್‌ಕದಿರ್ – ಉಜ್ಜ್ವಲವಾದ ತೇಜಸ್ಸುಳ್ಳ, ಮಣಿಮಾಡ ನೀಡು – ಮಾಣಿಕ್ಯಖಚಿತವಾದ ಉಪ್ಪರಿಗೆಗಳಿಂದ ಉನ್ನತವಾಗಿ ಪ್ರಕಾಶಿಸುತ್ತಿರುವ, ಶಿರೀವರಮಙ್ಗೈ – ಶ್ರೀ ವರಮಙ್ಗಲನಗರಕ್ಕೆ, ವಾಣನೇ- ಸ್ವಾಮಿಯೇ, ಎನ್ನುಮ್–ಯಾವಾಗಲೂ, ಪುಕಱ್ಕರಿಯ–(ಇತರರಿಗೆ) ಪ್ರವೇಶಿಸಲು ಅಶಕ್ಯವಾದ, ಎನ್ದಾಯ್-ನನ್ನ ತಂದೆಯೇ, ಪುಳ್ಳಿನ್‌ವಾಯ್ ಪಿಳನ್ದಾನೇ- ಬಕಾಸುರನ ಬಾಯಿಯನ್ನು ಸೀಳಿದವನೇ! (ಇನ್ತಹ ಶಕ್ತನಾದ ನೀನು ನನ್ನನ್ನು ಹೀಗೆ ಬಿಟ್ಟಿರಬಹುದೆ ?—ಎಂದು ಭಾವವು)

( ಶಾ–ಗಾ–ರ || )—

ವಿಶ್ಲೇಷಾಯ ಮಮೇನ್ದ್ರಿಯಾಣಿ ಚ ಸೃಜನ್ ಪಞ್ಚಾಪಿ ಮಾಯಾಮಯಾ-
ನ್ಯೇವಂ ಕಿಂ ಕುರುಷೇ ಚ ಮಜ್ಜಯಸಿ ಕಿಂ ದುಸ್ಸಙ್ಗಮೋಹಾಮ್ಬುಧೌ |
ಭಾಸ್ವಚ್ಛ್ರೀಮಣಿಸೌಧರಾಜಿರುಚಿರೇ ದಿವ್ಯೇ ಸ್ವಯಂ ಭ್ರಾಜಸೇ
ನಾಥ! ಶ್ರೀವರಮಙ್ಗಲಾಹ್ವಯಪುರೇ ಗುಪ್ತೋ ಬಕಧ್ವಂಸಕಃ ||

ತಾ|| ಅನಾಶ್ರಿತರನ್ನು ದೂರದಲ್ಲಿ ತ್ಯಜಿಸುವುದಕ್ಕಾಗಿ ನೀನು ಉಂಟು ಮಾಡಿರುವ ಮಾಯಾಮಯವಾದ ಬಲಿಷ್ಠವಾದ ಪಂಚೇನ್ದ್ರಿಯಗಳ ವ್ಯಾಪಾರ ಗಳನ್ನು ನಾನು ತಿಳಿದು ಇದೇನೆ. ಹೀಗೆ ತಿಳಿದಿರುವ ನನ್ನನ್ನೂ ಕೂಡ ನೀನು ದೂರದಲ್ಲಿ ತ್ಯಜಿಸಲು ದುಸ್ತರವಾದ ವಿಷಯಾಮ್ಬುಧಿಯಲ್ಲಿ ಮಗ್ನನಾಗುವಂತೆ ಮಾಡುತ್ತೀಯೋ ? ತೇಜಮಯವಾದ ಮಣಿಖಚಿತ ಪ್ರಾಸಾದಗಳಿಂದ ಕೂಡಿದ ಶ್ರೀ ವರಮಂಗಲನಗರದ ಸ್ವಾಮಿಯೇ ! ಇತರರಿಗೆ ಆಶ್ರಯಿಸಲು ಅಶಕ್ಯನಾದ ನನ್ನ ತಂದೆಯೇ ! ಬಕವಕ್ತ್ರದಾರಕನೇ! (ನನ್ನನ್ನು ನೀನು ಕೈ ಬಿಡಬೇಡ— ಎಂದು ತಾತ್ಪರ್ಯ).

(೯) ಪುಳ್ಳಿವಾಯ್ಪಿಳನ್ದಾಯ್ ಮರುದಿಡೈಪೋಯಿನಾ
ಯೆರುದೇಳಡರ್ತ್ತ, ಎನ್
ಕಳ್ಳಮಾಯವನೇ ಕರುಮಾಣಿಕ್ಕಚ್ಚುಡರೇ,
ತೆಳ್ಳಿಯಾರ್ ತಿರುನಾನ್ಮತ್ತೈಕಳ್ವಲ್ಲಾರ್ ಮಲಿತಣ್
ಶಿರೀವರಮಙ್ಗೈ,
ಉಳ್ಳಿರುನ್ದವೆನ್ದಾಯರುಳಾಯುಯ್ಯುಮಾಱನಕ್ಕೇ

ಪ್ರ|| ಪುಳ್ಳಿವಾಯ್ಪಿಳನ್ದಾಯ್-ಬಕಾಸುರವಕ್ತ್ರದಾರಕನೇ!, ಮರುದಿಡೈಪೋಯಿನಾಯ್ – ಯಮಳಾರ್ಜುನ ಮಧ್ಯಗನೇ! ಏೞು ಎರುದು ಅಡರ್ತ್ತ-ಸಪ್ತವೃಷಭಗಳನ್ನು ಮರ್ದನಮಾಡಿದ, ಕಳ್ಳ ಎನ್ ಮಾಯವನೇ-ವಂಚಕನಾದ ನನ್ನ ಮಾಯಾವಿಯೇ!, ಕರುಮಾಣಿಕ್ಕಚ್ಚುಡರೇ-ನೀಲಮಾಣಿಕ್ಯದಂತೆ ತೇಜಸ್ಸುಳ್ಳವನೇ, ತೆಳ್ಳಿಯಾರ್-ದಿವ್ಯಜ್ಞಾನವುಳ್ಳವರಾದ, ತಿರುನಾನ್ಮತ್ತೈಕಳ್ವಲ್ಲಾರ್-ಶ್ರೀ ಚತುರ್ವೇದವಿದ್ವರ್ಯರು, ಮಲಿ-ವಾಸಮಾಡುವುದರಿಂದ, ತಣ್-ಶ್ರಮಹರವಾದ(ಸಂಸಾರತಾಪಶಾನ್ತಿಕರವಾದ), ಶಿರೀವರಮಙ್ಗೈ ಉಳ್-ಶ್ರೀವರಮಙ್ಗಲನಗರದ ಒಳಗೆ, ಇರುನ್ದ-ಬಿಜಯಮಾಡಿ ಇರುವ, ಎನ್ದಾಯ್-ನನ್ನ ಸ್ವಾಮಿಯೇ, ಎನಕ್ಕು ನನಗೆ, ಉಯ್ಯುಮ್ ಆಱು-ಉಜ್ಜೀವಿಸುವ ಪ್ರಕಾರವನ್ನು, ಅರುಳಾಯ್-ಕೃಪೆಮಾಡಿ ತಿಳಿಸು (ಅನುಗ್ರಹಿಸು).

( ಸ-ಗಾ-ರ || )—

ಶ್ರೀಮನ್! ಹೇ ಬಕವಕ್ತ್ರದಾರಕ! ವಿಭೋ! ದ್ವನ್ದ್ವಾರ್ಜುನಧ್ವಂಸಕ!
ಸ್ವಾಮಿನ್! ಸಪ್ತವೃಷಪ್ರಭಞ್ಜಕ! ತವ ಪ್ರೇಕ್ಷ್ಯಾಸ್ಮಿ ಮಾಯಿನ್ ಗುಣಾನ್ |
ದುಜ್ಞೇಯಾನಿಹ ವಿಸ್ಮಿತೋಽದ್ಯ! ಮಹಸಾ ಮಾಣಿಕ್ಯನೀಲೋಽಸ್ಯಹೋ!
ದಿವ್ಯೇ ಶ್ರೀವರಮಙ್ಗಲೇ ಶ್ರುತಿವಿದಾಂ ವಾಸೇ! ಕೃಪಾಂ ಮೇ ಕುರು ||

ತಾ|| ಬಕವಕ್ತ್ರದಾರಕನೇ! ಯಮಳಾರ್ಜುನಮಧ್ಯಪ್ರವಿಷ್ಟನೇ! ಸಪ್ತವೃಷಪ್ರಭಞ್ಜಕನೇ! ಮಾಯಾಚೇಷ್ಟಿತನಾದ ನನ್ನ ಸ್ವಾಮಿಯೇ! ನೀಲಮಾಣಿಕ್ಯವರ್ಣನೇ! ದಿವ್ಯಜ್ಞಾನವುಳ್ಳ ಚತುರ್ವೇದ ವಿದ್ವರ್ಯರು ನಿತ್ಯವಾಸಮಾಡುವ ಶೀತಳವಾದ ಶ್ರೀ ವರಮಂಗಲನಗರದಲ್ಲಿ ಬಿಜಯಮಾಡಿ ಇರುವ ನನ್ನ ಸ್ವಾಮಿಯೇ! ನನಗೆ ಉಜ್ಜೀವಿಸುವ ಪ್ರಕಾರವನ್ನು ಕೃಪೆಮಾಡಿ ತಿಳಿಸು.

(೧೦) ಆಱೆನಕ್ಕು ನಿನ್ ಪಾದಮೇ ಶರಣಾಕ ತ್ತನ್ದೊಳಿನ್ದಾಯ್,
ಉನಕ್ಕೋರ್ ಕೈ
ಮ್ಮಾಱು ನಾನೊನ್ರಿಲೇನೆನದಾವಿಯುಮುನದೇ,
ಶೇಱುಕೊಳ್ ಕರುಮ್ಬುಮ್ ಪೆರುಮ್‌ಶೆನ್ನೆಲುಮ್
ಮಲಿತಣ್ ಶಿರೀವರಮಙ್ಗೈ,
ನಾಱುಪೂನ್ತಣ್ದುಳಾಯ್ ಮುಡಿಯಾಯ್ ತೆಯ್ವನಾಯಕನೇ.

ಪ್ರ॥ ಎನಕ್ಕು–ನನಗೆ, ಆಱು–ಉಜ್ಜೀವನ ಪ್ರಕಾರವನ್ನು, ನಿನ್‌ಪಾದಮೇ ಶರಣಾಕ- ನಿನ್ನ ಚರಣವೇ ಶರಣವೆಂದು, ತನ್ದೊಳಿನ್ದಾಯ್ – (ನೀನು) ತನ್ದು ಬಿಟ್ಟೆ. ಉನಕ್ಕು-ನಿನಗೆ, ಓರ್‌ಕೈಮ್ಮಾಱು-ಒಂದು ವಿಧವಾದ ಪ್ರತ್ಯುಪಕಾರವನ್ನೂ, ನಾನ್–ನಾನು, ಒನ್ರು ಇಲೇನ್–ಒಂದನ್ನೂ ಪಡೆದವನಲ್ಲ. ಎನದು ಆವಿಯುಮ್– ನನ್ನ ಆತ್ಮತತ್ತ್ವವೂ, ಉನದೇ – ನಿನ್ನದೇ ಆಗಿದೆ. ಶೇಱುಕೊಳ್–ಕೆಸರಿನಲ್ಲಿ ಬೆಳೆದಿರುವ, ಕರುಮ್ಬುಮ್ ಪೆರುಂ ಶೆನ್ನೆಲುಮ್ – ಕಬ್ಬೂ, ದಪ್ಪ ಕೆಂಪು ಬತ್ತದ ಪೈರೂ, ಮಲಿ–ತುಂಬಿ, ತಣ್ – ಶ್ರಮಹರವಾದ, ಶಿರೀವರಮಙ್ಗೈ – ಶ್ರೀವರ ಮಙ್ಗಲಪುರಿಯಲ್ಲಿ ವಾಸಮಾಡುವ, ನಾಱು – ದಿವ್ಯಪರಿಮಳವುಳ್ಳ, ಪೂನ್ – ರಮಣೀಯವಾದ, ತಣ್‌ತುೞಾಯ್–ಶೀತಳವಾದ ತುಲಸೀಮಾಲೆಯಿಂದ ಅಲಂಕೃತವಾದ, ಮುಡಿಯಾಯ್–ಕಿರೀಟವುಳ್ಳವನೇ !, ತೆಯ್ವನಾಯಕನೇ – ನಿತ್ಯ ಸೂರಿನಾಯಕನೇ ! (ಇನ್ತಹ ನಿನ್ನ ವಿಷಯದಲ್ಲ ನಾನು ಹೇಗೆ ಪ್ರತ್ಯುಪಕಾರ ಮಾಡಬಲ್ಲೆನು ?—ಎಂದು ಭಾವವು.)

( ಸ–ಗಾ–ರ ॥ )—
ತ್ವತ್ಪಾದಾಮ್ಬುಜಯುಗ್ಮಮೇವ ಶರಣಂ ಕೃತ್ವಾಽಪಿ ಮೇ ರಕ್ಷಕ-
ಸ್ತೇಽಹಂ ನಾಸ್ಮಿ ಕಿಲೋಪಚಾರಕೃದಹೋ! ವಶ್ಯೋ ಮಮಾತ್ಮಾಽಪಿ ತೇ |
ವ್ರೀಹೀಕ್ಷ್ವಾದಿಫಲಾಶ್ರಯೇ ಚ ರುಚಿರೇ ದಿವ್ಯೇ ಸ್ವಯಂ ಶೀತಲೇ
ಭಾಸ್ವನ್ ! ಶ್ರೀವರಮಙ್ಗಲೇ ವಿಜಯಸೇ ದೇವೇಶ ! ಮೌಳ್ಯುಜ್ಜ್ವಲ ! ||

ತಾ॥ ನನಗೆ ನಿನ್ನ ಚರಣವೇ ಶರಣವೆಂದು ಉಜ್ಜೀವನಪ್ರಕಾರವನ್ನು ಅನುಗ್ರಹಿಸಿ ಇರುತ್ತೀಯೆ ನಿನಗೆ ಯಾವವಿಧವಾದ ಪ್ರತ್ಯುಪಕಾರವನ್ನೂ ನಾನು ಮಾಡಲಾರೆನು. ನನ್ನ ಆತ್ಮತತ್ತ್ವವೂ ಕೂಡ ನಿನ್ನದೇ ಆಗಿದೆ. ನೀನು ಇಕ್ಷು ವ್ರೀಹಿಭರಿತವಾದ ಶ್ರೀ ವರಮಂಗಲನಗರದಲ್ಲಿ ವಾಸಮಾಡುತ್ತ, ದಿವ್ಯಪರಿಮಳ ಯುಕ್ತವಾದ ತುಳಸೀಮಾಲೆಯಿಂದ ಅಲಂಕೃತವಾದ ಕಿರೀಟವುಳ್ಳ ನಿತ್ಯಸೂರಿ ನಾಯಕನಾಗಿರುತ್ತೀಯೆ (ನಿನಗೆ ನಾನೇನು ಪ್ರತ್ಯುಪಕಾರ ಮಾಡಬಲ್ಲೆನು ?)

(೧೧) ತೆಯ್ವನಾಯಕನ್ ನಾರಣನ್ ತಿರುವಿಕ್ಕಿರಮನಡಿಯಿಣೈಮಿಶೈ
ಕೊಯ್ಕೊಳ್ ಪೂಂಪೊೞಿಲ್‌ಶೂೞ್ ಕುರುಕೂರ್ ಚ್ಚಡಕೋಪನ್,
ಶೆಯ್ದವಾಯಿರತ್ತುಳ್ಳಿವೈ ತಣ್‌ಶಿರೀವರಮಙ್ಗೈಮೇಯ ಪತ್ತುಡನ್
ವೈಕಲ್ ಪಾಡವಲ್ಲಾರ್ ವಾನೋರ್‌ಕ್ಕಾರಾವಮುದೇ.

ಪ್ರ|| ತೆಯ್ವನಾಯಕನ್ – ನಿತ್ಯಸೂರಿಗಳಿಗೆ ನಿರ್ವಾಹಕನಾದ, ನಾರಣನ್– ನಿರುಪಾಧಿಕ ಸಂಬನ್ಧವುಳ್ಳ ನಾರಾಯಣನಾಗಿಯೂ, ತಿರುವಿಕ್ಕಿರಮನ್ – ಸರ್ವಾಶ್ರಯಭೂತನಾದ ತ್ರಿವಿಕ್ರಮನಾಗಿಯೂ ಇರುವ ಸ್ವಾಮಿಯ, ಅಡಿಯಿಣೈಮಿಶೈ– ಪಾದಯುಗಳದಮೇಲೆ, ಕೊಯ್‌ಕೊಳ್ – ಕೊಯ್ಯಲು ಸಮೃದ್ಧವಾದ, ಪೂಮ್ ಪೊೞಿಲ್–ಪುಷ್ಪಗಳುಳ್ಳ ಉದ್ಯಾನಗಳಿಂದ, ಶೂೞ್ -ಪರಿವೃತವಾದ, ಕುರುಕೂರ್ ಶಡಕೋಪನ್ – ಶ್ರೀ ಕುರುಕಾಪುರಿಯ ನಮ್ಮಾೞ್ವಾರ್, ಶೆಯ್ದ–ರಚಿಸಿದ, ಆಯಿರತ್ತುಳ್–ಸಹಸ್ರ ಪದ್ಯಮಾಲೆಯೊಳು, ತಣ್–ಶ್ರಮಹರವಾದ, ಶಿರೀವರಮಙ್ಗೈ– ಶ್ರೀವರಮಙ್ಗಲ ನಗರವನ್ನು, ಮೇವಿಯ–ಸಂಬನ್ಧಿಸಿದ, ಇವೈಪತ್ತು–ಈ ಹತ್ತು ಪದ್ಯಗಳನ್ನು, ಉಡನ್ – ಅರ್ಥದೊಡನೆ, ಪಾಡವಲ್ಲಾರ್ - ಹಾಡಬಲ್ಲವರು, ವಾನೋರ್‌ಕ್ಕು – ಪರಮಪದ ವಾಸಿಗಳಿಗೆ, ವೈಕಲ್ – ಯಾವಾಗಲೂ, ಆರಾ- ಅಶೋಷ್ಯವಾದ, ಅಮುದೇ–ಅಮೃತವೇ (ಅಮೃತದಂತೆ ನಿತ್ಯಭೋಗ್ಯರಾಗುವರು- ಎಂದು ಭಾವವು).

( ಸ–ಗಾ- ರ || )—

ದೇವೇಶಾಚ್ಯುತ ! ಹೇ ತ್ರಿವಿಕ್ರಮ ! ಹರೇ ! ನಾರಾಯಣ ! ಶ್ರೀಧರ !
ಸ್ವಾಮಿನ್ನಿತ್ಯಯಮುತ್ತಮಂ ಹಿ ಕುರುಕಾಪುರ್ಯಾಶ್ಶಠಾರಿಃ ಪ್ರಭುಃ |
ಸ್ತೋತ್ರಂ ಚಾಹ ಸಹಸ್ರಮತ್ರ ದಶಕಂ ಚೇದಂ ವಿದುರ್ಯೇ ಭುವಿ
ಪ್ರಾಪ್ಯಂ ಶ್ರೀವರಮಙ್ಗಲಂ ಪ್ರತಿ ಪುರಂ ತೇ ಸೂರಿಭೋಗ್ಯಾ ದಿವಿ ||

ತಾ|| ದೇವನಾಯಕನೇ ! ನಾರಾಯಣನೇ ! ತ್ರಿವಿಕ್ರಮನೇ ! ಎಂದು ಶ್ರೀ ಭಗವನ್ತನ ಪಾದಾರವಿನ್ದಯುಗಳದಲ್ಲಿ ದಿವ್ಯಪುಷ್ಪೋದ್ಯಾನಭರಿತವಾದ ಶ್ರೀ ಕುರುಕಾಪುರಿಯ ಶಠಾರಿಮುನಿವರ್ಯರಿಂದ ಸಮರ್ಪಿಸಲ್ಪಟ್ಟ ಸಹಸ್ರ ಪದ್ಯಮಾಲೆಯೊಳು ಈ ಶ್ರೀವರಮಂಗಲನಗರದ ವಿಷಯದಲ್ಲಿ ರಚಿಸಲ್ಪಟ್ಟ ದಶಕವನ್ನು ಅರ್ಥದೊಡನೆ ಗಾನಮಾಡಬಲ್ಲವರು ಪರಮಪದವಾಸಿಗಳಿಗೆ ನಿತ್ಯಭೋಗ್ಯರಾಗಿ ಅಶೋಷ್ಯವಾದ ಅಮೃತದಂತೆ ಆಗುವರು.

( ದ್ರ–ಉ–ಸಂ || )—

ಏವಂ ಚ ಸೋಽನಧಿಗತಾಭಿಮತಸ್ತದಾಪ್ತ್ಯೈ
ನಾರಾಯಣಾದಿತರಸಾಧನಶೂನ್ಯತಾಂ ಸ್ವಾಮ್
ತಸ್ಮೈ ನಿವೇದ್ಯ ತದುಪಾಯಧಿಯೈವ ಕಿಞ್ಚಿ
ದಾಶ್ವಸ್ತವಾನಥ ಮುನಿಃ ಕಿಲ ಸಪ್ತಮೇನ ||

( ದ್ರ–ಉ–ತಾ–ರ || )—

ಸರ್ಪಾಧೀಶೇಶಯತ್ವಾದರಿದರಹರಣಾತ್ಸಾನುಕಮ್ಪತ್ವಯೋಗಾತ್
ಸತ್ಸಾಹಾಯ್ಯಾದಶೇಷಾನ್ತರನಿಲಯತಯಾ ಭೂಸಮುದ್ಧೃತ್ಯದನ್ತೈಃ |
ಸರ್ವೇಷಾಂ ತಾತಭಾವಾದಿತರಜನದುರಾಧರ್ಷತಾದೇಶ್ಯರಣ್ಯಂ
ದೀನಾನಾಂ ಪ್ರಾಹ ವಿಷ್ಣುಂ ಶರಣಮಥನೋ ದೇವತಾಸಾರ್ವಭೌಮಮ್ ||

(ಈ ಸಪ್ತಮದಶಕದ ಸಾರಾಂಶ)—

ಈ ಏಳನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಶ್ರೀ ಭಗವನ್ತನ ಸಂಶ್ಲೇಷವಂ ಪಡೆಯದೆ ಅತ್ಯನ್ತ ವಿಷಣ್ಣರಾಗಿ ಶ್ರೀಮನ್ನಾರಾಯಣನ ಚರಣ ಯುಗಳವೇ ತಮಗೆ ಸಾಧನವೆಂದು ನಿರ್ಣಯಿಸಿ, ಆದೇಪ್ರಕಾರ ಶರಣವರಣವಂ ಮಾಡಿ, ಶ್ರೀ ವರಮಂಗಲ ನಗರದಲ್ಲಿ ಸರ್ವಸೇವ್ಯನಾಗಿ ಬಿಜಯಮಾಡಿರುವ ಸ್ವಾಮಿಯನ್ನೇ ಆಶ್ರಯಿಸಿ ಅವನ ಅವತಾರ ಚೇಷ್ಟಿತಗಳನ್ನೆಲ್ಲಾ ಸ್ಮರಿಸಿ, ತಮ್ಮ ಆಕಿಂಚನ್ಯವನ್ನು ತಿಳಿಯಪಡಿಸಿ, ತಮ್ಮ ಭಕ್ತಿಪಾರವಶ್ಯವನ್ನು ಪ್ರಕಾಶಪಡಿಸಿರುತ್ತಾರೆ.

ಶ್ರೀಃ

# ಪಞ್ಚಮಶತಕದಲ್ಲಿ—ಅಷ್ಟಮದಶಕ.

(ಆರಾವಮುದೇ —)।

ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಫಲಸಿದ್ಧಿಯಂ ಹೊಂದದೆ ಖಿನ್ನರಾಗಿ ಶ್ರೀ ಕುಮ್ಭ (ಘೋಣ) ಪುರಿಯೆಂಬ (ತಿರುಕ್ಕುಡನ್ದೈ -ಎಂಬ) ದಿವ್ಯ ಕ್ಷೇತ್ರದ ಸ್ವಾಮಿಯಾದ ಪೂರ್ಣಾಮೃತಸ್ವಾಮಿ ಸನ್ನಿಧಿಯಲ್ಲಿ ಆರ್ತಿಯೊಡನೆ ಪ್ರಪತ್ತಿಯಂ ಮಾಡುತ್ತಾರೆ

---

(೧) ಆರಾವಮುದೇ ಯಡಿಯೇನುಡಲಮ್ ನಿನ್ಪಾಲನ್ಬಾಯೇ,
ನೀರಾಯಲೈನ್ದು ಕರೈಯವುರುಕ್ಕುಕಿನ್ರ ನೆಡುಮಾಲೇ,
ಶೀರಾರ್‌ಶೆನ್ನೆಲ್ ಕವರಿವೀಶುಮ್ ಶೆಙ್ನೀರ್ ತಿರುಕ್ಕುಡನ್ದೈ,
ಏರಾರ್‌ಕೋಲಮ್ ತಿಕಳ್ಕ್ಕಿಡನ್ದಾಯ್ ಕಣ್ಡೇನೆಮ್ಮಾನೇ.

ಪ್ರ॥ ಎಮ್ಮಾನೇ—ನನ್ನ ಸ್ವಾಮಿಯೇ!, ಆರಾ ಅಮುದೇ-ಅಶೋಷ್ಯವಾದ (ಅಪರ್ಯಾಪ್ತವಾದ) ಅಮೃತವೇ!, ಅಡಿಯೇನ್-ನನ್ನ, ಉಡಲಮ್-ಶರೀರವು, ನಿನ್‌ಪಾಲ್-ನಿನ್ನಲ್ಲಿ, ಅನ್ಬಾಯೇ - ಪ್ರೀತಿರೂಪವಾಗಿಯೇ, ನೀರಾಯ್-ದ್ರವೀಭೂತವಾಗಿ, ಅಲೈನ್ದು-ಅತ್ಯನ್ತ ವ್ಯಾಕುಲವಾಗಿ ಅಲೆದು, ಕರೈಯ-ಕರಗಿಹೋಗುವಂತೆ, ಉರುಕ್ಕುಕಿನ್ರ-(ಅದನ್ನು) ನೀರುನೀರಾಗಿ ಕರಗಿಸುವ, ನೆಡುಮಾಲೇ - ಅತ್ಯನ್ತಭೋಗ್ಯತಮನಾದ ಮಹಾಮಹಿಮನೇ!, ಶೀರಾರ್ - ಸಮೃದ್ಧಿಯಿಂದ ಪೂರ್ಣವಾದ, ಶೆನ್ನೆಲ್ - ಕೆಂಪುಬತ್ತದ ಪೈರು, ಕವರಿವೀಶುಮ್-ಉದ್ದವಾಗಿ ಬೆಳೆದು ಗಾಳಿಗೆ ಬೀಸುತ್ತಿರುವ, ಶೆಙ್ನೀರ್-ಪೂರ್ಣವಾದ ಜಲವುಳ್ಳ, ತಿರುಕ್ಕುಡನ್ದೈ -ತಿರುಕ್ಕುಡನ್ದೈಯೆಂಬ ಕ್ಷೇತ್ರದಲ್ಲಿ, ಏರ್ ಆರ್-ಸೌನ್ದರ್ಯಭರಿತವಾದ, ಕೋಲಮ್ -ದಿವ್ಯಾಲಂಕಾರವು, ತಿಕಳ-ಪ್ರಕಾಶಿಸುವಂತೆ, ಕಿಡನ್ದಾಯ್ - ಶಯನಮಾಡಿರುತ್ತೀಯೆ. ಕಣ್ಡೇನ್-ಇದನ್ನು ನಾನು ಸಾಕ್ಷಾತ್ತಾಗಿ ಕಂಡು ಅನುಭವಿಸಿದೆನು.

( ಸ-ಗಾ-ರ ॥ )—

ಸ್ವಾಮಿನ್! ಪೂರ್ಣಾಮೃತ! ತ್ವತ್ಪದಕಮಲಯುಗೇ ಭಕ್ತಿಹರ್ಷಪ್ರಕರ್ಷಾ-
ನ್ನಿತ್ಯಂ ಸತ್ಯಂ ದ್ರುತಂ ಸ್ಯಾನ್ಮಮ ವಪುರಖಿಲಂ ಸಂಸ್ರವತ್ಯೇವ ದಾಸ್ಯಾತ್।
ಶ್ರೀಮತ್ಯಾಂ ಕುಮ್ಭಪುರ್ಯಾಂ ಸುರುಚಿರಬಹುಳವ್ರೀಹಿಸಂವೀಜಿತಾಯಾಂ
ದಿವ್ಯಾಲಙ್ಕಾರಶಯ್ಯಾಮಧಿಶಯಿತಮಿದಂ ತೇಽದ್ಯ ರೂಪಂ ಹಿ ದೃಷ್ಟಮ್ ॥

ತಾ॥ ಸ್ವಾಮಿನ್! ನಿತ್ಯಪೂರ್ಣಾಮೃತ ನಾಮಧೇಯನಾದ ಭಗವಂತನೇ! ನನ್ನ ಶರೀರವು ನಿನ್ನಲ್ಲಿ ಉತ್ಕಟಪ್ರೀತಿಯಿಂದ ದ್ರವೀಭೂತವಾಗಿ ಕರಗಿಹೋಗುವಂತೆ ನೀನು ನನಗೆ ಭೋಗ್ಯತಮನಾಗಿರುತ್ತೀಯೆ ವ್ರೀಹ್ಯಾದಿ ಸಸ್ಯಭರಿತವಾದ ಶ್ರೀ ಕುಮ್ಭಪುರೀ (ತಿರುಕ್ಕುಡನ್ದೈ) ಕ್ಷೇತ್ರದಲ್ಲಿ ಶಯನಮಾಡಿರುವ ನಿನ್ನನ್ನು ನಾನು ಕಂಡು ಅನುಭವಿಸಿದೆನು (ನನ್ನ ಭಾಗ್ಯವು ಎಂತಹುದು!)

(೨) ಎಮ್ಮಾನೇ ಯೆನ್ವೆಳ್ಳೈಮೂರ್ತ್ತೀ ಯೆನ್ನೈಯಾಳ್ವಾನೇ,
ಎಮ್ಮಾವುರುವುಮ್ ವೇಣ್ಡುಮಾಱ್ಱಾಲಾವಾಯೆಱ್ಱೇ,
ಶೆಮ್ಮಾಕಮಲಮ್ ಶೆೞುನೀರ್ಮಿಶೈಕಣ್ಮಲರುಮ್
ತಿರುಕ್ಕುಡನ್ದೈ,
ಅಮ್ಮಾಮಲರ್ ಕಣ್ವಳರ್ಕಿನ್ಱಾನೇ ಯೆನ್ನಾನ್ ಶೆಯ್ಗೇನೇ.

ಪ್ರ॥ ಎಮ್ಮಾನೇ-ನನ್ನ ಸ್ವಾಮಿಯೇ!, ಎನ್ ವೆಳ್ಳೈಮೂರ್ತ್ತೀ-ನನ್ನ ಶುದ್ಧ ಸತ್ತ್ವಮೂರ್ತಿಯೇ!, ಎನ್ನೈ ನನ್ನನ್ನು, ಆಳ್ವಾನೇ-ಆಳುವವನೇ, ಎಮ್ಮಾ ಉರುವುಮ್-ಎಷ್ಟು ಶ್ಲಾಘ್ಯವಾದ ರೂಪಗಳನ್ನೂ, ವೇಣ್ಡುಮಾಱ್ಱಾಲ್-ಇಚ್ಛಾ ಪ್ರಕಾರದಿಂದ, ಆವಾಯ್- ಅಂಗೀಕರಿಸಿ ನಿಂತಿರುವವನೇ, ಎಱ್ಱಿಲ್-ಸೌನ್ದರ್ಯದಿಂದ, ಏಱ್ಱೇ-ವೃಷಭಪ್ರಾಯನಾಗಿರುವ ಬಲಿಷ್ಠನೇ, ಶೆಮ್ಮಾಕಮಲಮ್-ಕೆಂಪಾಗಿ ದೊಡ್ಡದಾಗಿರುವ ತಾವರೆಹೂವುಗಳು, ಶೆೞುನೀರ್ಮಿಶೈ - ಸಮೃದ್ಧವಾದ ಜಲದ ಮೇಲೆ, ಕಣ್ಮಲರುಮ್ - ಸರ್ವತ್ರ ವಿಕಸಿತವಾಗಿರುವ, ತಿರುಕ್ಕುಡನ್ದೈ - ತಿರುಕ್ಕುಡನ್ದೈಯೆಂಬ ಕ್ಷೇತ್ರದಲ್ಲಿ, ಅಮ್ಮಾಮಲರ್ - ಆ ಶ್ಲಾಘ್ಯವಾದ ತಾವರೆ ಪುಷ್ಪದಂತೆ ಇರುವ, ಕಣ್-ನೇತ್ರಗಳು, ವಳರ್ಕಿನ್ಱಾನೇ - ಬೆಳೆಯುವಂತೆ ನಿದ್ರೆ ಮಾಡುತ್ತಿರುವವನೇ!, ನಾನ್-ನಾನು, ಎನ್ಶೆಯ್ಗೇನ್-ಏನುಮಾಡಲಿ? (ಈ ನಿನ್ನ ಕಣ್ಣುಗಳೆಂಬ ಎರಡು ತಾವರೆಪುಷ್ಪಗಳು ಮಾತ್ರ ನನ್ನನ್ನು ನೋಡುವಂತೆ ವಿಕಸಿಸುವುದಿಲ್ಲ—ನಾನೇನುಮಾಡಲಿ?)

( ಸೌ-ಗಾ-ರ || )—

ಮನ್ನಾಥ! ತ್ವಂ ಶುಭಾಙ್ಗೋ ಮಮ ಪತಿರಖಿಲಾನನ್ತರೂಪೋಽಸಿ ದಿವ್ಯ-
ಶ್ರೀಮದ್ರಮ್ಯಾಕೃತಿ ಶ್ರೀವೃಷಭ! ಶುಭಮಹಾಮ್ಭೋಜಸೌನ್ದರ್ಯಪೂರಾಶಾ|
ಶ್ರೀಮತ್ಯಾಂ ಕುಮ್ಭಪುರ್ಯಾಂ ಸಾಧುಭರಿತಸರೋಜಾಕ್ಷ! ಸಿದ್ಧಾಸಿ ನಾಥ!
ತ್ವದ್ಭಕ್ತೋಽಹಂ ಕಿಮದ್ಯ ಸ್ವಯಮಿಹ ಕರವೈ? ಬ್ರೂಹಿ ವಿಷ್ಣೋ!
ದಯಾಳೋ! ||

ತಾ|| ನನ್ನ ಸ್ವಾಮಿಯೇ! ನನ್ನ ಶುದ್ಧಸತ್ತ್ವಮೂರ್ತಿಯೇ! ನನ್ನನ್ನು ಆಳುವವನೇ! ಅನೇಕ ರೂಪಗಳನ್ನು ಸ್ವೇಚ್ಛೆಯಿಂದ ಅಂಗೀಕರಿಸುವವನೇ! ಸೌನ್ದರ್ಯನಿಧಿಯಾದ ವೃಷಭಪ್ರಾಯನೇ! ವಿಕಸಿತವಾದ ಕೆಂದಾವರೆ ಹೂವುಗಳಿಂದ ಭರಿತವಾದ ಶ್ರೀ ಕುಮ್ಭಪುರಿಯಲ್ಲಿಶಯನಮಾಡಿರುವವನೇ! ಸರೋಜಾಕ್ಷನೇ! ನಾನು ಏನುಮಾಡಲಿ? (ನಿನ್ನ ಕಣ್ಣುಗಳೆಂಬ ತಾವರೆಪುಷ್ಪಗಳು ಮಾತ್ರ ವಿಕಸಿತವಾಗಿ ನನ್ನನ್ನು ಕಟಾಕ್ಷಿಸದೆ ಇವೆ—ಏನುಮಾಡಲಿ?—ಎಂದು ಭಾವವು)

(೩) ಎನ್ನಾನ್ ಶೆಯ್‌ಗೇನ್ ಯಾರೇ ಕಳೈಕಣ್ ಎನ್ನೈಯೆನ್
ಶೆಯ್‌ಕಿನ್ಱಾಯ್,
ಉನ್ನಾಲಲ್ಲಾಲ್ ಯಾವರಾಲುಮೊನ್ಱುಮ ಕುಱೈವೇಣ್ಡೇನ್,
ಕನ್ನಾರ್ ಮದಿಳ್‌ಶೂೞ್ ಕುಡನ್ದೈಕ್ಕಿಡನ್ದಾಯ್ ಅಡಿಯೇನರುವಾಣಾಳ್
ಶೆನ್ನಾಳೆನ್ನಾಳನ್ನಾಳುನತಾಳ್ ಪಿಡಿತ್ತೇ ಶೆಲಕ್ಕಾಣೇ

ಪ್ರ|| ನಾನ್—ನಾನು, ಎನ್‌ಶೆಯ್‌ಗೇನ್ ಏನು ಮಾಡಬಲ್ಲೆನು? ಕಳೈಕಣ್—(ಚೇತನರಿಗೆ) ರಕ್ಷಕರು, ಯಾರ್—ಯಾರು? ಎನ್ನೈ—(ಅಶಕ್ತನಾದ) ನನ್ನನ್ನು, ಎನ್ ಶೆಯ್‌ಕಿನ್ಱಾಯ್- ಏನು ಮಾಡಬೇಕೆಂದು ಇದ್ದೀಯೋ? ಉನ್ನಾಲಲ್ಲಾಲ್—ನಿನ್ನಿಂದ ಹೊರತು, ಯಾವರಾಲುಮ್—ಇನ್ನು ಯಾರಿಂದಲೂ, ಒನ್ಱುಮ್‌ಕುಱೈ—ಒಂದು ಅಪೇಕ್ಷಿತವನ್ನೂ, ವೇಣ್ಡೇನ್—(ನಾನು) ಬೇಡುವುದಿಲ್ಲ ಕನ್ ಆರ್—ಸಾನ್ದ್ರವಾಗಿ ಘನತೆಯಿಂದ ಪೂರ್ಣವಾದ, ಮದಿಳ್—ಪ್ರಾಕಾರಗಳಿಂದ, ಶೂೞ್—ಪರಿವೃತವಾದ, ಕುಡನ್ದೈ—ತಿರುಕ್ಕುಡನ್ದೈಯಲ್ಲಿ, ಕಿಡನ್ದಾಯ್—ಶಯನಮಾಡಿರುವವನೇ!, ಅಡಿಯೇನ್—ನಿನಗೆ ದಾಸನಾದ ನನ್ನ, ಅರು ಆತ್ಮವಸ್ತುವು, ವಾಣಾಳ್ (ವಾೞ್+ನಾಳ್)-ಉಜ್ಜೀವಿಸುವ ಕಾಲವು, ಶೆನ್ನಾಳ್ (ಶೆಲ್+ನಾಳ್)-ವರ್ತಮಾನ ಕಾಲವು,

ಎನ್ನಾಳ್-ಎಷ್ಟುದಿನಗಳೋ, ಅನ್ನಾಳ್ - ಆ ಕಾಲವೆಲ್ಲಾ, ಉನತಾಳ್-ನಿನ್ನ ಪಾದಗಳನ್ನು, ಪಿಡಿತ್ತೇ-ಹಿಡಿದುಕೊಂಡೇ, ಶೆಲಕ್ಕಾಣೇ-(ನನ್ನ ಕಾಲವು) ಕಳೆಯುವಂತೆ ಕಟಾಕ್ಷಿಸು.

( ಸ-ಗಾ-ರ || )—

ಕಿಂ ವಾ ಕುರ್ಯಾಂ ? ಮಮಾದ್ಯ ಸ್ವಯಮವನರತಃ ಕೋಽಸ್ತಿ ?
ಕಿಂ ವಾ ಕರೋಷಿ ?
ತ್ವತ್ತಸ್ಸಾನ್ನಿಧ್ಯಾದ್ವಿನಾಽಹಂ ನ ಕಿಮಪಿ ಚ ಕುತೋಽಪ್ಯರ್ಥಯೇ
ವಾಞ್ಛಿತಂ ಮೇ |
ಶ್ರೀಮತ್ಯಾಂ ಕುಮ್ಭಪುರ್ಯಾಮತಿದೃಢವಲಯೈರಾವೃತಾಯಾಂ ಶಯಾನ !
ತ್ವತ್ಪಾದಾಬ್ಜೇ ತು ಭಕ್ತ್ಯಾ ಕುರು ಮಮ ಭರಿತಾನ್ ವಾಸರಾನಸ್ಯಶೇಷಾನ್||

ತಾ|| ನಾನು ಏನು ಮಾಡಬಲ್ಲೆನು ? ನನಗೆ ಈಗ ರಕ್ಷಕರು ಯಾರು ? ಅಶಕ್ತನಾದ ನನ್ನನ್ನು ನೀನು ಏನುಮಾಡಬೇಕೆಂದು ಇದ್ದೀಯೇ ? ನಿನ್ನಿಂದ ಹೊರತು ಇನ್ನು ಯಾರಿಂದಲೂ ನಾನು ಯಾವುದನ್ನೂ ಬೇಡುವುದಿಲ್ಲ. ಘನವಾದ ಪ್ರಾಕಾರಗಳಿಂದ ಪರಿವೃತವಾದ ಶ್ರೀ ಕುಂಭಪುರಿಯಲ್ಲಿ ಶಯನಮಾಡಿರುವವನೇ ! ನನ್ನ ಆತ್ಮವಸ್ತುವು ಉಜ್ಜೀವಿಸುವ ಕಾಲವು ಎಷ್ಟು ದಿನಗಳವರೆಗೋ, ಆ ಕಾಲದಲ್ಲೆಲ್ಲಾ (ನಿತ್ಯವಾಗಿ) ನಿನ್ನ ಪಾದಗಳನ್ನು ನಾನು ಹಿಡಿದುಕೊಂಡೇ ಇರುವಂತೆ ಕಟಾಕ್ಷಿಸು.

(ೞ) ಶೆಲಕ್ಕಾಣ್ ಕಿಱ್ಪಾರ್ ಕಾಣುಮಳವುಮ್ ಶೆಲ್ಲುಮ್
ಕೀರ್ತ್ತಿಯಾಯ್,
ಉಲಪ್ಪಿಲಾನೇ ಯೆಲ್ಲಾವುಲಕುಮುಡೈಯ ವೊರುಮೂರ್ತ್ತಿ,
ನಲತ್ತಾಲ್ ಮಿಕ್ಕಾರ್ ಕುಡನ್ದೈಕ್ಕಿಡನ್ದಾಯುನ್ನೈಕ್
ಕಾಣ್ಪಾನ್,
ಅಲಪ್ಪಾಯ್, ಆಕಾಶತ್ತೈ ನೋಕ್ಕಿ ಯೞುವನ್ ತೊೞುವನೇ.

ಪ್ರ|| ಶೆಲ-ಮೇಲಕ್ಕೆ ಹೋಗಲು, ಕಾಣ್‌ಕಿಱ್ಪಾರ್ (ದಾರಿಯನ್ನು) ಕಾಣಬಲ್ಲವರು (ಊರ್ಧ್ವಲೋಕಗಳಿಗೆ ಹೋಗಬಲ್ಲವರು), ಕಾಣುಮಳವುಮ್-ದೃಷ್ಟಿಗೆ ಗೋಚರವಾಗುವವರೆಗೂ, ಶೆಲ್ಲುಮ್-ಹೋಗುತ್ತಿರುವಂತೆ ವೈಭವವುಳ್ಳ, ಕೀರ್ತ್ತಿಯಾಯ್-ಗುಣವಿಭೂತ್ಯಾದಿ ಕೀರ್ತಿಯುಳ್ಳವನೇ !, ಉಲಪ್ಪು ಇಲಾನೇ-ಅನ್ತ

ವಿಲ್ಲದವನೇ, ಎಲ್ಲಾ ಉಲಕುಮ್-ಸರ್ವಲೋಕಗಳನ್ನೂ, ಉಡೈಯ-ದಾಸ್ಯವೃತ್ತಿ ಯಲ್ಲಿ ಉಳ್ಳ, ಒರುಮೂರ್ತ್ತಿ-ಅದ್ವಿತೀಯವಾದ ಒಂದು ಮೂರ್ತಿಯಾದವನೇ!, ನಲತ್ತಾಲ್ ಮಿಕ್ಕಾರ್ - ಭಕ್ತಿಪ್ರಕರ್ಷವುಳ್ಳವರು ವಾಸಮಾಡುವ, ಕುಡನ್ದೈ-ತಿರುಕ್ಕುಡನ್ದೈಯೆಂಬ ಕ್ಷೇತ್ರದಲ್ಲಿ, ಕಿಡನ್ದಾಯ್ - ಶಯನಮಾಡಿರುವವನೇ!, ಉನ್ನೈ-(ಇಂತಹ ಪರಾತ್ಪರನಾಗಿ ಸರ್ವಸುಲಭನಾದ) ನಿನ್ನನ್ನು, ನಾ-ನಾನು, ಕಾಣ್ಬಾನ್-ಕಂಡು ಅನುಭವಿಸುವುದಕ್ಕೆ, ಅಲಪ್ಪಾಯ್ - ಅತ್ಯನ್ತ ಆಶೆಯಿಂದ ಶ್ರಾನ್ತನಾಗಿ, ಆಕಾಶತ್ತೈನೋಕ್ಕಿ-ಆಕಾಶವನ್ನು ನೋಡಿ, ಅೞುವನ್-ಅಳುತ್ತ, ತೊೞುವನ್-ಪ್ರಪನ್ನರಂತೆ ಅಂಜಲಿಮಾಡುವೆನು.

( ಸ-ಗಾ- ೮ ॥ )—

ಮಾಹಾತ್ಮ್ಯಂ ತೇಽಸ್ತ್ಯಪಾರಂ ವಿಶದಮತಿಜುಷಾಂ ದಿವ್ಯದೃಷ್ಟೇರತೀತಂ
ನಿಸ್ಸೀಮಂ ಸರ್ವಲೋಕಾತ್ಮಕನಿಜವಪುಷಾ ದಿವ್ಯಮೂರ್ತೇ ವಿಭಾಸಿ ।
ಕುರ್ವೇಽಹಂ ಕುಮ್ಭಪುರ್ಯಾಂ ಸುಮಹಿತಭಗವದ್ಭಕ್ತವರ್ಗಾಶ್ರಿತಾಯಾಂ
ಸುಪ್ತಂ ತ್ವಾಂ ದ್ರಷ್ಟುಕಾಮೋ ಗಗನಮಪಿ ವಿಲೋಕ್ಯಾಞ್ಜಲಿಂ
ಕ್ರನ್ದನಂ ಚ ॥

ತಾ ॥ ಊರ್ಧ್ವಲೋಕಗಾಮಿಗಳಿಗೆ ದೃಷ್ಟಿ ಗೋಚರವಾಗುವವರೆಗೂ ಹೋಗುತ್ತಿರುವಂತೆ ಗುಣವಿಭೂತ್ಯಾದಿ ವಿಸ್ತರವುಳ್ಳವನೇ! ಅನ್ತವಿಲ್ಲದವನೇ! ಸಕಲ ಲೋಕಗಳನ್ನೂ ದಾಸ್ಯವೃತ್ತಿಯಲ್ಲಿ ನಿಯಮಿಸುವ ಅದ್ವಿತೀಯ ಮೂರ್ತ್ತಿಯೇ! ಭಕ್ತಿಪ್ರಕರ್ಷವುಳ್ಳ ಮಹಾತ್ಮರು ವಾಸಮಾಡುವ ಶ್ರೀ ಕುಂಭ ಪುರಿಯಲ್ಲಿ ಶಯನಮಾಡಿರುವವನೇ! ನಿನ್ನನ್ನು ನಾನು ಕಂಡು ಅನುಭವಿಸಬೇಕೆಂಬ ಆಶೆಯಿಂದ ಶ್ರಾನ್ತನಾಗಿ ಆಕಾಶವನ್ನು ನೋಡಿ ಅಳುತ್ತ ಪ್ರಪನ್ನರಂತೆ ಅಂಜಲಿ ಮಾಡುತ್ತ ನಿನ್ನನ್ನೇ ಸೇವಿಸುವೆನು.

(೫) ಅೞುವನ್ ತೊೞುವನಾಡಿ ಕ್ಕಾಣ್ಬನ್ ಪಾಡಿಯಲಱ್ಱುವನ್,
ತೞುವಲ್‌ವಿನೈಯಾಲ್ ಪಕ್ಕಮ್‌ನೋಕ್ಕಿ ನಾಣಿಕ್ಕವಿೞ್ನ್ದಿರುಪ್ಪನ್,
ಶೆೞುವೊಣ್‌ಪೞನ ಕ್ಕುಡನ್ದೈಕ್ಕಿಡನ್ದಾಯ್ ಶೆನ್ದಾಮರೈಕ್ಕಣ್ಣಾ.
ತೊೞುವನೇನೈ ಯುನತಾಳ್ ಶೇರುಮ್ ವಕೈಯೇ ಶೂೞ್‌ಕಣ್ಡಾಯ್.

ಪ್ರ॥ ಅೞುವನ್-ನಾನು ಅಳುತ್ತಿರುವೆನು, ತೊೞುವನ್-(ನಿನ್ನ)ಸೇವೆ ಮಾಡುವೆನು, ಆಡಿಕ್ಕಾಣ್ಬನ್-ನರ್ತನಮಾಡಿ ನೋಡುವೆನು, ಪಾಡಿ ಅಲಱ್ಱುವನ್-ಹಾಡಿ ಪ್ರಲಾಪಮಾಡಿ ಶ್ರಾನ್ತನಾಗುವೆನು. ತೞು-ನನ್ನನ್ನು ಸ್ಪರ್ಶಿಸಿ ಅಂಟಿಕೊಂಡು

ಇರುವ, ವಲ್ವಿನೈಯಾಲ್-ಪ್ರಬಲವಾದ ಪಾಪದಿಂದ, ಪಕ್ಕಮ್ನೋಕ್ಕಿ-ಪಾರ್ಶ್ವ ದಲ್ಲಿ (ನೀನು ಬರುತ್ತೀಯೋ ಎಂದು) ನೋಡಿ, ನಾಣಿ – ಲಜ್ಜೆಯಿಂದ ಕೂಡಿ, ಕವಿழ்ನ್ದಿರುಪ್ಪೇ-ಕೆಳಗೆ (ತಲೆಕೆಳಗಾಗಿ) ಬಿದ್ದಿರುವೆನು ಶೆழு-ಸಮೃದ್ಧವಾಗಿ, ಒಣ್-ದರ್ಶನೀಯವಾದ, ಪழன-ನೀರುಳ್ಳ ಸಸ್ಯಕ್ಷೇತ್ರಗಳುಳ್ಳ, ಕುಡನ್ದೈ-ತಿರುಕ್ಕುಡನ್ದೈಯಲ್ಲಿ, ಕಿಡನ್ದಾಯ್ – ಶಯನಮಾಡಿರುವವನೇ !, ಶೆನ್ದಾಮರೈ ಕ್ಕಣ್ಣಾ – ಕೆಂದಾವರೆಯಂತೆ ಕಣ್ಣುಗಳುಳ್ಳವನೇ !, ತೊழுವನೇನೈ – (ಅತ್ಯನ್ತ ಕೃಪಣನಾಗಿರುವ) ದಾಸಭೂತನಾದ ನನ್ನನ್ನು, ಉನತಾಳ್-ನಿನ್ನ ಪಾದಗಳನ್ನು, ಶೇರುಮ್ವಕೈಯೇ – ಸೇರುವಂತೆಮಾಡುವ ಉಪಾಯವನ್ನು ನೀನೇ, ಶೂழ ಕಣ್ಡಾಯ್-ವ್ಯಾಪಿಸಿ (ಉಪಾಯವನ್ನು) ಪರಿಶೀಲಿಸಿ ನೋಡು.

( ಸ-ಗಾ-ರ || )—

ಕ್ರನ್ದಾಮ್ಯೇವಾರ್ಚಯಾಮಿ ಸ್ವಯಮಹಮನಿಶಂ ನರ್ತನೈಶ್ಚಾಪಿ ಗಾನೈ-
ಶ್ಶ್ರಾನ್ತೋಽಸ್ಮಿ ತ್ವಾಂ ದಿದೃಕ್ಷುರ್ಮಮ ಕಲುಷಭರಾತ್ ಪಾರ್ಶ್ವತೋ
ಲಜ್ಜಿತಸ್ಸ್ಯಾಮ್ |
ರಮ್ಯಾಯಾಂ ಕುಮ್ಭಪುರ್ಯಾಂ ಸುರುಚಿರಮಹಿತಕ್ಷೇತ್ರಸಸ್ಯಾವೃತಾಯಾಂ
ಪದ್ಮಾಕ್ಷ ! ತ್ವಾಂ ಶಯಾನಂ ಶ್ರಿತಮಿಮಮಧುನಾ ಕಾರಯ ತ್ವಂ
ಹರೇ ! ಮಾಮ್ ||

ತಾ|| ನಾನು (ನಿನ್ನನ್ನು ನೋಡಬೇಕೆಂದು) ಅಳುತ್ತಿರುವೆನು, ನಿನಗೆ ಅಂಜಲಿಮಾಡುವೆನು, ನರ್ತನಮಾಡಿ ನಿನ್ನನ್ನು ನಿರೀಕ್ಷಿಸುವೆನು, ಹಾಡಿ ಶ್ರಾನ್ತ ನಾಗುವೆನು ನನ್ನ ಪ್ರಬಲವಾದ ಪಾಪದಿಂದ ಪಕ್ಕದಲ್ಲಿ ನೀನು ಬರುತ್ತೀಯೋ ಎಂದು ನೋಡಿ, ಲಜ್ಜೆಯಿಂದ ತಲೆಕೆಳಗಾಗಿ ಬಿದ್ದಿರುವೆನು. ದರ್ಶನೀಯವಾದ ಸಸ್ಯಕ್ಷೇತ್ರಗಳುಳ್ಳ ಶ್ರೀ ಕುಂಭಪುರಿಯಲ್ಲಿ ಶಯನಮಾಡಿರುವ ಪದ್ಮಾಕ್ಷನೇ ! ನಿನ್ನ ಪಾದಗಳನ್ನು ನಾನು ಸೇರುವ ಉಪಾಯವನ್ನು ಪರಿಶೀಲಿಸಿ ನೋಡು.

(೭) ಶೂழ்ಕಣ್ಡಾಯ್ ತೊಲ್ಲೈವಿನೈಯೈ
ಯಱುತ್ತುನ್ನಡಿಶೇರುಮಾ,
ಊழ்ಕಣ್ಡಿರುನ್ದೇತೂರಾಕ್ಕುழிತೂರ್ತ್ತೆನೈ ನಾಳಕನ್ಱಿರುಪ್ಪೇ,
ವಾழ் ತೊಲ್ ಪುಕಳಾರ್ ಕುಡನ್ದೈಕ್ಕಿಡನ್ದಾಯ್
ವಾನೋರ್ಕೋಮಾನೇ,
ಯಾழிನಿಶೈಯೇ ಯಮುದೇ ಯಱಿವಿನ್ಪಯನೇ ಯರಿಯೇಱೇ,

ಪ್ರ|| ವಾಝ್-ಬಾಳೋಣದರಿಂದ, ತೊಲ್-ಸ್ವಾಭಾವಿಕವಾದ, ಪುಕಝಾರ್-ಕೀರ್ತಿಯುಳ್ಳವರ, ಕುಡನ್ದೈ - ತಿರುಕ್ಕುಡನ್ದೈಯಲ್ಲಿ, ಕಿಡನ್ದಾಯ್ - ಶಯನ ಮಾಡಿರುವವನೇ, ವಾನೋರ್-ನಿತ್ಯಸೂರಿಗಳಿಗೂ, ಕೋಮಾನೇ-ಅಧಿಪತಿಯಾದವನೇ, ಯಾಝಿನ್-ವೀಣೆಯ, ಇಶೈಯೇ-ಸ್ವರದಂತೆಯೇ ಭೋಗ್ಯನಾಗಿ, ಅಮುದೇ-ಅಮೃತರೂಪನೇ, ಅಱಿವಿನ್ ಪಯನೇ-ಜ್ಞಾನದ ಫಲರೂಪನೇ, ಅರಿಯೇಱೇ-ಸಿಂಹಶ್ರೇಷ್ಠದಂತೆ ಬಲಿಷ್ಠನಾದವನೇ, ಉನ್ ಅಡಿಶೇರುಮ್ - ನಿನ್ನ ಪಾದಗಳನ್ನು ಸೇರುವ, ಊಝ್-ನನ್ನ ಅನಾದಿ ಸ್ವಭಾವವನ್ನು, ಕಣ್ಡಿರುನ್ದೇ - ಕಂಡು ಇದ್ದೇ, ತೂರಾಕ್ಕುಝಿ - ತುಂಬುವುದಕ್ಕೆ ಅಶಕ್ಯವಾದ (ದುರಾಶೆಯೆಂಬ) ಹಳ್ಳವನ್ನು, ತೂರ್ತ್ತು-(ದುರ್ವಿಷಯಗಳಿಂದ) ತುಂಬಿ, ಎನ್ನೈನಾಳ್-ಎಷ್ಟು ದಿನಗಳು, ಅಕನ್ಱು-(ನಿನ್ನನ್ನು) ಬಿಟ್ಟು, ಇರುಪ್ಪನ್ - ಇರಬಲ್ಲೆನು? ಎನ್ ತೊಲ್ಲೈವಿನೈಯೈ-ನನ್ನ ಅನಾದಿ ಪಾಪವನ್ನು, ಅಱುತ್ತು - ಭೇದಿಸಿ, (ಉನ್ ಅಡಿಶೇರುಮ್) ಶೂಝ್ ಕಣ್ಡಾಯ್-(ನಿನ್ನ ಪಾದಗಳನ್ನು ನಾನು ಸೇರುವ) ಉಪಾಯವನ್ನು ಕಂಡುಹಿಡಿ.

( ಸ-ಗಾ-೮ || )—

ಸೂರೀನ್ದ್ರ! ಕುಮ್ಭಪುರ್ಯಾಂ ವಸತಿ ಕಿಲ ಭವಾನ್ ಭಾಗ್ಯವದ್ಭಿಸ್ಸುಸೇವ್ಯ-
ಶ್ಶ್ರೋತ್ರಸ್ಯಾತ್ಯನ್ತಭೋಗ್ಯಾಮೃತನಿಧಿರುಚಿತಂ ಸತ್ಫಲಂ ಮಾನಸಸ್ಯ |
ಸಿಂಹಶ್ರೇಷ್ಠ! ತ್ವದೀಯಂ ಪದಯುಗಳಮಹಂ ಪ್ರಾಪ್ತುಮಪ್ಯರ್ಹ ಏವಂ
ದುಷ್ಪ್ರಾಶಾಘೋರಕೂಪೇ ನಿಪತಿತ ಇತಿ ಯನ್ಮೇ ಕದಾವೋದ್ಧೃತಿಸ್ಸ್ಯಾತ್? ||

ತಾ|| ಉಜ್ಜೀವಿತರಾದ ಭಕ್ತಾತ್ಮರು ವಾಸಮಾಡುವ ಶ್ರೀ ಕುಂಭಪುರಿಯಲ್ಲಿ ಶಯನಮಾಡಿರುವವನೇ! ನಿತ್ಯಸೂರೀಶ್ವರನೇ! ವೀಣಾಸ್ವರದಂತೆ ಭೋಗ್ಯನಾಗಿರುವ ಅಮೃತರೂಪನೇ! ಜ್ಞಾನದ ಫಲರೂಪನೇ! ಸಿಂಹಶ್ರೇಷ್ಠದಂತೆ ಬಲಿಷ್ಠನೇ! ನಿನ್ನ ಪಾದಗಳನ್ನೇ ನಾನು ಸೇರಬೇಕೆಂಬುದನ್ನು ತಿಳಿದು ಇದ್ದಾಗ್ಯೂ ನನ್ನ ಅಗಾಧವಾದ ದುರಾಶಾಕೂಪವನ್ನು ದುರ್ವಿಷಯಗಳಿಂದ ತುಂಬಿ, ನಾನು ನಿನ್ನನ್ನು ಬಿಟ್ಟು ಹೀಗೆ ಎಷ್ಟು ದಿನಗಳು ಇರಬಲ್ಲೆನು? ನನ್ನ ಅನಾದಿ ಪಾಪವನ್ನು ಭೇದಿಸಿ, ನಾನು ನಿನ್ನ ಪಾದಗಳನ್ನು ಸೇರುವುದಕ್ಕೆ ಉಪಾಯವನ್ನು ಕಂಡುಹಿಡಿ.

(೨) ಅರಿಯೇಱೇಯೆನ್ನಮ್ ಪೊಱ್ಕುಡರೇ ಶೆಙ್ಗಣ್‌ಕರುಮುಕಿಲೇ,
ಎರಿಯೇ ಪವಳಕ್ಕುನ್ಱೇ ನಾಲ್‌ತೋಳೆನ್ದಾಯುನದರುಳೇ,
ಪಿರಿಯಾವಡಿಮೈಯೆನ್ನೈಕ್ಕೊಣ್ಡಾಯ್ ಕುಡನ್ದೈತ್ತಿರುಮಾಲೇ,
ತರಿಯೇನಿನಿಯುನ್ ಶರಣಮ್ ತನ್ದೆನ್ ಶನ್ಮಮ್ ಕಳೈಯಾಯೇ.

ಪ್ರ॥ ಅರಿಯೇಱ್ರ–ಸಿಂಹಶ್ರೇಷ್ಠನೇ !, ಎಱ ಅಮ್ ಪೊಱ ಶುಡರೇ–ನನ್ನ ರಮಣೀಯವಾದ ಬಂಗಾರದಂತೆ ಕಾಂತಿಯುಳ್ಳವನೇ, ಶೆನ್ ಕಣ್–ಕೆಂಪಾದ ಕಣ್ಣುಗಳುಳ್ಳ, ಕರುಮುಕಿಲೇ–ನೀಲಮೇಘವೇ !, ಎರಿಯೇ–(ಶತ್ರುಗಳಿಗೆ) ಅಗ್ನಿ ಪ್ರಾಯನೇ, ಪವಳಕ್ಕುನ್ಱೇ – ಹವಳದ ಪರ್ವತದಂತೆ ಇರುವವನೇ !, ನಾಲ್ ತೋಳ್-ಚತುರ್ಭುಜನಾದ, ಎನ್ನಾಯ್–ನನ್ನ ಸ್ವಾಮಿಯೇ, ಉನದು ಅರುಳ್-ನಿನ್ನ ಕೃಪೆಯನ್ನು, ಪಿರಿಯಾ–ಎಂದಿಗೂ ಬಿಟ್ಟಿರದಂತೆ, ಅಡಿಮೈ – (ವಾಚಿಕಾದಿ) ಕೈಂಕರ್ಯಗಳನ್ನು, ಎನ್ನೈ–ನನ್ನ ಮೂಲಕ, ಕೊಣ್ಡಾಯ್–(ನೀನು) ಸ್ವೀಕರಿಸಿದವ ನಾಗಿ, ಕುಡನ್ದೈ – ತಿರುಕ್ಕುಡನ್ದೈಯಲ್ಲಿ, ತಿರುಮಾಲೇ – ಲಕ್ಷ್ಮೀಸಹಿತನಾಗಿ ಇರುವವನೇ !, ಇನಿ–ಇನ್ನುಮೇಲೆ, ತರಿಯೇಱ–(ನಾನು) ಪ್ರಾಣವನ್ನು ಧರಿಸಿ ಇರಲಾರೆನು. ಉಱ ಶರಣಮ್–ನಿನ್ನ ಚರಣಗಳನ್ನು, ತನ್ದು – ಕೊಟ್ಟು, ಎಱ ಶನ್ಮಮ್–ನನ್ನ ಜನ್ಮವನ್ನು, ಕಳೈಯಾಯೇ–ನಿರ್ಮೂಲಮಾಡು.

( ಸ–ಗಾ–ರ ॥ )—

ಸಿಂಹೇನ್ದ್ರ ! ತ್ವಂ ಸುರಮ್ಯಂ ಕನಕಮಯಮಹಾಜ್ಯೋತಿರೇವಾಸಿ ಸತ್ಯಂ
ಪದ್ಮಾಕ್ಷೋ ನೀಲಮೇಘೋ ರಿಪುಕುಲದಹನಸ್ತ್ವಂ ಪ್ರವಾಳಾದ್ರಿರೇವ |
ಸ್ವಾಮೀ ಮೇ ತ್ವಂ ಚತುರ್ಬಾಹ್ವನುಗುಣವಿಭವಸ್ತ್ವತ್ಕೃಪಾ ಮೇಽಸ್ತಿ ದಾಸ್ಯೇ
ಶ್ರೀಶ ! ತ್ವಂ ಕುಮ್ಭಪುರ್ಯಾಂ ವಿಲಸಸಿ ನ ಸಹೇ ! ಹನ್ತ ! ಮುಕ್ತಿಂ ಪ್ರದೇಹಿ ||

ತಾ॥ ಸಿಂಹಶ್ರೇಷ್ಠನೇ ! ಸುವರ್ಣಕಾಂತಿಯುಳ್ಳವನೇ ! ಪದ್ಮಾಕ್ಷನಾದ ನೀಲಮೇಘವರ್ಣನೇ ! ಶತ್ರುಗಳಿಗೆ ಅಗ್ನಿಪ್ರಾಯನೇ ! ಪ್ರವಾಳಾದ್ರಿ ಸದೃಶನೇ ! ಚತುರ್ಭುಜನಾದ ನನ್ನ ಸ್ವಾಮಿಯೇ ! ನಿನ್ನ ಕೃಪೆಯನ್ನು ನಾನು ಎಂದಿಗೂ ಬಿಟ್ಟಿರದಂತೆ ನನ್ನ ವಾಚಿಕ ಕೈಂಕರ್ಯವನ್ನು ನೀನು ಸ್ವೀಕರಿಸಿ ಶ್ರೀ ಕುಂಭ ಪುರಿಯಲ್ಲಿ ಲಕ್ಷ್ಮೀಸಹಿತನಾಗಿ ಪ್ರಕಾಶಿಸುತ್ತೀಯಷ್ಟೆ. ನಾನು ಇನ್ನುಮೇಲೆ ನಿನ್ನನ್ನು ಬಿಟ್ಟು ಪ್ರಾಣವನ್ನು ಧರಿಸಿ ಇರಲಾರೆನು ನಿನ್ನ ಚರಣಗಳನ್ನು ನನಗೆ ತಂದು ನನ್ನ ಜನ್ಮವನ್ನು (ಸಂಸಾರಬನ್ಧವನ್ನು) ನಿರ್ಮೂಲಮಾಡು. (ನನಗೆ ಮುಕ್ತಿಯನ್ನು ಕೊಡು )

(೮) ಕಳ್ಳೈವಾಯ್ ತುನ್ಬಮ್ ಕಳ್ಳೈಯಾದೊಳಿವಾಯ್
ಕಳೈಕಣ್ಮತ್ರಿಲೇನ್,
ವಳ್ಳೈವಾಯ ನೇಮಿಪ್ಪಡೈಯಾಯ್ ಕ್ಕುಡನ್ದೈಕ್ಕಿಡನ್ದ
ಮಾಮಾಯಾ,
ತಳರಾವುಡಲಮೆನದಾವಿ ಶರಿನ್ದು ಪೋಮ್ಪೋದು
ಇಳ್ಳೈಯಾದುನ ತಾಳೊರುಙ್ಗಪ್ಪಿಡಿತ್ತು ಪೋದವಿಶೈನೀಯೇ.

ಪ್ರ|| ತುನ್ಬಮ್-(ನನ್ನ) ದುಃಖವನ್ನು, ಕಳೈವಾಯ್-(ನೀನು) ನಾಶಪಡಿಸು, (ಅಥವಾ) ಕಳೈಯಾದೊಳಿವಾಯ್ – ನಾಶಪಡಿಸದೆ ಇರು ಕಳೈಕಣ್ – (ನನ್ನ ದುಃಖನಿವಾರಕವಾದ) ವಸ್ತುವನ್ನು, ಮತ್ತು ಇಲೇನ್-ಬೇರೆ ಒಂದನ್ನೂ (ನಾನು) ಪಡೆದು ಇಲ್ಲ. ವಳೈವಾಯ್–ಸುತ್ತಲೂ ಬಾಯಿಯುಳ್ಳ, ನೇಮಿ-ಚಕ್ರವನ್ನು, ಪಡೈಯಾಯ್ – ಆಯುಧವಾಗಿ ಉಳ್ಳವನೇ, ಕುಡನ್ದೈಕ್ಕಿಡನ್ದ–ತಿರುಕ್ಕುಡನ್ದೈ ಯಲ್ಲಿ ಶಯನಮಾಡಿರುವ, ಮಾಮಾಯಾ–ಮಹಾ ಮಾಯಾಚೇಷ್ಟಿತನೇ (ಅದ್ಭುತ ಸೌನ್ದರ್ಯಯುಕ್ತನೇ), ಉಡಲಮ್–ಶರೀರವು, ತಳರಾ–ಶಿಥಿಲವಾಗಿ, ಎನದು ಆವಿ– ನನ್ನ ಪ್ರಾಣವು, ಶರಿನ್ದು ಪೋಮ್ಪೋದು-ನಾಶಹೊಂದುವ ಇಂತಹ ಕಾಲದಲ್ಲಿ, ಇಳೈಯಾದು–ಚಿತ್ತದೌರ್ಬಲ್ಯವುಂಟಾಗದಂತೆ, ಉನತಾಳ್-ನಿನ್ನ ಪಾದಗಳನ್ನೇ, ಒರುಙ್ಗಪ್ಪಿಡಿತ್ತು - (ಉಪಾಯವಾಗಿಯೂ ಉಪೇಯವಾಗಿಯೂ) ಬಲವಾಗಿ ಹಿಡಿದು, ಪೋದ-ಹೋಗುವಂತೆ, ನೀಯೇ ಇಶೆ –ನೀನೇ ಸಮ್ಮತಿಸು (ನನಗೆ ಅನುಮತಿಯಂ ಕೊಡು).

( ಸ–ಗಾ–ರ || )—

ಮಾಯಿಾ ತ್ವಂ ಚಕ್ರಪಾಣಿರ್ವಿಲಸಸಿ ಭಗವನ್ ! ಕುಮ್ಭಪುರ್ಯಾಂ ಶಯಾನಃ
ಕಿಂ ದುಃಖಂ ನಾಶಯೇರ್ಮೇ ? ಕಿಮುತ ನ ಚ ತಥಾ ? ನಾಸ್ತಿ
ಚಾನ್ಯಾ ಗತಿರ್ಮೇ |
ದೇಹಾನ್ಮತ್ಪ್ರಾಣಯಾನೇ ನ ಭವತು ಪತನಂ ಮೇ ಮುರಾರೇ ! ಪದಾಬ್ಜಂ
ಭದ್ರಂ ತೇ ಮೇ ಶರಣ್ಯಂ ವಿತರತು ಚ ಭವಾನ್ ನಿತ್ಯಸೇವ್ಯಂ ಚ
ಭೋಗ್ಯಮ್ ||

ತಾ|| ಮಾಯಾಚೇಷ್ಟಿತನಾದ ಚಕ್ರಪಾಣಿಯೇ! ಶ್ರೀ ಕುಂಭಪುರಿಯಲ್ಲಿ ಶಯನಮಾಡಿರುವ ದಿವ್ಯಸೌನ್ದರ್ಯ ನಿಧಿಯೇ! ನನ್ನ ದುಃಖವನ್ನು ನೀನು ನಾಶ ಪಡಿಸುತ್ತೀಯೋ ಅಥವಾ ನಾಶಪಡಿಸುವುದಿಲ್ಲವೋ! ನನಗೆ ದುಃಖನಿವಾರಕವಾದ

ಬೇರೆ ಒಂದು ವಸ್ತುವನ್ನೂ ನಾನು ಕಾಣೆನು (ನನಗೆ ನೀನೇ ಗತಿ). ನನ್ನ ಪ್ರಾಣವು ನಾಶಹೊಂದುವಂತೆ ಇರುವ ಇಂತಹ ಆಪತ್ಕಾಲದಲ್ಲಿ ನೀನು ಉದಾಸೀನನಾಗದೆ, ನನ್ನ ಚಿತ್ತದೌರ್ಬಲ್ಯಕ್ಕೆ ಅವಕಾಶವಿಲ್ಲದಂತೆ, ನಿನ್ನ ಪಾದಗಳನ್ನೇ ನಾನು ಭದ್ರವಾಗಿ ಹಿಡಿದು ಉಜ್ಜೀವಿಸುವುದಕ್ಕೆ ನೀನು ನನಗೆ ಅನುಮತಿಯನ್ನು ಕೊಡು.

(೯) ಇಶೈವಿತ್ತೆನ್ನೈಯುನ್ ತಾಳಿಣೈಕ್ಕೀೞಿರುತ್ತುಮಮ್ಮಾನೇ,
ಅಶೈವಿಲಮರರ್ ತಲೈವರ್‌ತಲೈವಾ ವಾದಿಪ್ಪೆರುಮೂರ್ತ್ತೀ,
ತಿಶೈವಿಲ್‌ವೀಶುಮ್ ಶೆೞುಮಾಮಣಿಕಳ್ ಶೇರುಮ್ ತಿರುಕ್ಕುಡನ್ದೈ,
ಅಶೈವಿಲುಲಕಮ್ ಪರವ ಕ್ಕಿಡನ್ದಾಯ್ ಕಾಣವಾರಾಯೇ

ಪ್ರ|| ಎನ್ನೈ-ನನ್ನನ್ನು, ಇಶೈವಿತ್ತು - (ದಾಸ್ಯವೃತ್ತಿಗೆ) ಸಮ್ಮತಿಸುವಂತೆ ಮಾಡಿ, ಉನ್ ತಾಳಿಣೈಕ್ಕೀೞ್-ನಿನ್ನ ಪಾದಯುಗಳದ ಕೆಳಗೆ, ಇರುತ್ತುಮ್-ಇರುವಂತೆ ಮಾಡುವ, ಅಮ್ಮಾನೇ-ಸ್ವಾಮಿಯೇ, ಅಶೈವು ಇಲ್-ಚಾಞ್ಚಲ್ಯವಿಲ್ಲದ, ಅಮರರ್ - ನಿತ್ಯಸೂರಿಗಳಿಗೆ, ತಲೈವರ್-ಶಿಖರಪ್ರಾಯರಾದ ಅನನ್ತ-ಗರುಡ-ವಿಷ್ವಕ್ಸೇನರಿಗೆ, ತಲೈವಾ - ಅಧಿಪತಿಯಾದವನೇ, ಆದಿ ಪೆರುಮೂರ್ತ್ತೀ-ಸಮಸ್ತ ಕಾರಣವಾದ ಸರ್ವಾಧಿಕನಾದ ಮೂರ್ತ್ತಿಯೇ, ತಿಶೈ-ದಿಕ್ಕುಗಳಲ್ಲೆಲ್ಲಾ, ವಿಲ್-ಪ್ರಕಾಶವನ್ನು, ವೀಶುಮ್-ವಿಸ್ತರಿಸುವ, ಶೆೞು-ರಮ್ಯವಾದ, ಮಾ ಮಣಿಕಳ್-ಶ್ಲಾಘ್ಯವಾದ ರತ್ನಗಳು, ಶೇರುಮ್-ಸೇರುವ, ತಿರುಕ್ಕುಡನ್ದೈ - ತಿರುಕ್ಕುಡನ್ದೈಯಲ್ಲಿ, ಅಶೈವು ಇಲ್-ಭ್ರಮವು ಇಲ್ಲದಂತೆ, ಉಲಕಮ್ - ಲೋಕವು, ಪರವ-(ನಿನ್ನನ್ನು) ಸ್ತೋತ್ರಮಾಡುವಂತೆ, ಕಿಡನ್ದಾಯ್-ಶಯನಮಾಡಿರುವವನೇ, ಕಾಣ-(ನಾನು ನಿನ್ನ ಗಮನ ಸೌನ್ದರ್ಯವನ್ನು) ನೋಡುವಂತೆ, ವಾರಾಯ್-ಬಾ.

( ಸ-ಗಾ-ರ || )—

ತ್ವತ್ಪಾದಾಬ್ಜಪ್ರಣಮ್ರಂ ಕುರು ಮಯಿ ಕೃಪಯಾ ಮಾಂ ಚ ದೇವಾಧಿದೇವ !
ಶ್ರೀಮಾನಸ್ಯಾದಿಮೂರ್ತಿಸ್ಸುರುಚಿರಮಣಿಭೃತ್ ಕುಮ್ಭಪುರ್ಯಾಂ ಶಯಾನಃ |
ನಿಶ್ಶಙ್ಕಂ ಲೋಕಶಸ್ಯೋಽಸ್ಯಪಿ ತವ ಗಮನಂ ರಮ್ಯಗಮ್ಭೀರಭಾವಂ
ದ್ರಷ್ಟುಂ ಮೇಽಸ್ತ್ಯದ್ಯ ಕಾಂಕ್ಷಾ ! ತ್ಯಜ ತವ ಶಯನಂ ! ದೇಹಿ ಮೇ
ದೃಷ್ಟಿಭಾಗ್ಯಮ್ ||

ತಾ ||ನನ್ನನ್ನು ದಾಸ್ಯವೃತ್ತಿಯಲ್ಲಿ ಸೇರಿಸಿ ನಿನ್ನ ಪಾದಗಳ ಕೆಳಗೆ ಇಟ್ಟುಕೊಳ್ಳುವ ನನ್ನ ಸ್ವಾಮಿಯೇ! ನಿತ್ಯಸೂರಿಗಳಿಗೆ ಶಿಖರಪ್ರಾಯರಾದ ಅನನ್ತ-ಗರುಡ-ವಿಷ್ವಕ್ಸೇನಾದಿಗಳಿಗೂ ಅಧಿಪತಿಯಾದವನೇ! ಸರ್ವಕಾರಣರೂಪಿಯಾದ

ಮಹಾಮೂರ್ತಿಯೇ! ದಿವ್ಯತಮ ರತ್ನಗಳಿಗೆ ಆಶ್ರಯಭೂತವಾದ ಶ್ರೀ ಕುಂಭ ಪುರಿಯಲ್ಲಿ ಸರ್ವಸ್ತುತ್ಯನಾಗಿ ಲೋಕೋಜ್ಜೀವನಕ್ಕಾಗಿ ಶಯನಮಾಡಿರುವವನೇ! ನಿನ್ನ ಗಮನ ಸೌನ್ದರ್ಯವನ್ನು ನಾನು ಕಣ್ಣಿನಿಂದ ನೋಡಿ ಕೃತಾರ್ಥನಾಗುವಂತೆ ನೀನು ನಡೆದು ಬಾ.

(೧೦) ವಾರಾವರುವಾಯ್ ವರುಮೆನ್ಮಾಯಾ
ಮಾಯಾಮೂರ್ತ್ತಿಯಾಯ್,
ಆರಾವಮುದಾಯಡಿಯೇನಾವಿ ಯಕಮೇ ತಿತ್ತಿಪ್ಪಾಯ್,
ತೀರಾವಿನೈಕಳ್ ತೀರ ವೆನ್ನೈಯಾಣ್ಡಾಯ್, ತಿರುಕ್ಕುಡನ್ದೈ
ಯೂರಾಯ್! ಉನಕ್ಕಾಳ್ಪಟ್ಟುಮಡಿಯೇನಿನ್ನಮುೞಲ್ವೇನೋ.

ಪ್ರ॥ ವಾರಾ-ನಡೆದುಬಾರದೆ, ಅರುವಾಯ್-ಅರೂಪಿಯಾಗಿ, ವರುಮ್-ನನ್ನ ಎದುರಿಗೆ ಬರುವ, ಎನ್ ಮಾಯಾ-ನನ್ನ ಮಾಯಾಚೇಷ್ಟಿತನೇ, ಮಾಯಾಮೂರ್ತ್ತಿಯಾಯ್-ಅತ್ಯದ್ಭುತ ದಿವ್ಯಮಂಗಳ ವಿಗ್ರಹವಿಶಿಷ್ಟನೇ, ಆರಾ ಅಮುದಾಯ್-ಎಷ್ಟು ಅನುಭವಿಸಿದರೂ ತೃಪ್ತಿಯುಂಟಾಗದಂತೆ ಇರುವ ಅಮೃತದಂತೆ ಭೋಗ್ಯನಾಗಿರುವವನೇ, ಅಡಿಯೇನ್ ಆವಿ-ದಾಸಭೂತನಾದ ನನ್ನ ಪ್ರಾಣಗಳಿಗೆ ಆಶ್ರಯವಾದ, ಅಕಮೇ-ಹೃದಯದಲ್ಲಿ, ತಿತ್ತಿಪ್ಪಾಯ್ – ಮಧುರತಮನಾಗಿ (ರಸಾಶ್ರಯನಾಗಿ) ಇರುವವನೇ, ತೀರಾ-ಅವಿನಾಶ್ಯವಾದ, ವಿನೈಕಳ್-ಪಾಪಗಳು, ತೀರ-ನಾಶಹೊಂದುವಂತೆ, ಎನ್ನೈ-ನನ್ನನ್ನು, ಆಣ್ಡಾಯ್-ಆಳಿದವನೇ (ನನ್ನ ವಾಚಿಕ ಕೈಂಕರ್ಯವನ್ನು ಸ್ವೀಕರಿಸಿದವನೇ), ತಿರುಕ್ಕುಡನ್ದೈ – ತಿರುಕ್ಕುಡನ್ದೈಯನ್ನು, ಊರಾಯ್-ನಿನ್ನ ವಾಸಸ್ಥಾನವಾಗಿ ಉಳ್ಳವನೇ, ಉನಕ್ಕು-ನಿನಗೆ, ಆಳ್ಪಟ್ಟುಮ್-ದಾಸಭೂತನಾಗಿದ್ದುಕೊಂಡೂ, ಅಡಿಯೇನ್-ಅನನ್ಯ ಶರಣನಾದ ನಾನು, ಇನ್ನಮ್-ಇನ್ನೂ, ಉೞಲ್ವೇನೋ-(ನಿನ್ನ ಅನುಭವವಿಲ್ಲದೆ) ಅಲೆದಾಡುತ್ತಿರುವೆನೋ?

( ಸ-ಗಾ-ರ ॥ )—

ಮಾಯಾಮೂರ್ತಿಸ್ತ್ವದೃಶ್ಯೋಽಸ್ಯಪಿ ಮಮ ಹೃದಯೇ ಭಾಸಿ ಮಾಧುರ್ಯಪೂರ್ಣ-
ಸ್ತ್ವಂ ಪೂರ್ಣಾಮೃತಾತ್ಮಾ ಸಕಲಕಲುಷಸನ್ತಾಪಹನ್ತಾಽನ್ತರಾತ್ಮಾ ।
ಮನ್ನಾಥಃ ಕುಮ್ಭಪುರ್ಯಾಂ ವಿಲಸಿತವಿಭವಸ್ತ್ವಂ ಮುರಾರೇ! ಕಥಂ ವಾ
ತ್ವತ್ಪಾದಾಬ್ಜಂ ಪ್ರಪನ್ನೋಽಪ್ಯಹಹ! ಭವಭಯಾಮ್ಭೋಧಿಮಗ್ನೋ ಭವೇಯಮ್? ॥

ತಾ॥ ನೀನು ಅದೃಶ್ಯನಾಗಿದ್ದಾಗ್ಯೂ ನನ್ನ ಎದುರಿಗೆ ಬರುವ ಮಾಯಾ ಮೂರ್ತಿಯಾಗಿಯೂ, ಅಪರ್ಯಾಪ್ತಾಮೃತ ಸ್ವರೂಪನಾಗಿಯೂ, ನನ್ನ ಹೃದಯ ದಲ್ಲಿ ಮಧುರ ರಸಾಶ್ರಯಭೂತನಾಗಿಯೂ ಇರುತ್ತೀಯೆ. ನನ್ನ ಅಪಾರವಾದ ಪಾಪಗಳನ್ನು ನಾಶಪಡಿಸುವಂತೆ ನನ್ನ ವಾಚಿಕ ಕೈಂಕರ್ಯವನ್ನು ಸ್ವೀಕರಿಸಿದ ನೀನು ಶ್ರೀ ಕುಂಭಪುರಿಯಲ್ಲಿ ವಾಸಮಾಡುತ್ತಿರುವುದರಿಂದ, ನಿನಗೆ ದಾಸಭೂತನಾಗಿ ಅನನ್ಯ ಶರಣನಾದ ನಾನು ಇನ್ನೂ ಹೀಗೆ ಅಲೆದಾಡುತ್ತಿರುವುದು ಉಚಿತವೋ? (ನೀನೇ ಪರಿಶೀಲಿಸಿ ನೋಡು—ನೀನು ಹೀಗೆ ನನ್ನನ್ನು ಕೈಬಿಡದೆ ಸ್ವೀಕರಿಸ ಬೇಕು—ಎಂದು ಭಾವವು.)

(೧೧) ಉೞಲೈಯೆನ್ಬಿಲ್ ಪೇಯ್ಚ್ಚಿ ಮುಲೈಯೂಡವಳೈ
ಯುಯಿರುಣ್ಡಾನ್,
ಕೞಲ್ಕಳವೈಯೇ ಶರಣಾಕ ಕ್ಕೊಣ್ಡ ಕುರುಕೂರ್ ಚ್ಚಡಕೋಪನ್,
ಕುೞಲಿನ್ಮಲಿಯಚ್ಚೊನ್ನ ವೋರಾಯಿರತ್ತುಳಿಪ್ಪತ್ತುಮ್,
ಮೞಲೈತೀರವಲ್ಲಾರ್ ಕಾಮುರ್ ಮಾನೇಯ್ನೋಕ್ಕಿಯರ್ಕ್ಕೇ

ಪ್ರ॥ ಉೞಲೈ-ನೊಗಗಳನ್ನು ಪೋಣಿಸಿದಂತೆ ಇರುವ, ಎನ್ಬಿಲ್-ಎಲುಬು ಗಳನ್ನು ಮಾಲೆಯಾಗಿ ಧರಿಸಿರುವ, ಪೇಯ್ಚ್ಚಿ-ಪೂತನೆಯ, ಮುಲೈಯೂಡು-ಮೊಲೆಯನ್ನು ಆಶ್ರಯಿಸಿ, ಅವಳೈ ಉಯಿರುಣ್ಡಾನ್-ಅವಳ ಪ್ರಾಣವನ್ನು ಅಪಹರಿಸಿದ ಶ್ರೀಕೃಷ್ಣನ, ಅವೈ-ಆ (ತಮಗೆ ಉಪಾಯಭೂತವಾದ), ಕೞಲ್ಕಳೇ – ಪಾದ ಗಳನ್ನೇ, ಶರಣಾಕ – ಸಾಧನವಾಗಿ, ಕೊಣ್ಡ – ಸ್ವೀಕರಿಸಿದ, ಕುರುಕೂರ್-ಶ್ರೀ ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್- ನಮ್ಮಾೞ್ವಾರ್ರು, ಕುೞಲಿಲ್-ಕೊಳಲಿಗಿಂತ, ಮಲಿಯ ಭೋಗ್ಯವಾಗಿರುವಂತೆ, ಶೊನ್ನ–ರಚಿಸಿದ, ಓರ್ ಆಯಿ ರತ್ತುಳ್–ಅದ್ವಿತೀಯವಾದ ಸಹಸ್ರಪದ್ಯಾವಳಿಯಲ್ಲಿ, ಇಪ್ಪತ್ತುಮ್–ಈ ದಶಕ ವನ್ನು, ಮೞಲೈತೀರ-ತಮ್ಮ ಮೌಢ್ಯವು ನಾಶವಾಗುವಂತೆ ವಲ್ಲಾರ್-ಅಭ್ಯಸಿಸುವ ವರು, ಮಾನೇಯ್ ನೋಕ್ಕಿಯರ್ಕ್ಕು–ಮೃಗಾಕ್ಷಿಗಳಾದ ದಿವ್ಯಾಪ್ಸರಸ್ತ್ರೀಯರಿಗೆ, ಕಾಮುರ್–ಪ್ರಿಯರಾಗಿ ಆಗುವರು. (ಪರಮಪದದಲ್ಲಿ ಇವರು ಭಗವದ್ಭಕ್ತರಿಗೆಲ್ಲಾ ಪ್ರಿಯತಮರಾಗುವರು—ಎಂದು ಭಾವವು.)

(ಶ-ಗಾ-ರ ||)—

ಕೃಷ್ಣಸ್ಯೈವಾಂಘ್ರಿಯುಗ್ಮಂ ಶರಣಮನುಕಲಂ ಪೂತನಾಪ್ರಾಣಹನ್ತು-
ಸ್ಸಮ್ಪ್ರಾಪ್ಯಾಸೌ ಶಠಾರಿರ್ಮುನಿರಿಹ ಕುರುಕಾಪತ್ತನೇಶಃ ಕವೀನ್ದ್ರಃ |
ವೇಣುಕ್ವಾಣಾತಿರಮ್ಯೇ ದಶಕಮಿದಮಪಿ ಪ್ರಾಹ ದಿವ್ಯಂ ಸಹಸ್ರೇ
ಯೇ ಜಾನನ್ತೀದಮಾರ್ಯಾಃ ಪ್ರತಿಹತಕಲುಷಾಸ್ತೇ ಮೃಗಾಕ್ಷೀಪ್ರಿಯಾಸ್ಸ್ಯುಃ

ತಾ|| ಪೂತನಾ ಪ್ರಾಣಹಾರಿಯಾದ ಶ್ರೀಕೃಷ್ಣನ ಪಾದಗಳನ್ನೇ ಶರಣವಾಗಿ ಆಶ್ರಯಿಸಿದ ಶ್ರೀ ಕುರುಕಾಪುರಿಯ ಶಠಾರಿಮುನಿಯಿಂದ ವಿರಚಿತವಾದ ಸಹಸ್ರ ಪದ್ಯಾವಳಿಯಲ್ಲಿ—ಈ ದಶಕವನ್ನು ಚೆನ್ನಾಗಿ ಬಲ್ಲವರು ದಿವ್ಯಾಪ್ಸರ ಸ್ತ್ರೀಯರಿಗೆ ಪ್ರಿಯತಮರಾಗುವರು (ಪರಮಪದದಲ್ಲಿ ಭಗವದ್ಭಕ್ತರಿಗೆಲ್ಲಾ ಪ್ರಿಯತಮರಾಗುವರು—ಎಂದು ಭಾವವು)

(ದ್ರ-ಉ-ಸಂ)—

ಆಶ್ವಾಸಲಬ್ಧಧೃತಿನಾ ಮನಸಾ ಸಮೇತ್ಯ
ಶ್ರೀಕುಮ್ಭಘೋಣಶಯಮಪ್ರತಿಮಾಭಿರೂಪ್ಯಮ್ |
ಆಲೋಕ್ಯ ಸಾನ್ತ್ವನವಚಃಪರಿರಮ್ಭಣಾದೀ-
ನಪ್ರಾಪ್ತವಾನ್ ಮುನಿರಖಿದ್ಯತ ಸೋಽಷ್ಟಮೇನ ||

(ದ್ರ-ಉ-ತಾ-ರ)—

ನಿಸ್ಸೌಹಿತ್ಯಾವೃತತ್ವಾತ್ ಸ್ವವಶಜನಿತಯಾ ಽನನ್ಯಭಾವಪ್ರದಾನಾ-
ನ್ಮರ್ಯಾದಾತೀತಕೀರ್ತ್ಯಾ ನಳಿನನಯನತೋ ನಾಯಕತ್ವಾತ್ಸುರಾಣಾಮ್ |
ಸರ್ವಶ್ರೈಷ್ಠ್ಯಾದಿಯೋಗಾದನಿತರಗತಿತಾದ್ಯಾವಹಾಸನ್ನಭಾವಾ-
ದ್ದಾಸ್ಯೇ ಸ್ವೇ ಸ್ಥಾಪಯೇತ್ ಸ್ವಾನ್ ಹರಿರಿತಿ ಶಠಜಿತ್ ಸ್ಥಾಪಯಾಮಾಸ ಕೃಷ್ಣಮ್ ||

(ಈ ಅಷ್ಟಮದಶಕದ ಸಾರಾಂಶ)—

ಈ ಎಂಟನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವತ್ಸಂಶ್ಲೇಷಾಭಾವದಿಂದ ತಮ್ಮ ಆರ್ತಿಯನ್ನೆಲ್ಲಾ ವ್ಯಕ್ತಪಡಿಸಿ ಖಿನ್ನರಾಗಿ ಶ್ರೀ ಕುಂಭಘೋಣವೆಂಬ (ತಿರುಕ್ಕುಡನ್ದೈ-ಎಂಬ) ದಿವ್ಯಕ್ಷೇತ್ರದಲ್ಲಿ ಶಯನಮಾಡಿರುವ ಅಪರ್ಯಾಪ್ತಾಮೃತ (ಆರಾವಮುದನ್) ಸ್ವಾಮಿಯನ್ನು ಕುರಿತು ನಾನಾಪ್ರಕಾರಗಳಿಂದ ಪ್ರಪತ್ತಿಯಂಮಾಡಿ ನೀನೇ ನನ್ನನ್ನು ಕೈಬಿಡದೆ ಸ್ವೀಕರಿಸಬೇಕೆಂದು ಪ್ರಾರ್ಥಿಸಿ ಇರುತ್ತಾರೆ.

---

ಶ್ರೀಃ

# ಪಞ್ಚಮಶತಕದಲ್ಲಿ—ನವಮದಶಕ.

(ಮಾನೇಯ್‌ನೋಕ್ಕು—)

ಈ ದಶಕದಲ್ಲಿ—ಶ್ರೀ ಶಠಾರಿವರ್ಯರು ನಾಯಿಕಾವಸ್ಥೆಯಂ ಪಡೆದು ಭಗವನ್ತನ ದರ್ಶನಕ್ಕಾಗಿ ತಿರುವಲ್ಲವಾೞ್—ಎಂಬ ಶ್ರೀ ಸಂವೃದ್ಧಿಪುರವನ್ನು ಕುರಿತು ಹೋಗಬೇಕೆಂಬ ಉದ್ದೇಶದಿಂದ ಸಖೀ ಜನರನ್ನು ಕುರಿತು ಹೇಳುವ ಮಾತುಗಳನ್ನು ಅನುವದಿಸುತ್ತಾರೆ.

(೧) ಮಾನೇಯ್‌ನೋಕ್ಕು ನಲ್ಲೀರ್ ವೈಕಲುಮ್
ವಿನೈಯೇನ್ಮೆಲಿಯ,
ವಾನಾರ್ ವಣ್‌ಕಮುಕುಮ್ ಮದುಮಲ್ಲಿಕೈ ಕಮೞುಮ್,
ತೇನಾರ್‌ಶೋಲೈಕಳ್ ಶೂೞ್ ತಿರುವಲ್ಲವಾೞುಱೈಯುಮ್,
ಕೋನಾರೈ ಯಡಿಯೇನಡಿ ಕೂಡುವದೆನ್ರುಕೊಲೋ.

ಪ್ರ|| ಮಾನೇಯ್‌ನೋಕ್ಕು – ಹುಲ್ಲೆಮೃಗದ ಕಣ್ಣಿನಂತೆ ಕಣ್ಣುಳ್ಳ, ನಲ್ಲೀರ್–ಒಳ್ಳೇವರಾದ ಸಖಿಗಳೇ!, ವಿನೈಯೇನ್–ಪಾಪಿಷ್ಠೆಯಾದ ನಾನು, ವೈಕಲುಮ್–ಯಾವಾಗಲೂ, ಮೆಲಿಯ–ಕೃಶವಾಗುವಂತೆ, ವಾನ್–ಆಕಾಶವೆಲ್ಲಾ, ಆರ್–ತುಂಬುವಂತೆ, ವಣ್–ಉದಾರವಾದ, ಕಮುಕುಮ್–ಅಡಿಕೆಮರಗಳೂ, ಮದು–ಮಧುಸ್ಯನ್ದಿಯಾದ, ಮಲ್ಲಿಕೈ ಮಲ್ಲಿಗೆಯು, ಕಮೞುಮ್–ಪರಿಮಳಭರಿತವಾಗಿಯೂ (ಇರುವ), ತೇನಾರ್ – ಮಧುಪಾನಮತ್ತಮಧುಪಾವೃತವಾದ, ಶೋಲೈಕಳ್ - ವೃಕ್ಷಷಣ್ಡಗಳಿಂದ, ಶೂೞ್–ಪರಿವೃತವಾದ, ತಿರುವಲ್ಲವಾೞ್–ತಿರುವಲ್ಲವಾೞ್ ಎಂಬ ಕ್ಷೇತ್ರದಲ್ಲಿ, ಉಱೈಯುಮ್–ನಿತ್ಯವಾಸಮಾಡುವ, ಕೋನಾರೈ–ಸರ್ವೇಶ್ವರನಾದ ಸ್ವಾಮಿಯನ್ನು, ಅಡಿಯೇನ್–ದಾಸ್ಯವುಳ್ಳ ನಾನು, ಅಡಿ ಕೂಡುವದು–ಪಾದಗಳಲ್ಲಿ ಆಶ್ರಯಿಸೋಣವು, ಎನ್ರುಕೊಲೋ-ಯಾವಾಗಲೋ?

( ಸ-ಗಾ-ರ ॥ )—

ಹೇ ಸಖ್ಯೋ! ಮೃಗಲೋಚನಾಃ ಪ್ರಿಯತಮಾಃ! ಪಾಪಾಽಪ್ಯಹಂ ಸನ್ತತಂ
ವ್ಯೋಮವ್ಯಾಪಕಸತ್ಫಲಕ್ರಮುಕತ ಶ್ಶ್ರೀಮಲ್ಲಿಕಾಸೌರಭಾತ್ ।
ಶ್ರೀಸಂವೃದ್ಧಿಪುರಂ ಚಕಾಸ್ತಿ ಭರಿತಂ ನಿತ್ಯಂ ಮಧುಸ್ಯನ್ದಿಭಿ
ರ್ವೃಕ್ಷೈಸ್ತತ್ರ ಹರೇಃ ಪದಾಬ್ಜಯುಗಳಂ ದಾಸ್ಯಾತ್ಕದಾ ಪ್ರಾಪ್ನುಯಾಮ್ ॥

ತಾ॥ ಎಲೈ ಮೃಗಲೋಚನೆಯರಾದ ನನ್ನ ಒಳ್ಳೆಯ ಸಖಿಯರೇ ! ತಿರುವಲ್ಲವಾಳ್ ಎಂಬ ಶ್ರೀ ಸಂವೃದ್ಧಿಪುರವು, ಉನ್ನತವಾದ ಅಡಿಕೆಮರಗಳಿಂದಲೂ, ಮಲ್ಲಿಗೆಪುಷ್ಪಗಳ ಪರಿಮಳದಿಂದಲೂ, ಮಧುಸ್ಯನ್ದಿವೃಕ್ಷಗಳಿಂದಲೂ ಭರಿತವಾಗಿದೆ ಆ ಕ್ಷೇತ್ರದಲ್ಲಿ ನಿತ್ಯವಾಸಮಾಡುವ ಸರ್ವೇಶ್ವರನ ಪಾದಗಳನ್ನು ಪಾಪಿನಿಯಾದ ನಾನು ಯಾವಾಗ ಹೊಂದುವೆನೋ ?

(೨) ಎನ್ರುಕೊಲ್ ತೋೞಿಮೀರ್‌ಕಾಳೆನ್ನೈನೀರ್ ನಲಿನ್ದೆನ್
ಶೆಯ್ದಿರೋ,
ಪೊನ್ತಿಕೞ್ ಪುನ್ನೈ ಮಕಿೞ್ ಪುದುಮಾದವಿ ಮೀದಣವಿ,
ತೆನ್ರಲ್ ಮಣಙ್ಕಮೞುನ್ತಿರುವಲ್ಲವಾೞ್ ನಕರುಳ್
ನಿನ್ರಪಿರಾನ್, ಅಡಿನೀಱಡಿಯೋಙ್ಕೊಣ್ಡು ಶೂಡುವದೇ

ಪ್ರ॥ ತೋೞಿಮೀರ್‌ಕಾಳ್–ಸಖಿಯರೇ !, ಎನ್ನೈ–ನನ್ನನ್ನು, ನಲಿನ್ದು–ನಿಷೇಧಿಸಿ, ನೀರ್–ನೀವು, ಎನ್‌ಶೆಯ್ದಿರೋ–ಏನುಮಾಡಿದಿರಿ (ಏನು ಸಾಧಿಸಿದಿರಿ ?), ಪೊನ್ತಿಕೞ್–ಸುವರ್ಣದಂತೆ ಪ್ರಕಾಶಿಸುವ, ಪುನ್ನೈ–ಪುನ್ನಾಗವೃಕ್ಷವೂ, ಮಕಿೞ್–ವಕುಳವೃಕ್ಷವೂ, ಪುದುಮಾದವಿ – ಅಭಿನವ ಮಾಧವೀಲತೆಯೂ, ( ಇವುಗಳ ) ಮೀದು–ಮೇಲೆ, ಅಣವಿ – ಪುಷ್ಪಗಳಿಂದ ಕೂಡಿ, ತೆನ್ರಲ್ – ಮನ್ದಮಾರುತವು, ಮಣಮ್–ಪರಿಮಳವನ್ನು, ಕಮೞುಮ್–ವಿಸ್ತರಿಸುವ, ತಿರುವಲ್ಲವಾೞ್–ತಿರುವಲ್ಲವಾೞ್ ಎಂಬ, ನಕರುಳ್–ನಗರದಲ್ಲಿ, ನಿನ್ರ – ನಿಂತಿರುವ, ಪಿರಾನ್ – ಸ್ವಾಮಿಯ, ಅಡಿನೀಱು – ಪಾದಧೂಳಿಯನ್ನು, ಅಡಿಯೋಮ್ – ದಾಸೀಭೂತರಾದ ನಾವು, ಕೊಣ್ಡು – ಸ್ವೀಕರಿಸಿ, ಶೂಡುವದು – ಶಿರಸಾವಹಿಸೋಣವು, ಎನುಕೊಲ್ – ಎಂದಿಗೋ ?

( ಸ-ಗಾ-ರ || )—
ಹೇ ಸಖ್ಯಃ ಮಮ ವಾರಣಾತ್ಕಿಮಿಹ ವಸ್ಸಿದ್ಧಂ ಸುವರ್ಣಾತ್ಮಕಾಃ
ಪುನ್ನಾಗಾ ಅಪಿ ಮಾಧವೀ ಚ ವಕುಳಾಸ್ತೇ ಯತ್ರ ತತ್ಸೌರಭೈಃ |
ಯುಕ್ತೋ ದಕ್ಷಿಣಮಾರುತಸ್ತು ಪರಿತೋ ಯತ್ರಾಸ್ತಿ ತತ್ರ ಸ್ವಯಂ
ಶ್ರೀಸಂವೃದ್ಧಿಪುರೇಽಙ್ಘ್ರಿಪಙ್ಕಜರಜೋ ವಿಷ್ಣೋಃ ಕದಾ ಪ್ರಾಪ್ನುಮಃ? ||

ತಾ|| ಎಲೈ ಸಖಿಯರೇ! ನೀವು ನನ್ನನ್ನು ತಡೆಯುವುದರಿಂದ ಏನು ಪ್ರಯೋಜನ? ಪುನ್ನಾಗಮಾಧವೀ ವಕುಳಾದಿ ಪರಿಮಳಭರಿತವಾದ ಮನ್ದಮಾರುತ ದಿಂದ ಕೂಡಿ ಇರುವ ಶ್ರೀ ಸಂವೃದ್ಧಿಪುರದಲ್ಲಿ ನಿಂತಿರುವ ಸ್ವಾಮಿಯ ಪಾದಧೂಳಿ ಯನ್ನು ದಾಸೀಭೂತರಾದ ನಾವು ಸ್ವೀಕರಿಸಿ ಶಿರಸಾವಹಿಸೋಣವು ಎಂದಿಗೋ ?

(೩) ಶೂಡುಮಲರ್ಕುೞಲೀರ್ ತುಯರಾಟ್ಟಿಯೇನ್ನೈ ಮೆಲಿಯ,
ಪಾಡುನಲ ವೇದವೊಲಿ ಪರವೈತ್ತಿರೈಪೋಲ್ ಮುೞಙ್ಗಿ,
ವಾಡುಯರ್ನ್ದೋಮಪ್ಪುಕೈಕಮೞುಮ್ ತಣ್ತಿರುವಲ್ಲವಾೞ್,
ನೀಡುರೈಕಿನ್ಱ ಪಿರಾನ್ ಕೞಲ್ಕಾಣ್ಡುಙ್ಕೊಲ್ ನಿಚ್ಚಲುಮೇ.

ಪ್ರ|| ಶೂಡು-ಧರಿಸಲ್ಪಟ್ಟ, ಮಲರ್-ಪುಷ್ಪಗಳುಳ್ಳ, ಕುೞಲೀರ್-ಕೇಶ ಪಾಶವುಳ್ಳ ಸಖಿಯರೇ, ತುಯರಾಟ್ಟಿಯೇನ್ನೈ-ವಿಶೇಷ ದುಃಖಿತೆಯಾದ ನನ್ನನ್ನು, ಮೆಲಿಯ-ಕೃಶಮಾಡುವಂತೆ, ಪಾಡು-ಗಾನಮಾಡಲ್ಪಡುವ, ನಲ್-ವಿಲಕ್ಷಣವಾದ, ವೇದವೊಲಿ-ಸಾಮವೇದ ಧ್ವನಿಯು, ಪರವೈ-ಸಮುದ್ರದ, ತಿರೈಪೋಲ್-ಅಲೆಗಳ ಉದ್ಘೋಷದಂತೆ, ಮುೞಙ್ಗ-ಘೋಷಿಸುತ್ತಿರಲು, ವಾಡು ಉಯರ್ನ್ದು-ಊರ್ಧ್ವ ದೇಶಗಳಲ್ಲೆಲ್ಲಾ ವ್ಯಾಪಿಸಿ, ಓಮಪ್ಪುಕೈ - ಹೋಮಧೂಮವು, ಕಮೞುಮ್- ಹವಿರ್ಗನ್ಧವನ್ನು ಪ್ರಸರಿಸುವ, ತಣ್ - ಶ್ರಮಹರವಾದ, ತಿರುವಲ್ಲವಾೞ್-ಶ್ರೀ ಸಂವೃದ್ಧಿಪುರದಲ್ಲಿ, ನೀಡುರೈಕಿನ್ಱ - ನಿತ್ಯವಾಸಮಾಡುವ, ಪಿರಾನ್- ಸ್ವಾಮಿಯ, ಕೞಲ್ -ಪಾದಗಳನ್ನು, ನಿಚ್ಚಲುಮ್ - ಯಾವಾಗಲೂ, ಕಾಣ್ಡುಙ್ಕೊಲ್- ಕಾಣಬಲ್ಲೆನೋ ?

( ಸ-ಗಾ-ರ || )—
ಹೇ ಸಖ್ಯಃ ! ಕುಸುಮಾರ್ದ್ರಕೇಶಭರಿತಾ ವಿಶ್ಲೇಷದುಃಖಾರ್ದಿತಾಂ
ಮಾಂ ವೇದಧ್ವನಿರುಚ್ಚಕೈಃ ಪ್ರಚಲಿತೋ ಯತ್ರ ಸ್ವಯಂ ಕರ್ಶಯೇತ್|
ಶ್ರೀಸಂವೃದ್ಧಿಪುರೇ ತು ತತ್ರ ಪರಿತೋ ಹೋಮಾದಿಧೂಮಾವೃತೇ
ಪಾದಾಬ್ಜೇ ಮಮ ನಾಯಕಸ್ಯ ಕಲಯೇ ನಿತ್ಯಂ ಕದಾಽಹಂ ಹರೇಃ? ||

ತಾ|| ಪುಷ್ಪಭರಿತವಾದ ಕೇಶಪಾಶಗಳುಳ್ಳ ಸಖಿಯರೇ ! ಸಾಮವೇದ ಘೋಷಗಳಿಂದಲೂ, ಹೋಮಧೂಮಗಳಿಂದಲೂ ಪರಿಮಳಿತವಾದ ಶ್ರೀ ಸಂವೃದ್ಧಿ ಪುರದಲ್ಲಿ ನಿತ್ಯವಾಸಮಾಡುವ ಸ್ವಾಮಿಯ ಪಾದಗಳನ್ನು ವಿಶ್ಲೇಷದುಃಖಿತೆಯಾಗಿ ಕೃಶೆಯಾದ ನಾನು ಎಂದಿಗೆ ನಿತ್ಯವೂ ಕಾಣಬಲ್ಲೆನೋ ?

(೪) ನಿಚ್ಚಲುಮ್ ತೋೞಿಮೀರ್‌ಕಾಳೆಮ್ಮೈ ನೀರ್ ನಲಿನ್ದೆನ್
ಶೆಯ್ದೀರೋ,
ಪಚ್ಚಿಲೈನೀಳ್ ಕಮುಕುಮ್ ಪಲವುಮ್ ತೆಙ್ಗುಮ್ ವಾೞೈಕಳುಮ್
ಮಚ್ಚಣಿಮಾಡಙ್ಗಳ್ ಮೀದಣವುಮ್ ತಣ್ ತಿರುವಲ್ಲವಾೞ್,
ನಚ್ಚರವಿನಣೈಮೇಲ್ ನಮ್ಬಿರಾನದು ನನ್ನಲಮೇ.

ಪ್ರ|| ತೋೞಿಮೀರ್‌ಕಾಳ್-ಸಖಿಯರೇ, ಎಮ್ಮೈ-ನಮ್ಮನ್ನು (ನನ್ನನ್ನು), ನೀರ್-ನೀವು, ನಿಚ್ಚಲುಮ್-ನಿರನ್ತರವಾಗಿ, ನಲಿನ್ದು - (ನಿಷೇಧಿಸಿ) ಪೀಡಿಸಿ ಎನ್ ಶೆಯ್ದೀರೋ-ಏನುಮಾಡಿದಿರಿ ? ಪಚ್ಚಿಲೈ-ಹಸೀ ಎಲೆಗಳುಳ್ಳ, ನೀಳ್-ಉನ್ನತ, ವಾದ, ಕಮುಕುಮ್ - ಅಡಿಕೇಮರಗಳೂ, ಪಲವುಮ್ - ಹಲಸಿನಮರಗಳೂ, ತೆಙ್ಗುಮ್-ತೆಂಗಿನಮರಗಳೂ, ವಾೞೈಕಳುಮ್ - ಬಾಳೇಗಿಡಗಳೂ, ಮಚ್ಚಣಿ-ಮಹಡಿಗಳೊಡನೆ ಕೂಡಿದ, ಮಾಡಙ್ಗಳ್‌ಮೀದು-ಭವನಗಳಮೇಲೆ, ಅಣವುಮ್-ನೆರಳುಗಳನ್ನು ಕೊಟ್ಟು ಅಲಂಕರಿಸುವ, ತಣ್-ಶೀತಳವಾದ, ತಿರುವಲ್ಲವಾೞ್-ಶ್ರೀ ಸಂವೃದ್ಧಿಪುರದಲ್ಲಿ, ನಚ್ಚರವಿನ್ ಅಣೈಮೇಲ್ - ವಿಷವುಳ್ಳ ಸರ್ಪವಾದ ಆದಿಶೇಷನಾದ ಶಯನದಮೇಲೆ ಮಲಗಿರುವ, ನಮ್‌ಪಿರಾನದು-ನಮ್ಮ ಸ್ವಾಮಿಯ, ನಲ್‌ನಲಮೇ - ಒಳ್ಳೇ ಶೀಲವೇ (ನನಗೆ ರಕ್ಷಕವು)—(ನಾನು ಆ ಶೀಲಕ್ಕೆ ವಶ್ಯವಾಗಿದೇನೆ)

( ಸ-ಗಾ-ರ || )—

ಹೇ ಸಖ್ಯಃ ! ಕಿಮಿಹಾದ್ಯ ಮಾಮ್ ಸತತಂ ಖಿನ್ನಾಂ ನಿವಾರ್ಯ ಸ್ವಯಂ
ಯುಷ್ಮಾಭಿಃ ಕ್ರಿಯತೇ ನವಕ್ರಮುಕತ ಶ್ಶ್ರೀನಾರಿಕೇಳಾದಿಭಿಃ |
ಸಂಯುಕ್ತೇ ಕದಳೀವನೈಶ್ಚ ಪನಸೈಸ್ಸೌಧೋಪರಿ ಚ್ಛಾಯಯಾ
ಶ್ರೀಸಂವೃದ್ಧಿಪುರೇ ತು ಶೇಷಶಯನೋ ಮಾಂ ಕ್ರೀತವಾನ್ ನಾಯಕಃ ||

ತಾ|| ಸಖಿಯರೇ ! ಹೀಗೆ ಖಿನ್ನೆಯಾದ ನನ್ನನ್ನು ನಿವಾರಣಮಾಡಿ ನೀವು ಏನು ಸಾಧಿಸಿದಿರಿ ? ಕ್ರಮುಕ-ಪನಸ-ನಾರಿಕೇಳ-ಕದಳೀವೃಕ್ಷಾದಿಗಳಿಂದ ಭರಿತವಾದ ಉಪ್ಪರಿಗೆಗಳುಳ್ಳ ಶ್ರೀ ಸಂವೃದ್ಧಿಪುರದಲ್ಲಿ ಶೇಷಶಾಯಿಯಾಗಿರುವ ನಮ್ಮ ಸ್ವಾಮಿಯ ಒಳ್ಳೇ ಸೌಶೀಲ್ಯವೇ ನನಗೆ ರಕ್ಷಕವು (ನಾನು ಆ ಗುಣಕ್ಕೆ ವಶ್ಯೆಯಾಗಿದೇನೆ)

(೫) ನನ್ನಲತ್ತೋೞಿಮಾರ್ಕಾಳ್ ನಲ್ಲವನ್ದಣರ್ ವೇಳ್ವಿಪ್ಪುಕೈ,
ಮೈನ್ನಲಮ್ ಕೊಣ್ಡುಯರ್ ವಿಣ್ಮಱೈಕ್ಕುಮ್
ತಣ್ತಿರುವಲ್ಲವಾೞ್,
ಕನ್ನಲಮ್ ಕಟ್ಟಿತನ್ನೈ ಕ್ಕನಿಯೈ ಯಿನ್ನಮುದಮ್ ತನ್ನೈ,
ಎನ್ನಲಮ್ಕೊಳ್ ಶುಡರೈ ಯೆನ್ರುಕೊಲ್ ಕಣ್ಕಳ್ ಕಾಣ್ಬದುವೇ

ಪ್ರ|| ನನ್ನಲ-ನನಗೆ ನನಗಿಂತ ಪ್ರಿಯತಮರಾದ, ತೋೞಿಮಾರ್ಕಾಳ್-ಸಖಿಯರೇ, ನಲ್ಲ-ಅತ್ಯನ್ತ ಭಕ್ತಿಯುಳ್ಳ, ಅನ್ದಣರ್-ವೈದಿಕರ, ವೇಳ್ವಿಪ್ಪುಕೈ-ಅಗ್ನಿಹೋತ್ರಾದಿ ಕರ್ಮಗಳ ಧೂಮವು, ಮೈನಲಮ್ ಕೊಣ್ಡು-ಕಾಡಿಗೆಯಂತೆ ಕಪ್ಪು ಬಣ್ಣವನ್ನು ಧರಿಸಿ, ಉಯರ್-ಉನ್ನತವಾದ, ವಿಣ್-ಆಕಾಶವನ್ನು, ಮಱೈಕ್ಕುಮ್-ಮರೆಸುವ, ತಣ್-ಶೀತಳವಾದ, ತಿರುವಲ್ಲವಾೞ್-ಶ್ರೀ ಸಂವೃದ್ಧಿಪುರದಲ್ಲಿ, ಕನ್ನಲ್ ಅಮ್ ಕಟ್ಟಿ ತನ್ನೈ-ಕಬ್ಬಿನ ಒಳ್ಳೇ ಘನರಸದಂತೆ ಇರುವವನನ್ನು, ಕನಿಯೈ-ಪಕ್ವಫಲದಂತೆ ಮಧುರವಾಗಿರುವವನನ್ನು, ಇನ್ ಅಮುದಮ್ ತನ್ನೈ-ಭೋಗ್ಯವಾದ ಅಮೃತಸ್ವರೂಪನನ್ನು, ಎನ್ ನಲಮ್ಕೊಳ್-ನನ್ನ ಆತ್ಮಗುಣರೂಪಗುಣಯುಕ್ತವಾದ, ಶುಡರೈ-ದಿವ್ಯ ತೇಜೋರೂಪನನ್ನು, ಕಣ್ಕಳ್-(ನನ್ನ) ಕಣ್ಣುಗಳು, ಕಾಣ್ಬದು-ಕಾಣುವುದು, ಎನ್ರುಕೊಲ್-ಯಾವಾಗಲೋ ?

( ಸ-ಗಾ-ರ || )—

**ಹೇ ಸಖ್ಯೋ ಮಮ ಸುಪ್ರಿಯಾಃ ! ಕ್ರತುತತೇರ್ಧೂಮಾವಳೀಭಿರ್ನಭೋ-**
**ದೇಶೋ ಯತ್ರ ವಿಭಾತಿ ಸಂವೃತತಮೋ ನಿತ್ಯಂ ಶ್ರಮಧ್ವಂಸಿನಿ |**
**ಶ್ರೀಸಂವೃದ್ಧಿಪುರೇ ತು ತತ್ರ ರುಚಿರಂ ದಿವ್ಯಂ ಫಲಂ ಚೇಕ್ಷುಸತ್-**
**ಸಾರಂ ಚಾಪಿ ಘನಂ ಸುಧಾರಸಮಹೋ! ಪಶ್ಯಾಮಿ ತೇಜಃ ಕದಾ? ||**

ತಾ|| ನನ್ನ ಪ್ರಿಯಸಖಿಯರೇ ! ವೈದಿಕರ ಅಗ್ನಿಹೋತ್ರಾದಿಕರ್ಮಗಳ ಧೂಮದಿಂದ ಭರಿತವಾಗಿ ಕಪ್ಪಾಗಿರುವ ಆಕಾಶವನ್ನು ಮರೆಸುವಂತೆ ಇರುವ ಶ್ರೀ ಸಂವೃದ್ಧಿಪುರದಲ್ಲಿ ಇಕ್ಷುರಸಘನದಂತೆ ಮಧುರವಾಗಿ ಅಮೃತಪ್ರಾಯನಾದ ದಿವ್ಯ ತೇಜೋನಿಧಿಯಾದ ನನ್ನ ಸ್ವಾಮಿಯನ್ನು ನಾನು ಕಾಣುವುದು ಎಂದಿಗೋ ?

(೬) ಕಾಣ್ಬದೆಞ್ಞಾನ್ರುಕೊಲೋ ವಿನ್ಯೆಯೇನ್ ಕನಿವಾಯ್ ಮಡವೀರ್
ಪಾಣ್‌ಕುರಲ್ ವಣ್ಡಿನೋಡು ಪಶುಮ್‌ತ್ತೆನ್ರಲುಮಾಕಿ ಯೆಜ್ಗುಮ್,
ಶೇಣ್‌ಶಿನೈಯೋಙ್ಗುಮರ ಚ್ಚೆಱಿಙ್ಕಾನಲ್ ತಿರುವಲ್ಲವಾೞ್,
ಮಾಣ್‌ಕುರಳ್ ಕೋಲಪ್ಪಿರಾನ್ ಮಲರ್‌ತ್ತಾಮರೈ ಪ್ಪಾದಙ್ಗಳೇ

ಪ್ರ|| ಪಾಣ್-ಗಾನರೂಪವಾದ, ಕುರಲ್-ಧ್ವನಿಯುಳ್ಳ, ವಣ್ಡಿನೋಡು - ಭ್ರಮರಗಳೊಡನೆ, ಪಶುಮ್ ತ್ತೆನ್ರಲುಮ್ - ನೂತ್ನಮಾರುತವೂ, ಆಕಿ-ಆಗಿ, ಎಙ್ಗುಮ್-ಸರ್ವಪ್ರದೇಶಗಳಲ್ಲೂ, ಶೇಣ್-ಉನ್ನತವಾದ, ಶಿನೈ-ಶಾಖೆಗಳುಳ್ಳ, ಓಙ್ಗುಮರಮ್ - ಉನ್ನತವಾದ ಮರಗಳುಳ್ಳ, ಶ್ಚೆಱಿಮ್‌ಕಾನಲ್ - ರಮ್ಯವಾದ ಉದ್ಯಾನಗಳೊಡನೆ ಕೂಡಿದ, ತಿರುವಲ್ಲವಾೞ್ - ಶ್ರೀ ಸಂವೃದ್ಧಿಪುರದಲ್ಲಿರುವ, ಮಾಣ್‌ಕುರಳ್ - ಬ್ರಹ್ಮಚಾರಿಯಾದ ವಾಮನರೂಪಿಯಾದ, ಕೋಲಪ್ಪಿರಾನ್ - ಸುನ್ದರಮೂರ್ತಿಯಾದ ಸ್ವಾಮಿಯ, ಮಲರ್‌ತಾಮರೈ-ವಿಕಸಿತಪದ್ಮಸದೃಶವಾದ, ಪಾದಙ್ಗಳೇ-ಪಾದಗಳನ್ನೇ, ಕನಿವಾಯ್‌ಮಡವೀರ್ - ಬಿಂಬಾಧರವುಳ್ಳ ನನ್ನ ಸಖಿಯರೇ !, ವಿನೈಯೇನ್-ಪಾಪಿನಿಯಾದ ನಾನು, ಕಾಣ್ಬದು - ಕಾಣುವುದು, ಎಞ್ಞಾನ್ರುಕೊಲೋ-ಯಾವಾಗಲೋ ?

( ಸ-ಗಾ-ರ || )—

ಗಾಯದ್ಭೃಙ್ಗತರಙ್ಗಸಙ್ಗವಿಲಸನ್ಮನ್ದಾನಿಲೋದ್ವೀಜಿತೈ-
ರ್ವೃಕ್ಷೈರ್ನಿತ್ಯಮನೋರಮೇ ಬಹುತಮಾಮುತ್ತುಙ್ಗತೈಶ್ಶೋಭನೇ |
ಶ್ರೀಸಂವೃದ್ಧಿಪುರೇ ವಟೋರ್ಮುಹರೇ ಶ್ರೀವಾಮನಸ್ಯಾದ್ಭುತಂ
ಪಾದಾಬ್ಜದ್ವಯಮಚ್ಯುತಸ್ಯ ತು ಕದಾ ಪಶ್ಯಾಮಿ ಸಖ್ಯಃ ಕೃಶಾ? ||

ತಾ|| ಎಲೈ ಸಖಿಯರೇ! ಗಾನಮಾಡುವ ಭ್ರಮರಗಳಿಂದಲೂ, ಮನ್ದಮಾರುತದಿಂದಲೂ ಕೂಡಿದ ಉನ್ನತವಾದ ವೃಕ್ಷಗಳುಳ್ಳ ಉದ್ಯಾನಗಳಿಂದ ಪರಿವೃತವಾದ ಶ್ರೀ ಸಂವೃದ್ಧಿಪುರದಲ್ಲಿ ವಾಮನಬ್ರಹ್ಮಚಾರಿಯಾದ ಸುನ್ದರಮೂರ್ತಿಯ ಪಾದಾರವಿನ್ದಗಳನ್ನು ಪಾಪಿನಿಯಾದ ನಾನು ಎಂದಿಗೆ ಕಾಣುವೆನೋ ?

(೭) ಪಾದಙ್ಗಳ್ ಮೇಲಣಿ ಪೂನ್ದೊಳ್ತು ಕೂಡುಙ್ಗೊಲ್
ಪಾವೈನಲ್ಲೀರ್,
ಓದನೆಡುನ್ದಡತ್ತುಳುಯರ್ ತಾಮರೈ ಶೆಙ್ಗಳುನೀರ್,
ಮಾದರ್ಕಳ್ವಾಳ್ಮುಕಮುಮ್ ಕಣ್ಣುಮೇನ್ದುಮ್
ತಿರುವಲ್ಲವಾೞ್,
ನಾದನಿಞ್ಞಾಲಮುಣ್ಡ ನಮ್ಪಿರಾನ್ತನ್ನೈ ನಾಳ್ತೊಱುಮೇ

ಪ್ರ॥ ಓದನೆಡುಮ್ – ಸಮುದ್ರದಂತೆ ವಿಶಾಲವಾದ, ತಡತ್ತುಳ್–ತಟಾಕಗಳಲ್ಲಿ, ಉಯರ್-ಉನ್ನತವಾಗಿ ಬೆಳೆದಿರುವ, ತಾಮರೈ-ತಾವರೆಯೂ, ಶೆಙ್ಗಳುನೀರ್-ನೀಲೋತ್ಪಲವೂ, ಮಾದರ್ಕಳ್-ಸ್ತ್ರೀಯರ, ವಾಳ್-ಕಾನ್ತಿಯುಳ್ಳ, ಮುಕಮುಮ್ ಕಣ್ಣುಮ್–ಮುಖವೂ ಕಣ್ಣೂ ಇವುಗಳ ಸೌನ್ದರ್ಯವನ್ನು, ಏನ್ದುಮ್–ಧರಿಸಿರುವ, ತಿರುವಲ್ಲವಾೞ್–ಶ್ರೀ ಸಂವೃದ್ಧಿ ಪುರಕ್ಕೆ, ನಾದನ್–ಸ್ವಾಮಿಯಾದ, ಇ ಞಾಲಮುಣ್ಡ–ಈ ಜಗತ್ತನ್ನು (ಪ್ರಳಯದಲ್ಲಿ) ಭಕ್ಷಿಸಿದ, ನಮ್ಪಿರಾನ್ತನ್ನೈ – ನಮ್ಮ ಸ್ವಾಮಿಯನ್ನು, ನಾಳ್ತೊಱುಮೇ–ಪ್ರತಿದಿನವೂ, ಪಾವೈ–ಬೊಂಬೆಯಂತೆ, ನಲ್ಲೀರ್–ಸುನ್ದರವಾದ ಅವಯವಗಳುಳ್ಳ ಸಖಿಯರೇ, ಪಾದಙ್ಗಳ್ ಮೇಲ್–ಪಾದಗಳ ಮೇಲೆ, ಅಣಿ – ಅಲಂಕೃತವಾದ, ಪೂಮ್ತೊೞ – ಪುಷ್ಪವನ್ನಾದರೂ ನೋಡಿ ಸೇವಿಸಲು, ಕೂಡುಙ್ಗೊಲ್-(ನಮಗೆ) ಸಾಧ್ಯವಾಗುವುದೋ ?

( ಸ–ಗಾ–ರ ॥ )—

ಕಾಸಾರೇಷು ಸಮುದ್ರಶೋಭಿಷು ಲಸತ್ಪಾಥೋಜನೀಲೋತ್ಪಲೈ-
ರ್ನಾರೀಣಾಂ ವದನಾಕ್ಷಿಯುಗ್ಮಸರಣಿರ್ಯತ್ರಾಭಿಭೂತಾ ಭವೇತ್ ।
ಶ್ರೀಸಂವೃದ್ಧಿಪುರೇ ಚ ತತ್ರ ಜಗತಾಂ ನಾಥಂ ಹರಿಂ ರಕ್ಷಕಂ
ಹೇ ಸಖ್ಯಃ! ಕಿಮಿಮಾ ಭಜೇಮ ಶರಣಂ ತತ್ಪಾದಪದ್ಮಾಶ್ರಯಾಃ? ॥

ತಾ॥ ಎಲೈ ಸುನ್ದರಿಗಳಾದ ಸಖಿಯರೇ ! ಸಮುದ್ರದಂತೆ ವಿಶಾಲವಾದ ತಟಾಕಗಳಲ್ಲಿ ಉನ್ನತವಾಗಿ ಬೆಳೆದಿರುವ–ತಾವರೆ ಮತ್ತು ನೀಲೋತ್ಪಲ–ಇವುಗಳು –ಸ್ತ್ರೀಯರ ಮುಖ ಮತ್ತು ನೇತ್ರಗಳಿಗೆ–ಸಮಾನವಾಗಿ ಶೋಭಿಸುತ್ತಿರುವ ಶ್ರೀ ಸಂವೃದ್ಧಿಪುರಕ್ಕೆ ನಾಯಕನಾದ (ಪ್ರಳಯಕಾಲದಲ್ಲಿ ಜಗದ್ಭಕ್ಷಕನಾದ) ನಮ್ಮ ಸ್ವಾಮಿಯ ಪಾದಗಳಮೇಲೆ ಅಲಂಕೃತವಾದ ಪುಷ್ಪವನ್ನು ಪ್ರತಿದಿನವೂ ಸೇವಿಸುವ ಭಾಗ್ಯವು ನಮಗೆ ಉಂಟಾಗುವುದೋ ?

(೮) ನಾಡೊಱುವ್ ವೀಡಿನ್ಱಿಯೇ ತೊೞುಕ್ಕೂಡುಙ್ಗೊಲ್
ನನ್ನುದಲೀರ್,
ಆಡುಱುತೀಙ್ಗರುಮ್ಬುಮ್ ವಿಳೈಶೆನ್ನೆಲುಮಾಕಿ ಯೆಙ್ಗುಮ್,
ಮಾಡುಱು ಪೂನ್ದಡಮ್ ಶೇರ್ ವಯಲ್ ಶೂೞ್ ತಣ್ ತಿರುವಲ್ಲವಾೞ್,
ನೀಡುಱೈಕಿನ್ಱಪಿರಾನ್ ನಿಲನ್ದಾವಿಯ ನೀಳ್ ಕೞಲೇ.

ಪ್ರ|| ಆಡು–ಆಡೋಣವನ್ನು, ಉಱು–ಅಧಿಕಪಡಿಸುವ (ಮದಜನಕವಾದ), ತೀಮ್–ಮಧುರತಮವಾದ, ಕರುಮ್ಬುಮ್–ಕಬ್ಬೂ, ವಿಳೈ ಶೆನ್ನೆಲುಮ್–ಚೆನ್ನಾಗಿ ಬೆಳೆದಿರುವ ಕೆಂಪುಬತ್ತವೂ, ಆಕಿ–ಸಮೃದ್ಧವಾಗಿ, ಮಾಡು ಉಱು – ಸುತ್ತು ಪ್ರದೇಶಗಳನ್ನು ವ್ಯಾಪಿಸಿರುವ, ಪೂಮ್ ತಡಮ್ – ಪುಷ್ಪಭರಿತವಾದ ತಟಾಕಗಳನ್ನು, ಶೇರ್–ಹಡೆದಿರುವ, ವಯಲ್–ಕ್ಷೇತ್ರಗಳಿಂದ, ಶೂೞ್–ಪರಿವೃತವಾದ, ತಣ್–ಶೀತಳವಾದ, ತಿರುವಲ್ಲವಾೞ್ – ಶ್ರೀ ಸಂವೃದ್ಧಿಪುರದಲ್ಲಿ, ನೀಡುಱೈಕಿನ್ಱ–ನಿತ್ಯವಾಸಮಾಡುವ, ಪಿರಾನ್–ಸ್ವಾಮಿಯ, ನಿಲಮ್–ಭೂಮಿಯನ್ನು, ತಾವಿಯ–ಅಳೆದುಕೊಂಡ, ನೀಳ್ ಕೞಲೇ–ದೊಡ್ಡ ಪಾದಗಳನ್ನೇ, ನಲ್ ನುದಲೀರ್–ರಮ್ಯವಾದ ಲಲಾಟವುಳ್ಳ ಸಖಿಯರೇ, ನಾಡೊಱುಮ್ (ನಾಳ್+ತೊಱುಮ್)–ಪ್ರತಿದಿನವೂ, ವೀಡು ಇನ್ಱಿಯೇ–ವಿಚ್ಛೇದ ವಿಲ್ಲದನ್ತೆಯೇ, ತೊೞುಕ್ಕೂಡುಙ್ಗೊಲ್–ಸೇವಿಸಲು (ನಮಗೆ) ಸಾಧ್ಯವಾಗುವುದೋ ?

( ಸ–ಗಾ–ರ || )—
ಸರ್ವತ್ರೋಚ್ಛಲಿತೇಕ್ಷುಕಾಣ್ಡನಿಚಯವ್ರೀಹ್ಯಾದಿಸಂಶೋಭಿತೈಃ
ಕೇದಾರೈಸ್ಸರಸೀತಟೇಷು ಭರಿತೇ ದಿವ್ಯೇ ಮಹಾತ್ಮಾಶ್ರಯೇ |
ಶ್ರೀಸಂವೃದ್ಧಿಪುರೇ ಪ್ರಭೋಃ ಪದಯುಗಂ ಲೋಕಾಕ್ರಮವ್ಯಾಪೃತಂ
ಹೇ ಸಖ್ಯಸ್ಸತತಂ ಭಜೇಮ ಕಿಮಿಮಾ ಶಕ್ಯಾನ್ತಿ ವಯಂ ಶ್ರೀಹರೇಃ? ||

ತಾ|| ಎಲೈ ಸಖಿಯರೇ ! ಮಧುರತಮವಾದ ಕಬ್ಬೂ, ಕೆಂಪು ಬತ್ತವೂ, ಸಮೃದ್ಧವಾಗಿ ಬೆಳೆದಿರುವ ಕ್ಷೇತ್ರಗಳೂ ಮತ್ತು ಪುಷ್ಪಭರಿತವಾದ ತಟಾಕಗಳೂ ಉಳ್ಳ ಶ್ರೀ ಸಂವೃದ್ಧಿಪುರದಲ್ಲಿ ನಿತ್ಯವಾಸಮಾಡುವ ಸ್ವಾಮಿಯ (ತ್ರಿವಿಕ್ರಮಾವತಾರದ) ದೊಡ್ಡಪಾದಗಳನ್ನು ಪ್ರತಿದಿನವೂ ಅವಿಚ್ಛಿನ್ನವಾಗಿ ಸೇವಿಸಲು ನಮಗೆ ಸಾಧ್ಯವಾಗುವುದೋ ?

(೯) ಕೞಲ್ವಳೈಪೂರಿಪ್ಪ ಯಾಙ್ಕಣ್ಡುಕೈತೊೞ ಕೂಡುಙ್ಕೊಲೋ,
ಕುೞಲೆನ್ನ ಯಾೞುಮೆನ್ನ ಕುಳಿರ್ಶೋಲೈಯುಳ್ ತೇನರುನ್ದಿ,
ಮೞಲೈವರಿವಣ್ಡುಕಳಿಶೈಪಾಡುಮ್ ತಿರುವಲ್ಲವಾೞ್,
ಶುೞಲಿನ್ಮಲಿಶಕ್ಕರ ಪ್ಪೆರುಮಾನದು ತೊಲ್ಲರುಳೇ.

ಪ್ರ॥ ಕುಳಿರ್-ಶೀತಳವಾದ, ಶೋಲೈಯುಳ್-ಉದ್ಯಾನಗಳಲ್ಲಿ, ತೇನ್ ಅರುನ್ದಿ-ಮಧುಪಾನಮಾಡಿ, ಮೞಲೈ–ಮನೋಹರವಾದ, ವರಿ-ಶಬ್ದವುಳ್ಳ, ವಣ್ಡುಕಳ್-ಭ್ರಮರಗಳು, ಕುೞಲೆನ್ನ–ಕೊಳಲೋ ಎಂಬಂತೆಯೂ, ಯಾೞೆನ್ನವುಮ್–ವೀಣೆಯೋ ಎಂಬಂತೆಯೂ, ಇಶೈ ಪಾಡುಮ್-ಗಾನಮಾಡುತ್ತಿರುವ, ತಿರುವಲ್ಲವಾೞ-ಶ್ರೀಸಂವೃದ್ಧಿಪುರದಲ್ಲಿ, ಶುೞಲಿಲ್ ಮಲಿ–ಸ್ವತೇಜೋಭ್ರಮಣಾತಿಶಯವುಳ್ಳ, ಶಕ್ಕರ–ಚಕ್ರವನ್ನು ಧರಿಸಿರುವ, ಪೆರುಮಾನದು–ಸರ್ವೇಶ್ವರನ, ತೊಲ್–ಸ್ವಾಭಾವಿಕವಾದ (ಅನಾದಿಸಿದ್ಧವಾದ), ಅರುಳ್–ಕೃಪೆಯು, ಕೞಲ್ವಳೈ ಪೂರಿಪ್ಪ–ಕಳೆದುಬಿಳುವ ಬಳೆಗಳು ಕೈಗಳಿಗೆ ತುಂಬಿ ಇರುವಂತೆ, ಯಾಮ್–ನಾವು, ಕಣ್ಡು – (ಅವನನ್ನು) ನೋಡಿ, ಕೈ ತೊೞ-ಅಂಜಲಿಮಾಡುವಂತೆ, ಕೂಡುಙ್ಕೊಲೋ-ಸಂಭವಿಸುವುದೋ? (ಅವನ ಕೃಪೆಯು ಉಂಟಾಗುವುದೋ ?)

( ಸ–ಗಾ–ರ ॥ )—

ಶೀತಾನೋಕಹಷಣ್ಡಚಾರಿಮಧುಪಶ್ರೇಣೀರವೈಶ್ಶೋಭನೇ
ಶ್ರೀಸಂವೃದ್ಧಿಪುರೇ ತು ವೇಣುನಿನದೈರ್ವೀಣಾರವೈಶ್ಚಕ್ರಿಣಃ ।
ಶ್ರೀವಿಷ್ಣೋಃ ಕರುಣಾ ಕದಾಽತಿಶಿಥಿಲಾಮಾಸ್ಮಾಕಹಸ್ತಾವಳೀ-
ಭೂಷಾಂ ಪೂರ್ಣತಮಾಂ ಕರೋತಿ ಸತತಂ ತತ್ಪಾದಸೇವಾಭರಾತ್? ॥

ತಾ॥ ಶೀತಳವಾದ ಉದ್ಯಾನಗಳಲ್ಲಿ ಮಧುಪಾನಮಾಡಿ ಗಾನಮಾಡುವ ಭ್ರಮರಗಳ ಶಬ್ದವು ಕೊಳಲೋ ವೀಣೆಯೋ ಎಂಬಂತೆ ತೋರುತ್ತಿರುವ ಶ್ರೀಸಂವೃದ್ಧಿಪುರದಲ್ಲಿರುವ ಚಕ್ರಪಾಣಿಯಾದ ಸರ್ವೇಶ್ವರನ ಸ್ವಭಾವಸಿದ್ಧವಾದ ಕೃಪೆಯು ನಮ್ಮಲ್ಲಿ-(ನಮ್ಮ ಕೈ ಬಳೆಗಳನ್ನೆಲ್ಲಾ ಕೈತುಂಬುವಂತೆ ಮಾಡಿ ನಮಗೆ ಸನ್ತೋಷಜನಕವಾಗಿ) ಯಾವಾಗ ಸಂಭವಿಸುವುದೋ ?

(೧೦) ತೊಲ್ಲರುಳ್ ನಲ್ವಿನೈಯಾಲ್ ಶೊಲಕ್ಕೂಡುಙ್ಕೊಲ್
ತೋೞಿಮೀರ್ಕಾಳ್,
ತೊಲ್ಲರುಳ್ ಮಣ್ಣುಮ್ ವಿಣ್ಣುಮ್ ತೊೞನಿನ್ಱ ತಿರುನಕರಮ್,
ನಲ್ಲರುಳಾಯಿರವರ್ ನಲನೇನ್ದುಮ್ ತಿರುವಲ್ಲವಾೞ್,
ನಲ್ಲರುಳ್ ನಮ್ಪೆರುಮಾನ್ ನಾರಾಯಣನ್ ನಾಮಙ್ಗಳೇ.

ಪ್ರ|| ತೊಲ್ – ಸ್ವಾಭಾವಿಕವಾದ, (ಅವನ) ಕೃಪೆಯನ್ನು, ಮಣ್ಣುಮ್ ವಿಣ್ಣುಮ್–ಭೂಲೋಕದ ಜನರೂ ಪರಮಪದವಾಸಿಗಳೂ, ತೊೞ–ಸೇವಿಸಿ ಅನುಭವಿಸುವಂತೆ, ನಿನ್ಱ-(ಅವನು) ಬಂದು ನಿಂತಿರುವ, ತಿರುನಕರಮ್–ಶ್ರೀಮತ್ತಾದ ನಗರವಾದ, ನಲ್ಲರುಳ್–ಆಶ್ರಿತರಲ್ಲಿ ಅತ್ಯನ್ತಾಭಿಮಾನವುಳ್ಳ, ಆಯಿರವರ್-ಅನೇಕ ಸಹಸ್ರ ಭಾಗವತೋತ್ತಮರು, ನಲಮ್ ಏನ್ದುಮ್ – ಭಗವದ್ಭಕ್ತಿ ಪ್ರಕರ್ಷವನ್ನು ಪಡೆದಿರುವ, ತಿರುವಲ್ಲವಾೞ್ – ಶ್ರೀ ಸಂವೃದ್ಧಿ ಪುರದಲ್ಲಿ, ನಲ್ಲರುಳ್–ದಿವ್ಯಕೃಪಾನಿಧಿಯಾದ, ನಮ್ ಪೆರುಮಾನ್–ನಮ್ಮ ಸ್ವಾಮಿಯಾದ, ನಾರಾಯಣನ್–(ಸಮಸ್ತ ಗುಣ ವಿಭೂತಿಯುಕ್ತನಾದ) ನಾರಾಯಣನ, ನಾಮಙ್ಗಳೇ – ನಾಮಗಳನ್ನೇ, ತೋೞಿಮೀರ್ಕಾಳ್–ಸಖಿಯರೇ !, ತೊಲ್ ಅರುಳ್–(ಅವನ) ಸ್ವಾಭಾವಿಕ ಕೃಪಾರೂಪವಾದ, ನಲ್ವಿನೈಯಾಲ್ – (ನಮ್ಮ) ಸುಕೃತ ವಿಶೇಷದಿಂದ, ಶೊಲಕ್ಕೂಡುಙ್ಕೊಲ್–(ನಾವು) ಹೇಳಲು ಸಾಧ್ಯವಾಗುವುದೋ ?

( ಸ-ಗಾ-ರ || )—
ನಿತ್ಯಂ ಚಾಪ್ಯುಪಕಾರಕೋಽಸ್ತ್ಯಯಮಿತಿ ದ್ಯಾವಾಪೃಥಿವ್ಯೋರಮುಂ
ಶಂಸನ್ತ್ಯೇವ ಹಿ ತತ್ರ ದಿವ್ಯನಗರೇ ಭಕ್ತ್ಯೋತ್ತಮಾಸ್ಸಾತ್ತ್ವಿಕಾಃ |
ಸಾಹಸ್ರ್ಯಃ ಕೃಪಯಾ ವಸನ್ತಿ ಸತತಂ ಶ್ರೀಭಾಗ್ಯವೃದ್ಧ್ಯಾಹ್ವಯೇ
ದಿಷ್ಟ್ಯಾ ತಂ ತು ಭಜೇಮ ನಾಮಶತಕೈಸ್ಸಖ್ಯೋಽದ್ಯ ನಾರಾಯಣಮ್? ||

ತಾ|| ಸಖಿಯರೇ ! ಅವನ ಸ್ವಾಭಾವಿಕವಾದ ಕೃಪೆಯನ್ನು ಭೂಲೋಕದ ಜನರೂ ಪರಮಪದವಾಸಿಗಳೂ ಸೇವಿಸಿ ಅನುಭವಿಸುವಂತೆ ಅವನು ಬಂದು ನಿಂತಿರುವ ಕ್ಷೇತ್ರವಾದ ಭಾಗವತೋತ್ತಮ ಪರಿಪೂರ್ಣವಾದ ಶ್ರೀ ಸಂವೃದ್ಧಿ ಪುರದಲ್ಲಿ ದಿವ್ಯಕೃಪಾನಿಧಿಯಾದ ನಮ್ಮ ಸ್ವಾಮಿಯಾದ ನಾರಾಯಣನ ನಾಮಗಳನ್ನೇ ನಾವು ನಮ್ಮ ಸುಕೃತ ವಿಶೇಷದಿಂದ ಯಾವಾಗಲೂ ಸಂಕೀರ್ತನ ಮಾಡಲು (ನಮಗೆ) ಸಾಧ್ಯವಾಗುವುದೋ ?

(೧೧) ನಾಮಙ್ಗಳಾಯಿರಮುಡೈಯ ನಮ್ಪೆರುಮಾನಡಿಮೇಲ್,
ಶೇಮಙ್ಕೊಳ್ ತೆನ್ಕುರುಕೂರ್ ಚ್ಚಡಕೋಪನ್ ತೆರಿನ್ದುರೈತ್ತ,
ನಾಮಙ್ಗಳಾಯಿರತ್ತುಳ್ಳಿವೈಪತ್ತುಮ್ ತಿರುವಲ್ಲವಾಳ್.
ಶೇಮಙ್ಕೊಳ್ ತೆನ್ನಕರ್ಮೇಲ್ ಶೆಪ್ಪುವಾರ್ ಶಿಱನ್ದಾರ್ ಪಿಱನ್ದೇ

ಪ್ರ|| ನಾಮಙ್ಗಳಾಯಿರಮುಡೈಯ-ನಾಮಸಹಸ್ರವುಳ್ಳ, ನಮ್ ಪೆರುಮಾನ್-ನಮ್ಮ ಸ್ವಾಮಿಯಾದ ಸರ್ವೇಶ್ವರನ, ಅಡಿಮೇಲ್-ಪಾದಗಳಮೇಲೆ, ಶೇಮಮ್ ಕೊಳ್-ಸರ್ವ ಕ್ಷೇಮಕರವಾದ ಬುದ್ಧಿಯುಳ್ಳ, ತೆನ್ಕುರುಕೂರ್ - ಶ್ರೀ ಕುರುಕಾಪುರಿಯ, ಶಡಕೋಪನ್-ಶಠಾರಿಮುನಿಯು, ತೆರಿನ್ದು ಉರೈತ್ತ-ಪರಿಶೀಲಿಸಿ ರಚಿಸಿದ, ನಾಮಙ್ಗಳಾಯಿರತ್ತುಳ್ - ಸಹಸ್ರನಾಮಗಳಂತೆ ಪಾವನಗಳಾದ ಸಹಸ್ರಪದ್ಯಗಳಲ್ಲಿ, ಇವೈಪತ್ತುಮ್-ಈ ಹತ್ತುಪದ್ಯಗಳನ್ನು, ತಿರುವಲ್ಲವಾೞ್-ಶ್ರೀ ಸಂವೃದ್ಧಿಪುರವೆಂಬ, ಶೇಮಙ್ಕೊಳ್ ತೆನ್ನಕರ್ಮೇಲ್ - ಕ್ಷೇಮಕರವಾಗಿ ರಮ್ಯವಾದ ನಗರದ ವಿಷಯವಾಗಿ, ಶೆಪ್ಪುವಾರ್-ಪಠನಮಾಡಬಲ್ಲವರು, ಪಿಱನ್ದೇ-ಈ ಜನ್ಮದ ಶರೀರದೊಡನೆಯೇ, ಶಿಱನ್ದಾರ್ - ಭಗವದನುಭವಾನನ್ದ ಸಾಮ್ರಾಜ್ಯವುಳ್ಳವರಾಗುವರು.

( ಸ-ಗಾ- ರ || )—

ನಾಥಂ ನಾಮಸಹಸ್ರಶೋಭಿತಮಮುಂ ಪಾದಾಬ್ಜಭಕ್ತ್ಯಾಸ್ಯಯಂ
ಸ್ತೋತುಂ ಕ್ಷೇಮಕರಶ್ಶಠಾರಿರಕರೋತ್ಸಹಸ್ರಪದ್ಯಾವಳಿಮ್ |
ದಿವ್ಯಶ್ರೀಕುರುಕಾಪುರಪ್ರಭುರಸೌ ತತ್ರಾದ್ಯಧನ್ಯಾ ವಿದು -
ಶ್ಶ್ರೀಸಂವೃದ್ಧಿಪುರಂ ಪ್ರತೀಹ ದಶಕಂ ಯೇ ತೇಽತ್ರ ಜಾತಾ ಅಪಿ ||

ತಾ|| ನಾಮಸಹಸ್ರವುಳ್ಳ ನಮ್ಮ ಸ್ವಾಮಿಯ ಪಾದಗಳಮೇಲೆ—ಸ್ತುತಿರೂಪವಾಗಿ ಶ್ರೀ ಶಠಾರಿಮುನಿವರ್ಯರು ಉದಾರಬುದ್ಧಿಯಿಂದ ಸರ್ವರ ಕ್ಷೇಮಕ್ಕಾಗಿ ರಚಿಸಿ ಇರುವ ಸಹಸ್ರಪದ್ಯಮಾಲೆಯೊಳು — ಶ್ರೀ ಸಂವೃದ್ಧಿಪುರವಿಷಯಕವಾದ ಈ ದಶಕವನ್ನು ಪಠನಮಾಡಬಲ್ಲವರು ಈ ಶರೀರದೊಡನೆಯೇ (ಈ ಜನ್ಮದಲ್ಲೇ) ಭಗವದನುಭವಾನನ್ದಸಾಮ್ರಾಜ್ಯವುಳ್ಳವರಾಗುವರು.

( ದ್ರ-ಉ-ಸಂ || )—

ಅನ್ಯಂ ಮುನಿಃ ಪ್ರತಿಹತಸ್ತತ ಏವ ಖೇದಾ -
ದ್ಗನ್ತುಂ ಪ್ರವೃತ್ತಮನಸಾಽಪಿ ತು ದಿವ್ಯದೇಶಮ್ |
ತದ್ಭೋಗ್ಯತಾಮಭಿದಧತ್ತದಧೀಶಪಾದೌ
ಯಾಯಾಂ ಕದೇತ್ಯಕಥಯನ್ನವಮೇ ಸ ದೈನ್ಯಮ್ ||

( ವ್ಯಾಖ್ಯಾತಾರ || )—

ಸ್ವಾಮಿತ್ವಾತ್ಸ್ವಂಶ್ರಿತಾನಾಮನಿಕರಣರಸಾತ್ ಸ್ವೇಷ್ಟಸಂಶ್ಲೇಷಕತ್ವಾತ್
ಸರ್ವಾಸ್ವಾದ್ಯತ್ವಭೂಮ್ನಾ ಕಪಟವಟುತಯಾ ದಾರುಣಾಪತ್ಸಖತ್ವಾತ್ |
ದಿವ್ಯಸ್ಥಾನೋಪಪತ್ತ್ಯಾ ಭ್ರಮದರಿಭರಣಾಚ್ಚಾಪಿ ನಾರಾಯಣತ್ವಾ-
ದತ್ಯಾಸನ್ನಶ್ಶ್ರಿತಾನಾಂ ಭವತಿ ಹರಿರಿತಿ ಪ್ರಾಹ ಕಾರೇಸ್ಸನೂಜಃ ||

(ಈ ನವಮದಶಕದ ಸಾರಾಂಶ)—

ಈ ಒಂಬತ್ತನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯನ್ನು ಪಡೆದು ತಿರುವಲ್ಲವಾಳ್—ಎಂಬ ಶ್ರೀ ಸಂವೃದ್ಧಿಪುರದಲ್ಲಿರುವ ಸ್ವಾಮಿಯ ಸನ್ದರ್ಶನ – ತತ್ಪಾದಸೇವಾ – ತದ್ಗುಣಾನುಭವ – ತದೀಯ ಪುಷ್ಪಲಾಭ – ತತ್ಕೃಪಾಶ್ರಯತ್ವ – ತನ್ನಾಮಸಂಕೀರ್ತನಾದಿಗಳು ತನಗೆ ಎಂದಿಗೆ ಉಂಟಾಗುವುವೋ—ಎಂದು ತನ್ನ ಅಪೇಕ್ಷಿತಗಳನ್ನು ತನ್ನ ಸಖೀಜನರಿಗೆ ಹೇಳುತ್ತಿರುವುದಾಗಿ ಭಾವಿಸಿ—ಈ ಕ್ರಮವನ್ನು ವರ್ಣಿಸಿ ಇರುತ್ತಾರೆ.

---

ಶ್ರೀಃ

# ಪಞ್ಚಮಶತಕದಲ್ಲಿ—ದಶಮದಶಕ.

( ಪಿಱನ್ದವಾಱುಮ್ —)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಅರ್ಚಾವತಾರ ವಿಷಯದಲ್ಲಿ ಮಾಡಿದ ಪ್ರಾರ್ಥನೆಯು ಸಫಲವಾಗಲಿಲ್ಲವೆಂದು ವಿಭವಾವತಾರದ ಗುಣಾನುಭವವನ್ನು ಮಾಡಲುದ್ಯುಕ್ತರಾಗಿ ಶ್ರೀಕೃಷ್ಣಾವತಾರದ ಚರಿತ್ರವನ್ನು ಕ್ರಮೇಣ ಅನುಸನ್ಧಾನಮಾಡಲು ಮನಸ್ಸ್ಥೈರ್ಯವನ್ನು ಪ್ರಾರ್ಥಿಸುತ್ತಾರೆ )

---

(೧) ಪಿಱನ್ದವಾಱುಮ್ ವಳರ್ನ್ದವಾಱುಮ್
ಪೆರಿಯಪಾರತಮ್ ಕೈಶೆಯ್ದು, ಐವರ್ಕ್ಕು
ತ್ತಿಱಙ್ಗಳ್ಕಾಟ್ಟಿ ಯಿಟ್ಟುಚ್ಚೆಯ್ದು ಪೋನಮಾಯಙ್ಗಳುಮ್,
ನಿಱನ್ದನೂಡುಪುಕ್ಕೆನದಾವಿಯೈ ನಿನ್ಱುನಿನ್ಱುರುಕ್ಕಿ ಯುಣ್ಕಿನ್ಱ, ಇ-
ಚ್ಚಿಱನ್ದವಾಶುಡರೇ ಯುನ್ನೈ ಯೆನ್ಱುಕೊಲ್ ಶೇರ್ವದುವೇ.

ಪ್ರ|| ಪಿಱನ್ದ-ಹುಟ್ಟಿದ (ಅವತರಿಸಿದ), ಆಱುಮ್-ಪ್ರಕಾರವೂ, ವಳರ್ನ್ದ-ಬೆಳೆದ, ಆಱುಮ್-ಪ್ರಕಾರವೂ, ಪೆರಿಯಪಾರತಮ್-ಮಹಾಭಾರತಯುದ್ಧದಲ್ಲಿ, ಕೈಶೆಯ್ದು - ಸೈನ್ಯವನ್ನೆಲ್ಲಾ ವಿಂಗಡಿಸಿ, ಐವರ್ಕ್ಕು - ಐದುಮಂದಿ ಪಾಣ್ಡವರಿಗೆ, ತಿಱಙ್ಗಳ್-ವಿಜಯೋಪಾಯಪ್ರಕಾರಗಳನ್ನು, ಕಾಟ್ಟಿಯಿಟ್ಟು-ತೋರಿಸಿ, ಶೆಯ್ದು-ಅವತಾರಕೃತ್ಯಗಳನ್ನು ಮಾಡಿ (ದುಷ್ಟನಿಗ್ರಹ-ಭಕ್ತರಕ್ಷಣ-ಕೃತ್ಯಗಳಂ ಮಾಡಿ), ಪೋನ - ತನ್ನ ದಿವ್ಯಸ್ಥಾನಕ್ಕೆ (ಪರಮಪದಕ್ಕೆ) ಹೋದ, ಮಾಯಙ್ಗಳುಮ್ - ಆಶ್ಚರ್ಯಕೃತ್ಯಪ್ರಕಾರಗಳೂ, ನಿನೈನ್ದು - ಹೃದಯಪ್ರದೇಶದ, ಊಡು - ಒಳಗೆ, ಪುಕ್ಕು-ಪ್ರವೇಶಿಸಿ, ಎನದು-ನನ್ನ, ಆವಿಯೈ-ಆತ್ಮವಸ್ತುವನ್ನು, ನಿನ್ಱು ನಿನ್ಱು-ಪ್ರತಿಕ್ಷಣವೂ ನಿಂತು ನಿಂತು, ಉರುಕ್ಕಿ - ದ್ರವದ್ರವ್ಯವಾಗಿ ಮಾಡಿ, ಉಣ್ಗಿನ್ಱ-ಕಬಳಿಸುತ್ತಿವೆ. ಇ-ಈ, ಶಿನ್ಱನ್ದ-ಅನುರೂಪವಾದ, ವಾೞ್-ಅಪರಿಚ್ಛಿನ್ನವಾದ ಶುಡರೇ - ತೇಜೋಮೂರ್ತಿಯೇ !, ಉನ್ನೈ - ನಿನ್ನನ್ನು, ಎನ್ಱುಕೊಲ್ - ಯಾವಾಗಲೋ, ಶೇರ್ವದು-ನಾನು ಸೇರುವುದು ?

( ಸ-ಗಾ-ರ || )—

ವಿಷ್ಣೋರ್ಜನ್ಮಚರಿತ್ರಮತ್ರ ಭುವಿ ಸಂವೃದ್ಧೇಃ ಕ್ರಮಶ್ಚಾದ್ಭುತಾ
ಪಞ್ಚಭ್ಯೋ ವಿಜಯಪ್ರದಾನಸರಣಿರ್ಯುದ್ಧೇ ಚ ಸಾ ಭಾರತೇ|
ಸರ್ವಂ ಮೇ ಹೃದಿ ಸಮ್ಪ್ರವಿಶ್ಯ ಸತತಂ ಜೀವಂ ದ್ರವೀಕೃತ್ಯ ಮೇ
ಭುಙ್ಕ್ತೇ ಹನ್ತ! ಕದಾ ಭಜಾಮ್ಯುಪಗತಂ ತ್ವಾಂ ದಿವ್ಯತೇಜೋನಿಧೇ!||

ತಾ|| ಶ್ರೀ ಭಗವನ್ತನಾದ ನೀನು ಹುಟ್ಟಿದಪ್ರಕಾರವೂ, ಬೆಳೆದ ಪ್ರಕಾರವೂ, ಮಹಾಭಾರತ ಯುದ್ಧದಲ್ಲಿ ಸೈನ್ಯವನ್ನೆಲ್ಲಾ ವಿಂಗಡಿಸಿ ಪಾಂಡವರಿಗೆ ಜಯೋಪಾಯಗಳನ್ನು ತೋರಿಸಿ ಅವತಾರಕೃತ್ಯಗಳನ್ನೆಲ್ಲಾ ಮಾಡಿ ನಿನ್ನ ದಿವ್ಯಸ್ಥಾನಕ್ಕೆ ಹೋದ ಆಶ್ಚರ್ಯ ಕೃತ್ಯಪ್ರಕಾರಗಳೂ—ಇವುಗಳೆಲ್ಲಾ ನನ್ನ ಹೃದಯದೊಳಗೆ ಪ್ರವೇಶಿಸಿ ನನ್ನ ಆತ್ಮವಸ್ತುವನ್ನು ದ್ರವೀಕರಿಸಿ ಭಕ್ಷಿಸುತ್ತಿವೆ ಅಪರಿಚ್ಛಿನ್ನ ತೇಜೋಮೂರ್ತಿಯೇ! ನಿನ್ನನ್ನು ನಾನು ಸೇರಿ ಅನುಭವಿಸುವುದು ಯಾವಾಗಲೋ? (ನನ್ನನ್ನು ನೀನು ಸ್ವೀಕರಿಸುವುದು ಯಾವಾಗಲೋ ?)

(೨) ಪಿರುಮ್ಪೆರಾತ್ತೈಯುಳ್ಳೇಯುಪಾಯನ್ದದುಪೆ
ಮಾಯಪ್ಪಾವಿನ್ಸ್ಟೆ ವಾಯ್ಪಿಳನ್ದದುಮ್,
ಮದುಮ್ಮೆವಾರ್ಕುೞಲಾರ್ ಕುರವೈಪಿಣ್ಯೆನ್ದ ಕುೞಕುವೆ, ಅದುವಿದು
ಉದುವೆನ್ನಲಾವನವಲ್ಲ ವೆನ್ಸ್ರೈಯುಳ್ ಶೆಯ್ಕ್ಕೆ ನೈವಿಕ್ಕುವೆ
ಮುಮ್ಮೈಯುಮುದಲಾ, ಉನ್ನೈಯೆನ್ಱು ತಲೈಪ್ಪೆಯ್ವನೇ.

ಪ್ರ|| ವದುವೈವಾರ್ತ್ತೈಯುಳ್ – ಮದುವೆಯಮಾತು ಬಂದಾಗ, ಏಱು ಪಾಯ್ನ್ದದುಮ್ – ಎತ್ತುಗಳಮೇಲೆ ನುಗ್ಗಿ ಕೊಂದುದೂ, ಮಾಯಮಾವಿನೈ– ಕೃತ್ರಿಮವಾದ (ಕೇಶಿಯೆಂಬ) ಕುದುರೆಯ, ವಾಯ್ಪಿಳನ್ದದುಮ್- ಬಾಯಿ ಸೀಳಿದುದೂ, ಮದುವೈವಾರ್ – ಮಧುಸ್ಯನ್ದಿಯಾದ, ಕುೞಲಾರ್ – ಕೇಶಪಾಶವುಳ್ಳ ಗೋಪಿಗಳೊಡನೆ, ಕುರವೈಪಿಣೈನ್ದ–ರಾಸಕ್ರೀಡೆಯನ್ನು ಮಾಡಿದ, ಕುೞಕುಮ್– ಭೋಗರಸದ ಪ್ರಕಾರವೂ, ಅದು ಇದು ಉದು–ಅದು ಇದು ಮತ್ತೊಂದು, ಎನ್ನಲಾವನ ಅಲ್ಲ – ಎಂದು ನಿರ್ದೇಶಿಸಿ ಹೇಳಲ್ಪಡುವುವು ಅಲ್ಲ. ಎನ್ನೈ – ನನ್ನನ್ನು, ಉಱಶೆಯ್ಕೈ–ನಿನ್ನ ವ್ಯಾಪಾರವು, ನೈವಿಕ್ಕುಮ್-ಶಿಥಿಲವಾಗುವಂತೆ ಮಾಡುವುದು. ವೈಯಮ್–ಜಗತ್ತಿಗೆ, ಮುದು ಮುದಲ್ವಾ – ಆದಿಕಾರಣಭೂತನೇ !, ಉನ್ನೈ– ನಿನ್ನನ್ನು, ಎನ್ಱು–ಯಾವಾಗ, ತಲೈಪ್ಪೆಯ್ವೆ (ನಾನು) ಹೊಂದುವೆನು?

( ಸ–ಗಾ–ರ || )—

ಉದ್ವಾಹೋಕ್ತಿಷು ಹೋ ! ನಿಶಮ್ಯ ವೃಷಭಧ್ವಂಸಶ್ಚ ತೇ ಶ್ರೀಹರೇ !
ಮಾಯಾಕೇಶಿನಿಷೂದನಂ ಚ ತರುಣೀಸಙ್ಗೋಽಪಿ ರಾಸೇ ತವ |
ನೈವಂ ತೇ ಚರಿತಂ ತದೇತದ ಇತ್ಯಪ್ಯಸ್ತಿ ವಾಚೋವಶಂ
ಸರ್ವಂ ಮಾಂ ಶಿಥಿಲೀಕರೋತಿ ಜಗತಾಂ ಮೂಲಂ ಕದಾ ತ್ವಾಂ ಭಜೇ?||

ತಾ|| ಮದುವೆಯ ಪ್ರಸಂಗವು ಬಂದಾಗ ವೃಷಭಗಳನ್ನು ಧ್ವಂಸಮಾಡಿದುದೂ ಮಾಯಾಕೇಶಿ ವಕ್ತ್ರದಾರಣವೂ, ಗೋಪಿಗಳೊಡನೆ ರಾಸಕ್ರೀಡೆಯ ಭೋಗ ವೈಭವವೂ— ವಾಚಾಮಗೋಚರವಾಗಿ ಇವೆ. ನಿನ್ನ ವ್ಯಾಪಾರವೆಲ್ಲಾ ನನ್ನನ್ನು ಹೀಗೆ ವಶೀಕರಿಸಿ ಕೃಶಮಾಡುತ್ತಿದೆ. ಜಗತ್ತಿಗೆಲ್ಲಾ ಆದಿಕಾರಣಭೂತನೇ ! ನನ್ನನ್ನು ನೀನು ಯಾವಾಗ ಪರಿಗ್ರಹಿಸಿ ಉಜ್ಜೀವಿಸುವಂತೆ ಮಾಡುವೆಯೋ !

(೩) ಪೆಯ್ಯುಮ್ ಪೂಙ್ಕುೞಲ್ ಪೇಯ್ಮುಲೈಯುಣ್ಡ
ಪಿಳ್ಳೈತ್ತೇಱ್ಱಮುಮ್, ಪೇರ್ನ್ದೋರ್ ಶಾಡಿಱ
ಚ್ಚೆಯ್ಯಪಾದಮೊನ್ಱಾಲ್ ಶೆಯ್ದ ನಿಱ್ಶಿಱುಚ್ಚೇವಕಮುಮ್,
ನೆಯ್ಯುಣ್ ವಾರ್ತ್ತೈಯುಳನ್ನೈ ಕೋಲ್ಕೊಳ್ಳ
ನೀಯುನ್ ತಾಮರೈಕ್ಕಣ್ಗಳ್ ನೀರ್ಮಲ್ಕ
ಪೈಯವೇ ನಿಲೈಯುಮ್ ವನ್ದೆನ್ನೆಞ್ಜೈ ಯುರುಕ್ಕುಙ್ಗಳೇ.

ಪ್ರ|| ಪೆಯ್ಯುಮ್-(ಯಶೋದೆಯ ವೇಷದಿಂದ) ಧರಿಸಿದ, ಪೂಙ್ಕುಳಲ್-ಪುಷ್ಪಗಳಿಂದ ಕೂಡಿದ ಕೇಶಪಾಶವುಳ್ಳ, ಪೇಯ್-ಪೂತನೆಯೆಂಬ ರಾಕ್ಷಸಿಯ, ಮುಲೈ ಉಣ್ಡ-ಸ್ತನವನ್ನು ಹೀರಿದ, ಪಿಳ್ಳೈತ್ತೇಱ್ಱಮುಮ್ - ಬಾಲ್ಯದಲ್ಲಿಯೇ (ಇವಳು ರಾಕ್ಷಸಿಯೆಂದು ತಿಳಿದ) ಜ್ಞಾನಾತಿಶಯವೂ, ಓರ್‌ಶಾಡು - ಒಂದು (ಅಸುರಾವಿಷ್ಟವಾದ) ಶಕಟವನ್ನು, ಪೇರ್‌ನ್ದು-ಭೇದಿಸಿ, ಇಱ-ನಾಶಹೊಂದುವಂತೆ, ಶೆಯ್ದ ಪಾದಮ್ ಒನ್ಱಾಲ್ - ರಮ್ಯವಾದ ಒಂದು ಪಾದದಿಂದ, ಶೆಯ್ದ-ಮಾಡಿದ, ನಿ-ನಿನ್ನ, ಶಿಱುಚ್ಚೇವಕಮುಮ್-ಬಾಲ ಪರಾಕ್ರಮವೂ, ನೆಯ್ ಉಣ್ ವಾರ್ತ್ತೈಯುಳ್-ತುಪ್ಪವನ್ನು (ಕಳ್ಳತನದಿಂದ) ಭಕ್ಷಿಸಿದ ಮಾತನ್ನು ಕೇಳಿದಾಗ, ಅನ್ನೈ-ತಾಯಿಯು (ಯಶೋದೆಯು), ಕೋಲ್-ಕೋಲನ್ನು, ಕೊಳ್ಳ-(ಕೈಯಲ್ಲಿ) ತೆಗೆದು ಕೊಂಡಾಗ, ನೀ-(ಸರ್ವಶಿಕ್ಷಕನಾದ) ನೀನು, ಉನ್ ತಾಮರೈಕ್ಕಣ್‌ಕಳ್-ನಿನ್ನ ತಾವರೆಯಂತೆ ಇರುವ ಕಣ್ಣುಗಳು, ನೀರ್‌ಮಲ್ಕ-ನೀರು ಸುರಿಸುವಂತೆ, ಪೈಯವೇ-ಭೀತನಾಗಿ ನಡುಗಿಯೇ, ನಿಲೈಯುಮ್- ಇರುವ ಸ್ಥಿತಿಯೂ, ವನ್ದು - (ಇವುಗಳೆಲ್ಲಾ) ಈಗ ಬಂದು, ಎನ್ ನೆಞ್ಜೈ-ನನ್ನ (ಚಪಲವಾದ) ಮನಸ್ಸನ್ನು, ಉರುಕ್ಕುಙ್ಗಳ್-ಕರಗಿಸುತ್ತಿವೆ.

( ಸ-ಗಾ-ರ || )—

ಪುಷ್ಪಾಲಂಕೃತಕೇಶಪಾಶವಿಲಸನ್ಮಾ ರಾಸ್ತನಾಪೇಕ್ಷಿತ-
ಸ್ತೇ ಬಾಲ್ಯೇ ಚರಿತಂ ಚ ದುಷ್ಟಶಕಟಧ್ವಂಸೋಽಪಿ ಪಾದೇನ ತೇ |
ಆಜ್ಯಾದೇರಪಿ ಚೌರ್ಯಭಕ್ತಿಸಮಯೇ ಮಾತುಶ್ಚ ದಣ್ಡಂ ಕರೇ
ದೃಷ್ಟ್ವಾ ತೇಽಕ್ಷಿಯುಗಂ ಭಯಾಶ್ರುಭರಿತಂ ಮಾನ್ತು ದ್ರವೀಕುರ್ವತೇ ||

ತಾ|| ಯಶೋದೆಯಂತೆ ವೇಷವಂ ಧರಿಸಿ (ಪುಷ್ಪಾಲಂಕೃತೆಯಾಗಿ) ಬಂದ ಪೂತನೆಯ ಸ್ತನವನ್ನು ಹೀರಿ ಅವಳನ್ನು ಕೊಂದ ನಿನ್ನ ಜ್ಞಾನಾತಿಶಯವೂ, ಅಸುರಾವಿಷ್ಟವಾದ ಶಕಟವನ್ನು ಒಂದು ಪಾದದಿಂದ ಭೇದಿಸಿದ ನಿನ್ನ ಬಾಲ್ಯ ಪರಾಕ್ರಮವೂ, ನೀನು ಕಳ್ಳತನದಿಂದ ತುಪ್ಪವನ್ನು ಭಕ್ಷಿಸಿದೆಯೆಂಬ ಮಾತನ್ನು ಕೇಳಿ ತಾಯಿಯು ಕೋಲನ್ನು ತೆಗೆದುಕೊಂಡಾಗ ಸರ್ವಶಿಕ್ಷಕನಾದ ನೀನು ಅತ್ಯಂತ ಭೀತನಂತೆ ಕಣ್ಣುನೀರು ಸುರಿಸುತ್ತ ನಡುಗಿದ ಸ್ಥಿತಿಯೂ—ಇವುಗಳೆಲ್ಲಾ ಈಗ ಬಂದು ನನ್ನ ಮನಸ್ಸನ್ನು ಕರಗಿಸುತ್ತಿವೆ.

(೪) ಕಳ್ಳವೇಡತ್ತೈ ಕ್ಕೊಣ್ಡು ಪ್ಪೋಯ್ ಪ್ಪುರಮ್ಪುಕ್ಕವಾಱುಮ್
ಕಲನ್ದಶುರರೈ,
ಉಳ್ಳಮ್ ಪೇದಮ್ ಶೆಯ್ದಿಟ್ಟುಯಿರುಣ್ಡ ವುಪಾಯಙ್ಗಳುಮ್,
ವೆಳ್ಳನೀರ್ ಚ್ಚಡೈಯಾನುಮ್ ನಿನ್ನಿಡೈ ವೇಱಲ್ಲಾಮೈ
ವಿಳಙ್ಗ ನಿನ್ಱದುಮ್,
ಉಳ್ಳಮುಳ್ ಕುಡೈನ್ದೆನ್ನುಯಿರೈ ಯುರುಕ್ಕಿಯುಣ್ಣುಮೇ.

ಪ್ರ|| ಕಳ್ಳವೇಡತ್ತೈ-ಕೃತ್ರಿಮವೇಷವನ್ನು, ಕೊಣ್ಡು-ಧರಿಸಿ, ಪೋಯ್-ಹೋಗಿ, ಪುರಮ್-ತ್ರಿಪುರವನ್ನು, ಪುಕ್ಕ ಆಱುಮ್-ಪ್ರವೇಶಿಸಿದ ಪ್ರಕಾರವೂ, ಅಶುರರೈ-ರಾಕ್ಷಸರನ್ನು, ಕಲನ್ದು-ಸೇರಿ (ಅವರೊಡನೆ ಅನ್ತರಂಗದಲ್ಲಿ ಸೇರಿ), ಉಳ್ಳಮ್ ಪೇದಮ್-ಚಿತ್ತಭೇದವನ್ನು, ಶೆಯ್ದಿಟ್ಟು-ಮಾಡಿಬಿಟ್ಟು, ಉಯಿರ್ ಉಣ್ಡ-ಅವರ ಪ್ರಾಣವನ್ನು ಅಪಹರಿಸಿದ, ಉಪಾಯಙ್ಗಳುಮ್-ಉಪಾಯಗಳೂ, ವೆಳ್ಳನೀರ್ - ಸಮೃದ್ಧವಾದ ಪ್ರವಾಹರೂಪವಾದ ಗಂಗಾಜಲವನ್ನು, ಶಡೈಯಾನುಮ್-ಜಡೆಯಲ್ಲಿ ಧರಿಸಿದ ರುದ್ರನೂ, ನಿನ್ನಿಡೈ-ನಿನ್ನ ಪಕ್ಕದಲ್ಲಿ, ವೇಱಲ್ಲಾಮೈ-ಬೇರೆಯಲ್ಲವೆಂದು ತೋರುವಂತೆ, ವಿಳಙ್ಗ ನಿನ್ಱದುಮ್ - ಪ್ರಕಾಶಿಸಿ ನಿಂತುದೂ, ಉಳ್ಳಮ್-ನನ್ನ ಮನಸ್ಸಿನಲ್ಲಿ, ಉಳ್ ಕುಡೈನ್ದು-ಒಳಗೆ ಪ್ರವೇಶಿಸಿ, ಎನ್ ಉಯಿರೈ-ನನ್ನ ಆತ್ಮವಸ್ತುವನ್ನು, ಉರುಕ್ಕಿ-ನೀರಾಗಿ ಕರಗಿಸಿ, ಉಣ್ಣುಮ್-ಭಕ್ಷಿಸುತ್ತಿವೆ.

( ಸ-ಗಾ-ರ || )—

ಧೃತ್ವಾ ಕೃತ್ರಿಮವೇಷಮೇವ ಚ ಪುರಂ ತಚ್ಚ ಪ್ರವಿಶ್ಯ ಸ್ವಯಂ
ರುದ್ರಸ್ಯ ಪ್ರಬಲಾಸುರಪ್ರಮಥನಂ ತದ್ವಾರತಸ್ತಸ್ಯ ಚ |
ತೇ ದೇಹೇ ವಸತಿಶ್ಚ ಸರ್ವವಿದಿತಾ ಗಙ್ಗಾಧರಸ್ಯಾಪ್ಯಹೋ !
ಸರ್ವಂ ತೇ ಚರಿತಂ ಪ್ರವಿಶ್ಯ ಹೃದಯಂ ಮಾಂ ಚ ದ್ರುತಂ ಚಾಶ್ನುತೇ ||

ತಾ|| ನೀನು ಕೃತ್ರಿಮವೇಷವನ್ನು ಧರಿಸಿ ತ್ರಿಪುರವನ್ನು ಪ್ರವೇಶಿಸಿದ ಪ್ರಕಾರವೂ, ರಾಕ್ಷಸರೊಡನೆ ಸೇರಿ ಚಿತ್ತಭೇದವನ್ನುಂಟುಮಾಡಿ ಅವರನ್ನೆಲ್ಲಾ ಕೊಂದ ಉಪಾಯಗಳೂ, ಗಂಗಾಧರನಾದ ರುದ್ರನೂ ಬೇರೆಯಲ್ಲವೆಂಬಂತೆ ನಿನ್ನ ಪಕ್ಕದಲ್ಲೇ ನಿಂತಿರುವುದೂ—ಇವುಗಳೆಲ್ಲಾ ನನ್ನ ಮನಸ್ಸಿನಲ್ಲಿ ಒಳಗೆ ಪ್ರವೇಶಿಸಿ, ನನ್ನ ಆತ್ಮವಸ್ತುವನ್ನು ನೀರಾಗಿ ಕರಗಿಸಿ ಭಕ್ಷಿಸುತ್ತಿವೆ.

(೫) ಉಣ್ಣವಾನವರ್ ಕೋನುಕ್ಕಾಯರೊರುಪ್ಪಡುತ್ತ
ವಡಿಶಿಲುಣ್ಣದುವುಂ,
ವಣ್ಣಮಾಲ್ವರೈಯೈ ಯೆಡುತ್ತು ವಳ್ಳೈಕಾತ್ತದುವುಂ,
ಮಣ್ಣೈ ಮುರ್ಪಡೈತ್ತುಣ್ಣುಮಿಳನ್ದು ಕಡನ್ದಿಡನ್ದು
ಮಣನ್ದ ಮಾಯಙ್ಗಳ್,
ಎಣ್ಣುನ್ದೋರುಮೆನ್ನೆಞ್ಜುರಿವಾಯ್ ಮೆಳ್ಗುಕೊಕ್ಕುಮ್ ನಿನ್ರೇ.

ಪ್ರ|| ವಾನವರ್ ಕೋನುಕ್ಕು – ದೇವತೆಗಳಿಗೆ ಸ್ವಾಮಿಯಾದ ಇನ್ದ್ರನಿಗೆ, ಉಣ್ಣ–ಭುಜಿಸುವುದಕ್ಕೆ, ಆಯರ್–ಗೋಪರು, ಒರುಪ್ಪಡುತ್ತ–ಉದ್ಯುಕ್ತರಾಗಿ ಏರ್ಪಡಿಸಿದ, ಅಡಿಶಿಲ್–ಅನ್ನವನ್ನು, ಉಣ್ಣದುಮ್–ಭಕ್ಷಿಸಿದುದೂ, ವಣ್ಣಮಾಲ್–ನಾನಾವರ್ಣಗಳಿಂದ ಕೂಡಿ ದೊಡ್ಡದಾದ, ವರೈಯೈ – ಬೆಟ್ಟವನ್ನು, ಎಡುತ್ತು – ಎತ್ತಿ, ವಳ್ಳೈ-ಮಳೆಯನ್ನು, ಕಾತ್ತದುಮ್ – ನಿವಾರಣಮಾಡಿದುದೂ, ಮಣ್ಣೈ–ಭೂಲೋಕವನ್ನು, ಮುನ್–ಪೂರ್ವಕಾಲದಲ್ಲಿ, ಪಡೈತ್ತು–ಸೃಷ್ಟಿಸಿ, ಉಣ್ಣು–(ಪ್ರಳಯ ಕಾಲದಲ್ಲಿ) ಭಕ್ಷಿಸಿ ಉದರದಲ್ಲಿಟ್ಟು, ಉಮಿೞ್ನ್ದು–ಪುನಸ್ಸೃಷ್ಟಿಮಾಡಿ, ಕಡನ್ದು–(ವಾಮನನಾಗಿ) ಅಳೆದು, ಇಡನ್ದು–(ವರಾಹರೂಪಿಯಾಗಿ) ಉದ್ಧರಿಸಿ, ಮಣನ್ದ–(ಭೂದೇವಿಯನ್ನು) ವಿವಾಹಮಾಡಕೊಂಡ, ಮಾಯಙ್ಗಳ್ – (ಇವುಗಳೆಲ್ಲಾ) ಆಶ್ಚರ್ಯ ಗುಣಚೇಷ್ಟಿತಗಳು. ಎಣ್ಣುನ್ದೋರುಮ್–(ಇವುಗಳನ್ನು) ಸ್ಮರಿಸುವ ಕಾಲದಲ್ಲೆಲ್ಲಾ, ಎನ್ ನೆಞ್ಜು–ನನ್ನ ಮನಸ್ಸು, ನಿನ್ರು–ಸ್ಥಿರವಾಗಿ ನಿಂತು, ಎರಿವಾಯ್–ಅಗ್ನಿಯಲ್ಲಿ, ಮೆೞುಕು ಒಕ್ಕುಮ್–ಮೇಣದಂತೆ ಕರಗಿಹೋಗುವುದು

( ಸ–ಗಾ–ರ || )—

ಇನ್ದ್ರಾಯೇತಿ ಚ ಗೋಪವೃದ್ಧಕಲಿತಂ ಚಾನ್ನಂ ಸ್ವಯಂ ಭುಕ್ತವಾಂ–
ಸ್ತ್ವಂ ವರ್ಷಾದ್ಗಿರಿಧಾರಣೇನ ಕೃತವಾನ್ ಗೋಗೋಪಸಂರಕ್ಷಣಮ್ |
ಸೃಷ್ಟ್ವಾ ಭೂಮಿಮಿಮಾಂ ಸ್ವಯಂ ಚ ಸಕಲಾಮಶ್ನನ್ ಕ್ರಮೇಣೋದ್ಗಿರ–
ನ್ನಾಕ್ರಮ್ಯೋದ್ಧೃತವಾನ್ ವಿವಾಹತ ಇದಂ ಸ್ಮೃತ್ವಾ ದ್ರುತಂ ಮೇ ಮನಃ||

ತಾ|| ದೇವೇನ್ದ್ರನಿಗೋಸ್ಕರ ಗೋಪರು ಏರ್ಪಡಿಸಿದ್ದ ಅನ್ನವನ್ನೆಲ್ಲಾ ಭಕ್ಷಿಸಿದುದೂ, ಗೋವರ್ಧನಗಿರಿಯನ್ನು ಎತ್ತಿ ಮಳೆಯಿಂದ ಗೋಗೋಪರನ್ನು ಸಂರಕ್ಷಿಸಿದುದೂ, ಪೂರ್ವಕಾಲದಲ್ಲಿ ಭೂಮಿಯನ್ನು ಸೃಷ್ಟಿಸಿ ಪ್ರಳಯಕಾಲದಲ್ಲಿ

ಭಕ್ಷಿಸಿ ಪುನಸ್ಸೃಷ್ಟಿಮಾಡಿ, (ವಾಮನಾವತಾರದಲ್ಲಿ) ಅಳೆದು, (ವರಾಹರೂಪಿಯಾಗಿ) ಉದ್ಧರಿಸಿ, ಆ ಭೂದೇವಿಯನ್ನು ವಿವಾಹಮಾಡಿಕೊಂಡ ಇವುಗಳೆಲ್ಲಾ ನಿನ್ನ ಆಶ್ಚರ್ಯ ಗುಣಚೇಷ್ಟಿತಗಳು—ಇವುಗಳನ್ನು ಸ್ಮರಿಸುವ ಕಾಲದಲ್ಲೆಲ್ಲಾ ನನ್ನ ಮನಸ್ಸು ಅಗ್ನಿಯಲ್ಲಿ ಮೇಣದಂತೆ ಕರಗಿಹೋಗುವುದು.

(೬) ನಿನ್ಱವಾಱುಮಿರುನ್ದವಾಱುಮ್ ಕಿಡನ್ದವಾಱುಮ್

ನಿನೈಪ್ಪರಿಯನ,

ಒನ್ಱಲಾವುರುವಾಯರುವಾಯ ನಿನ್ ಮಾಯಙ್ಗಳ್,

ನಿನ್ಱುನಿನ್ಱು ನಿನೈಕಿನ್ಱೇನುನ್ನೈ ಯೆಙ್ಙನಮ್ ನಿನೈಕಿಱ್ಪನ್,

ಪಾವಿಯೇಱ್ಕು,

ಒನ್ಱು ನನ್ಗುರೈಯಾಯ್ ಉಲಕಮುಣ್ಡ ವೊಣ್ಶುಡರೇ

ಪ್ರ॥ ನಿನ್ಱವಾಱುಮ್ - (ಊರಕಮ್—ಎಂಬ ಕ್ಷೇತ್ರದಲ್ಲಿ) ನಿಂತುದುದೂ, ಇರುನ್ದವಾಱುಮ್ - (ಪಾಡಕಮ್—ಎಂಬ ಕ್ಷೇತ್ರದಲ್ಲಿ) ಕುಳಿತುದುದೂ, ಕಿಡನ್ದವಾಱುಮ್-ಶಯನಮಾಡಿದುದೂ, (ನಿನ್ನ ಈ ಕೃತ್ಯಗಳು) ನಿನೈಪ್ಪ-ಸ್ಮರಿಸುವುದಕ್ಕೆ, ಅರಿಯನ-ಅಶಕ್ಯವಾದುವು, ಒನ್ಱು ಅಲಾ-(ಹೀಗೆ) ಒಂದು ಕ್ರಮವಿಲ್ಲದ, ಉರುವಾಯ್-ಆಕಾರವುಳ್ಳವನಾಗಿ, ಅರುವಾಯ-ನನಗೆ ಅನುಭಾವ್ಯವಾದ ರೂಪವಿಲ್ಲದ, ನಿನ್ ಮಾಯಙ್ಗಳ್-ನಿನ್ನ ಆಶ್ಚರ್ಯ ಚೇಷ್ಟಿತಗಳನ್ನು, ನಿನ್ಱು ನಿನ್ಱು-ನಿಂತು ನಿಂತು (ಮನಸ್ಸನ್ನು ದೃಢಪಡಿಸಿ), ನಿನೈಕಿನ್ಱೇನ್-ಚೆನ್ನಾಗಿ ಸ್ಮರಿಸುತ್ತಿದೇನೆ. ಉನ್ನೈ - ನಿನ್ನನ್ನು, ಎಙ್ಙನಮ್-ಹೇಗೆ, ನಿನೈಕಿಱ್ಪನ್-(ಒಂದೇ ರೀತಿಯಲ್ಲಿರುವಂತೆ) ಸ್ಮರಿಸಬಲ್ಲೆನು? ಪಾವಿಯೇಱ್ಕು-ಪಾಪಿಯಾದ ನನಗೆ, ಉಲಕಮ್-ಲೋಕವನ್ನು, ಉಣ್ಡ-ಭಕ್ಷಿಸಿದ, ಒಣ್ಶುಡರೇ-ಅತ್ಯುಜ್ಜ್ವಲ ತೇಜೋನಿಧಿಯೇ !, ಒನ್ಱು ನನ್ಗು-ಒಂದು ಒಳ್ಳೇ ಉಪಾಯವನ್ನು, ಉರೈಯಾಯ್-(ಕೃಪೆಯಿಂದ) ಹೇಳು.

( ಸ-ಗಾ-ರ || )—

ಶಕ್ಯಾಸ್ತಿಷ್ಠನ್ತ್ಯಿತುಂ ಚ ನ ಸ್ಥಿತಿಸಮಾವೇಶೋಽಪವೇಶಾಸ್ತ್ರ ತೇ
ರೂಪಂ ನೈಕವಿಧಂ ತವೇಹ ಸಕಲಾಂ ಮಾಯಾಂ ಸ್ಮರೇಯಂ ತವ ।
ತ್ವಾಂ ಸ್ಮರ್ತುಂ ಬತ! ಶಕ್ನುಯಾಂ ಕಥಮಹಂ ತೇಜೋನಿಧೇ! ಪಾಪಿನ-
ಸ್ವಾಧೂಪಾಯಮಹೋ! ವದಾದ್ಯ ಕೃಪಯಾ ಮೇ ಲೋಕಸಂರಕ್ಷಕ ||

ತಾ॥ ನೀನು ನಿಂತೂ, ಕುಳಿತೂ, ಮಲಗಿಯೂ—ನಾನಾಪ್ರಕಾರಗಳಲ್ಲಿ (ಆಯಾ ಕ್ಷೇತ್ರಗಳಲ್ಲಿ) ಇರುವುದರಿಂದ ನಿನ್ನ ಸ್ಥಿತಿಕ್ರಮಗಳು ಸ್ಮರಿಸುವುದಕ್ಕೆ ಅಶಕ್ಯವಾದುವು. ಹೀಗೆ ಅನಿಯತವಾದ ಆಕಾರವುಳ್ಳವನಾಗಿಯೂ, ಅನುಭಾವ್ಯರೂಪವಿಲ್ಲದವನಾಗಿಯೂ ಇರುವ ನಿನ್ನ ಅದ್ಭುತ ಚೇಷ್ಟಿತಗಳನ್ನು ದೃಢವಾದ ಮನಸ್ಸಿನಿಂದ ನಾನು ಚೆನ್ನಾಗಿ ಸ್ಮರಿಸುತ್ತಿದೇನೆ. ಹೀಗಿರುವಲ್ಲಿ ನಿನ್ನನ್ನು (ಒಂದೇರೀತಿಯಲ್ಲಿರುವಂತೆ) ಹೇಗೆ ಸ್ಮರಿಸಬಲ್ಲೆನು ? ಸರ್ವಲೋಕ ಭಕ್ಷಕನಾದ ದಿವ್ಯತೇಜೋನಿಧಿಯೇ! ಪಾಪಿಯಾದ ನನಗೆ ಒಂದು ಒಳ್ಳೇ ಉಪಾಯವನ್ನು ನೀನು ಕೃಪೆಯಿಂದ ಹೇಳು.

(೨) ಒಣ್‌ಶುಡರೋಡಿರುಳುಮಾಯ್-
ನಿನ್ಱವಾಱುಮುಣ್ಮೈಯೋಡಿನ್ಮೈಯಾಯ್‌ವನ್ದು, ಎನ್
ಕಣ್‌ಕೊಳಾವಕೈ ನೀ ಕರನ್ದೆನ್ನೈ ಚ್ಚೆಯ್‌ಕಿನ್ಱನ,
ಎಣ್‌ಕೊಳ್ ಶಿನ್ದೈಯುಳ್ ನೈಕಿನ್ಱೇನ್ ಕರಿಯಮಾಣಿಕ್ಕಮೇ,
ಎನ್ ಕಣ್‌ಕಳ್ಕು
ತ್ತಿಣ್‌ಕೊಳ್ಳ ವೊರುನಾಳರುಳಾಯುನ್ ತಿರುವುರುವೇ.

ಪ್ರ॥ ಉಣ್ಮೈಯೋಡು – ನನ್ನ ಹೃದಯದಲ್ಲಿ ಪ್ರಕಾಶಿಸುವ ವಾಸ್ತವವಾದ ಆಕಾರದೊಡನೆ, ಇನ್ಮೈಯಾಯ್- ಬಹಿಃಪ್ರಕಾಶವಿಲ್ಲದವನಾಗಿ, ವನ್ದು–ಬಂದು; ಒಣ್‌ಶುಡರೋಡು-ಒಳ್ಳೆಯ ತೇಜಸ್ಸಿನೊಡನೆ ಕೂಡಿದ, ಇರುಳುಮಾಯ್ – ಅನ್ಧಕಾರವೆಂಬಂತೆ, ನಿನ್ಱವಾಱುಮ್–ನಿಂತ ಪ್ರಕಾರವನ್ನು, ಎನ್ ಕಣ್–ನನ್ನ ಕಣ್ಣು; ಕೊಳಾವಕೈ–ನಿನ್ನನ್ನು ಅನುಭವಿಸದೆ ಇರುವಂತೆ, ಕರನ್ದು- ಒಳಗೆ ಮರೆಸಿಕೊಂಡು, ನೀ – ನೀನು, ಎನ್ನೈ – ನನ್ನನ್ನು, ಶೆಯ್‌ಕಿನ್ಱನ-ಮಾಡುವ ಪ್ರಕಾರಗಳನ್ನು, ಎಣ್‌ಕೊಳ್–ಚಿನ್ತಿಸಬೇಕೆಂಬ, ಶಿನ್ದೈಯುಳ್ ಮನಸ್ಸಿನೊಡನೆ, ನೈಕಿನ್ಱೇನ್ – ಶಿಥಿಲನಾಗುತ್ತಿದೇನೆ. ಎನ್ ಕರಿಯಮಾಣಿಕ್ಕಮೇ – ನನ್ನ ನೀಲಮಣಿಯಂತೆ ವರ್ಣವುಳ್ಳವನೇ, ಉನ್ ತಿರುವುರುವೇ–ನಿನ್ನ ದಿವ್ಯರೂಪವನ್ನೇ, ಎನ್ ಕಣ್‌ಕಳ್ಕು – ನನ್ನ ಕಣ್ಣುಗಳಿಗೆ, ತಿಣ್‌ಕೊಳ್ಳ – ಸ್ಥಿರವಾಗಿ ಕಾಣುವಂತೆ, ಒರುನಾಳ್ – ಒಂದುದಿನ, ಅರುಳಾಯ್–ಕೃಪೆಮಾಡು (ಕೃಪೆಯಿಂದ ತೋರಿಸು).

( ಸ–ಗಾ–ರ || )—
ಚಿತ್ತೇ ಮೇಽತ್ರ ವಿಭಾಸಿ ನೈವತು ಬಹಿಸ್ತೇ ರೂಪಸನ್ದರ್ಶನಂ
ತೇಜೋ ಭಾತಿ ತಮೋಯುತಂ ಕಿಮಹಹ! ತ್ವಂ ದೃಷ್ಟಿವಶ್ಯೋ ನ ಮೇ|
ತ್ವದ್ವ್ಯಾಪಾರಮಿಹಾಖಿಲಂ ಹೃದಿ ಕಥಂ ವೇದ್ಮಿ ಸ್ವಯಂ ಹೇ ಪ್ರಭೋ !
ರೂಪಂ ತೇ ಕೃಪಯಾಽದ್ಯ ದರ್ಶಯ ಮಮ ಶ್ರೀನೀಲರತ್ನಪ್ರಭ ||

ತಾ|| ನನ್ನ ಹೃದಯದಲ್ಲಿ ಪ್ರಕಾಶಿಸುತ್ತೀಯೆ ; ನಿನ್ನ ರೂಪವು ಬಹಿಃಪ್ರಕಾಶ ವಿಲ್ಲದೆ ಇದೆ ದಿವ್ಯತೇಜಸ್ಸಿನೊಡನೆ ಕೂಡಿದ ಅನ್ಧಕಾರದಂತೆ ನೀನು ನಿಂತಿರುವ ಪ್ರಕಾರವನ್ನೂ, ನನ್ನ ಕಣ್ಣಿಗೆ ಗೋಚರವಾಗದೆ ಮರೆಸಿಕೊಂಡು ನೀನು ಮಾಡುವ ಕಾರ್ಯಗಳನ್ನೂ ನನ್ನ ಮನಸ್ಸಿನಲ್ಲಿ ಚಿನ್ತಿಸಬೇಕೆಂದು ಕುತೂಹಲದಿಂದ ನಾನು ಕೃಶ ನಾಗುತ್ತಿದೇನೆ. ನನ್ನ ನೀಲಮಣಿವರ್ಣನೇ ! ನಿನ್ನ ದಿವ್ಯರೂಪವನ್ನೇ ನನ್ನ ಕಣ್ಣುಗಳಿಗೆ ಚೆನ್ನಾಗಿ ಗೋಚರವಾಗುವಂತೆ ಒಂದುದಿನ ತೋರಿಸಿ ಕೃಪೆಮಾಡು.

(೮) ತಿರುವುರುವು ಕಿಡನ್ದವಾಱುಮ್ ಕೊಪ್ಪೂಳ್
ಶೆನ್ದಾಮರೈಮೇಲ್ ತಿಶೈಮುಕನ್,
ಕರುವುಳ್ ವೀಱ್ಱಿರುನ್ದು ಪಡೈತ್ತಿಟ್ಟ ಕರುಮಙ್ಗಳುಮ್,
ಪೊರುವಿಲನ್ ತನಿನಾಯಕಮವೈ
ಕೇಳ್ಕ್ಕುನ್ದೋಱುಮೆನ್ನೆಞ್ಜಮ್ ನಿನ್ಱುನೆಕ್ಕು
ಅರುವಿಶೋರುಮ್ ಕಣ್ಣೀರೆನ್ ಶೆಯ್ಹೇನಡಿಯೇನೇ.

ಪ್ರ|| ತಿರು ಉರುವು – (ಪ್ರಳಯಾರ್ಣವದಲ್ಲಿ) ದಿವ್ಯರೂಪದೊಡನೆ, ಕಿಡನ್ದ ವಾಱುಮ್ – (ನೀನು) ಶಯನಮಾಡಿದ ಪ್ರಕಾರವೂ, ಕೊಪ್ಪೂಳ್ – ನಾಭಿಯಲ್ಲಿ, ಶೆನ್ದಾಮರೈಮೇಲ್-ಕೆಂಪಾದ ತಾವರೆಹೂವಿನಮೇಲೆ, ತಿಶೈಮುಕನ್-ಚತುರ್ಮುಖನ, ಕರುವುಳ್ – ಹೃದಯದಲ್ಲಿ, ವೀಱ್ಱು ಇರುನ್ದು–ಅನ್ತರಾತ್ಮನಾಗಿ ಬಿಜಯಮಾಡಿ, ಪಡೈತ್ತಿಟ್ಟ–(ನೀನೇ ಜಗತ್ತನ್ನು) ಸೃಷ್ಟಿಸಿದ, ಕರುಮಙ್ಗಳುಮ್–ವ್ಯಾಪಾರಗಳೂ, ಪೊರುವಿಲ್ – ಅಸದೃಶವಾದ, ಅನ್ ತನಿನಾಯಕಮ್–ಅದ್ವಿತೀಯ ನಾಯಕತ್ವ ಪ್ರಕಾಶಕವಾದ, ಅವೈ – ಅವುಗಳನ್ನೆಲ್ಲಾ, ಕೇಳ್ಕ್ಕುಮ್ ತೋಱುಮ್–ಕೇಳುವಾಗ ಲೆಲ್ಲಾ, ಎನ್ನೆಞ್ಜಮ್–ನನ್ನ ಮನಸ್ಸು, ನಿನ್ಱು ನೆಕ್ಕು–ನಿಂತು ಶಿಥಿಲವಾಗಿ, ಕಣ್ಣೀರ್– ಕಣ್ಣುನೀರು; ಅರುವಿಶೋರುಮ್- ಪ್ರವಾಹದಂತೆ ಸುರಿಯುತ್ತಿರುವುದು.

( ಸ-ಗಾ-ರ || ) —

ದಿವ್ಯಂ ತೇ ಶಯನಂ ಚ ನಾಭಿಕಮಲಾತ್ ಸೃಷ್ಟಂ ಚತುರ್ವಕ್ತ್ರಮ-
ಪ್ಯನ್ತರ್ಯಾಮಿತಯಾ ಪ್ರವಿಶ್ಯ ಸಕಲಂ ಸೃಷ್ಟ್ಯಾದಿಕರ್ಮಾಪಿ ತೇ |
ನಿಸ್ಸೀಮಂ ತವ ನಾಯಕತ್ವಮಸಮಂ ಶ್ರುತ್ವಾ ದ್ರವೀಭೂಯ ಮೇ
ಚೇತೋ ಹನ್ತ! ಮಮಾಶ್ರುಪೂರಸರಣೇರ್ಮೂಲಂ ಹಿ! ಕುರ್ಯಾಂ ಕಿಮು?||

ತಾ|| ನೀನು ಪ್ರಳಯಾರ್ಣವದಲ್ಲಿ ದಿವ್ಯರೂಪದೊಡನೆ ಶಯನಮಾಡಿದ ಪ್ರಕಾರವೂ, ನಿನ್ನ ನಾಭಿಕಮಲದಲ್ಲಿ ಚತುರ್ಮುಖನನ್ನು ಸೃಷ್ಟಿಸಿ ಅವನಿಗೆ ಅನ್ತರಾತ್ಮನಾಗಿ ನೀನೇ ಜಗತ್ಸೃಷ್ಟಿಯನ್ನು ಮಾಡಿದ ವ್ಯಾಪಾರಗಳೂ, ನಿನ್ನ ಅಸದೃಶವಾದ ಅದ್ವಿತೀಯ ನಾಯಕತ್ವ ಪ್ರಕಾಶಕವಾದ ಅವುಗಳನ್ನೆಲ್ಲಾ ಕೇಳುವ ಸಮಯದಲ್ಲೆಲ್ಲಾ-ನನ್ನ ಮನಸ್ಸು ಶಿಥಿಲವಾಗಿ, ನನ್ನ ಕಣ್ಣು ನೀರು ಪ್ರವಾಹದಂತೆ ಧಾರೆಯಾಗಿ ಹರಿಯುತ್ತಿರುವುದು (ಏನು ಮಾಡಲಿ ?—ಎಂದು ಭಾವವು)

(೯) ಅಡಿಯ್ಮೂನ್ಱಿಲ್ ಇರನ್ದವಾಱುಮಙ್ಗೇ
ನಿನ್ಱಾಳ್ಕಡಲುಮ್ ಮಣ್ಣುಮ್ ವಿಣ್ಣುಮ್,
ಮುಡಿಯವೀರಡಿಯಾಲ್ ಮುಡಿತ್ತುಕ್ಕೊಣ್ಡ ಮುಕ್ಕಿಯಮುಮ್,
ನೊಡಿಯುಮಾಱವೈ ಕೇಳ್ಕ್ಕುಮ್ ತೋಱುಮೆನ್ನೆಞ್ಜಮ್
ನಿಱ್ಕತನಕ್ಕೇ ಕರೈನ್ದುಕುಮ್,
ಕೊಡಿಯ ವಲ್ವಿನೈಯೇನುನ್ನೈ ಯೆನ್ಱುಕೊಲ್ ಕೂಡುವದೇ.

ಪ್ರ|| ಅಡಿಯ್ಮೂನ್ಱಿಲ್-ಮೂರು ಹೆಜ್ಜೆ ಭೂಮಿಯನ್ನು, ಇರನ್ದವಾಱುಮ್-ಯಾಚಿಸಿದ ಪ್ರಕಾರವೂ, ಅಙ್ಗೇ-ಅಲ್ಲಿ (ಆ ಯಜ್ಞವಾಟದಲ್ಲಿ), ನಿನ್ಱು ನಿಂತೇ, ಆೞ್ಕಡಲುಮ್ - ಅಗಾಧವಾದ ಸಮುದ್ರಗಳನ್ನೂ, ಮಣ್ಣುಮ್ ವಿಣ್ಣುಮ್-(ಸಪ್ತದ್ವೀಪ ಸಹಿತವಾದ) ಭೂಲೋಕವನ್ನೂ (ಬ್ರಹ್ಮಲೋಕ ಪರ್ಯನ್ತವಾದ) ಊರ್ಧ್ವಲೋಕವನ್ನೂ, ಈರಡಿಯಾಲ್ - ಎರಡು ಪಾದಗಳಿಂದ, ಮುಡಿಯ-ಸಮ್ಪೂರ್ಣವಾಗಿ ವಶವಾಗುವಂತೆ, ಮುಡಿತ್ತುಕ್ಕೊಣ್ಡ - ಅಳೆದು ತನ್ನ ಮನೋರಥವನ್ನು ಸಫಲಮಾಡಿಕೊಂಡ, ಮುಕ್ಕಿಯಮುಮ್-ಪ್ರಾಧಾನ್ಯವೆಂಬ, ಅವೈ-ಆ ವ್ಯಾಪಾರಗಳನ್ನೆಲ್ಲಾ, ನೊಡಿಯುಮ್ ಆಱು - ವರ್ಣಿಸುವ ಪ್ರಕಾರವನ್ನು,

ಕೇಳ್ಕುಮ್ ತೋಱುಮ್-ಕೇಳುವಾಗಲೆಲ್ಲಾ, ಎನ್ ನೆಞ್ಜಮ್ - ನನ್ನ ಮನಸ್ಸು, ನಿನ್ ತನಕ್ಕೇ-ನಿನ್ನ ಸೌಶೀಲ್ಯಾತಿಶಯಕ್ಕೇ, ಕರೈನ್ದು-ದ್ರವೀಭೂತವಾಗಿ, ಉಕುಮ್-ಸ್ರವಿಸುತ್ತಿದೆ ವಲ್-ಪ್ರಬಲವಾದ, ಕೊಡಿಯ – ಕ್ರೂರವಾದ, ವಿನೈಯೇನ್-ಮಹಾ ಪಾಪವುಳ್ಳ ನಾನು, ಉನ್ನೈ-ನಿನ್ನನ್ನು, ಎನ್ಱುಕೊಲ್-ಯಾವಾಗಲೋ, ಕೂಡುವದು-ಸೇರುವುದು ?

( ಸ-ಗಾ- ರ || )—

ಭೂಮಿಂ ಚ ತ್ರಿಪದಾಂ ತವಾರ್ಥಿತವತಶ್ಚಿತ್ರಂ ಚರಿತ್ರಂ ಚ ತತ್
ಸರ್ವಾನಬ್ಧಿಧರಾದ್ಯುಲೋಕಸರಣಿಂ ಚಾಕ್ರಮ್ಯ ಪದ್ಭ್ಯಾಂ ತವ |
ಪ್ರಾಧಾನ್ಯಂ ಚ ನಿರಙ್ಕುಶಂ ತವ ಹರೇರಾಕರ್ಣ್ಯ ಚೇತೋ ಮಮ
ಶ್ರೀಶಾದ್ಯ ದ್ರವರೂಪತಸ್ಸ್ರವತಿ ವೈ! ಪಾಪೀ ಕದಾ ತ್ವಾಂ ಭಜೇ ? ||

ತಾ|| ಮೂರು ಹೆಜ್ಜೆ ಭೂಮಿಯನ್ನು ನೀನು ಯಾಚಿಸಿದ ಪ್ರಕಾರವೂ, ಅಲ್ಲಿ ನಿಂತೇ ಸಮುದ್ರಗಳನ್ನೂ ಭೂಮಿಯನ್ನೂ ಆಕಾಶವನ್ನೂ ಸಮಗ್ರವಾಗಿ ನಿನ್ನ ಎರಡು ಪಾದಗಳಿಂದ ಆಕ್ರಮಿಸಿ ನಿನ್ನ ಮನೋರಥಸಿದ್ಧಿಯಂ ಪಡೆದ ಪ್ರಾಧಾನ್ಯವೂ-ಇವುಗಳನ್ನೆಲ್ಲಾ ಕೇಳುವ ಸಮಯದಲ್ಲೆಲ್ಲಾ ನನ್ನ ಮನಸ್ಸು ನಿನ್ನ ಸೌಶೀಲ್ಯಾದಿ ಗುಣಕ್ಕೆ ವಶವಾಗಿ ದ್ರವೀಭೂತವಾಗಿ ಸ್ರವಿಸುತ್ತಿದೆ. ಇಂತಹ ಪ್ರಬಲವಾದ ಮಹಾ ಪಾಪವುಳ್ಳ ನಾನು ನಿನ್ನನ್ನು ಸೇರಿ ಅನುಭವಿಸುವುದು ಯಾವಾಗಲೋ ?—(ಎಂದು ಚಿನ್ತಾಕ್ರಾನ್ತರಾಗುತ್ತಾರೆ.)

(೧೦) ಕೂಡಿ ನೀರೈ ಕ್ಕಡೈನ್ದವಾಱುಮ್ಅಮುದನ್ದೇವರುಣ್ಣ ಅಶುರರೈ
ವೀಡುಮ್ ವಣ್ಣಙ್ಗಳೇ ಶೆಯ್ದು ಪೋನ ವಿತ್ತಕಮುಮ್,
ಊಡುಪುಕ್ಕೆನದಾವಿಯೈ ಯುರುಕ್ಕಿ ಯುಣ್ಡಿಡುಕಿನ್ಱ ನಿನ್ತನ್ನೈ
ನಾಡುಮ್ ವಣ್ಣಮ್ ಶೊಲ್ಲಾಯ್ ನಚ್ಚುನಾಕಣೈಯಾನೇ.

ಪ್ರ|| ಕೂಡಿ-ದೇವಾಸುರರೊಡನೆ ಕೂಡಿ, ನೀರೈ-ಸಮುದ್ರವನ್ನು, ಕಡೈನ್ದ-ಮಥನಮಾಡಿದ, ಆಱುಮ್-ಪ್ರಕಾರವೂ, ಅಮುದಮ್-ಅಮೃತವನ್ನು, ತೇವರ್-ದೇವತೆಗಳು, ಉಣ್ಣ-ಭುಜಿಸುವಂತೆ, ಅಶುರರೈ – ಅಸುರರನ್ನು, ವೀಡುಮ್-ಬಿಡಿಸುವ (ವಂಚಿಸುವ), ವಣ್ಣಙ್ಗಳ್ – (ಮೋಹಿನೀವೇಷಧಾರಣಾದಿ) ಪ್ರಕಾರಗಳನ್ನು, ಶೆಯ್ದುಪೋನ-ಮಾಡಿದ, ವಿತ್ತಕಮುಮ್-ವಿಸ್ಮಯಾವಹವಾದ ವ್ಯಾಪಾರವೂ, ಊಡು ಪುಕ್ಕು-ನನ್ನ ಹೃದಯದ ಒಳಗೆ ಪ್ರವೇಶಿಸಿ, ಎನದು ಆವಿಯೈ-

ನನ್ನ ಆತ್ಮವಸ್ತುವನ್ನು, ಉರುಕ್ಕಿ–ದ್ರವೀಕರಿಸಿ, ಉಣ್ಡಿಡುಕಿನ್ರ–ಭಕ್ಷಿಸುತ್ತಿವೆ. ನಞ್ಜು–ವಿರೋಧಿ ಧ್ವಂಸಕವಾದ ವಿಷವುಳ್ಳ, ನಾಕು–ಸರ್ಪವಾದ ಆದಿಶೇಷನನ್ನು, ಅಣೈಯಾನೇ – ಶಯನವನ್ನಾಗಿ ಮಾಡಿಕೊಂಡಿರುವ ಸ್ವಾಮಿಯೇ, ನೀ ತನ್ನೈ–ನಿನ್ನನ್ನು, ನಾಡುಮ್ – (ನಾನು) ನಿತ್ಯಾನುಭವ ಮಾಡುವ, ವಣ್ಣಮ್–ಪ್ರಕಾರವನ್ನು, ಶೊಲ್ಲಾಯ್–(ಕೃಪೆಯಿಂದ) ಹೇಳು.

( ಸ. ಗಾ–೮ || )—

ತ್ವಂ ದೇವಾಸುರಸಙ್ಗತೋಽಬ್ಧಿಮಥನಂ ಕೃತ್ವಾ ಸುಧಾಂ ದೇವತಾ-
ಭೋಜ್ಯಾಮೇವ ಕಥಂ ವಿಚಿತ್ರಚರಿತಸ್ತತ್ರಾಸುರಾನ್ ವಞ್ಚಯನ್ |
ಆಸೀರ್ಹನ್ತ!ತದೇತದದ್ಯ ಸಕಲಂ ಚಿತ್ತಂ ಪ್ರವಿಶ್ಯಾತ್ರ ಮೇ
ಸ್ವಾತ್ಮಾನಂ ದ್ರವಯತ್ಯಹೋ! ಕಥಮಹಂ ತ್ವಾಂ ಶೇಷಶಾಯಿನ್! ಭಜೇ?||

ನೀನು ದೇವತೆಗಳೊಡನೆಯೂ ಅಸುರರೊಡನೆಯೂ ಕೂಡಿ ಸಮುದ್ರಮಥನವಂ ಮಾಡಿ, ಅಮೃತವನ್ನು ದೇವತೆಗಳು ಭುಜಿಸುವಂತೆ ಅಸುರರನ್ನು ವಂಚಿಸಿದಪ್ರಕಾರಗಳೆಲ್ಲಾ ಅತಿ ವಿಸ್ಮಯಕರವಾದ ವ್ಯಾಪಾರಗಳಾದುದರಿಂದ ನನ್ನ ಹೃದಯದೊಳಗೆ ಪ್ರವೇಶಿಸಿ ನನ್ನ ಆತ್ಮವಸ್ತುವನ್ನು ದ್ರವೀಕರಿಸಿ ಭಕ್ಷಿಸುತ್ತಿವೆ ಶೇಷಶಾಯಿಯಾದ ಸ್ವಾಮಿಯೇ! ನಿನ್ನ ನಿತ್ಯಾನುಭವವನ್ನು ನಾನು ಹೊಂದುವ ಬಗೆಯನ್ನು ನನಗೆ ಕೃಪೆಯಿಂದ ಹೇಳು.

(೧೧) ನಾಕಣೈಮಿಶೈ ನಮ್‌ಪಿರಾನ್ ಶರಣೇ ಶರಣ್
ನಮಕ್ಕೆನ್ರು, ನಾಳ್‌ತೊಱುಮ್
ಏಕಶಿನ್ದೈಯನಾಯ್ ಕ್ಕುರುಕೂರ್ ಚ್ಚಡಕೋಪನ್ ಮಾಱನ್,
ಆಕ ನೂಱ್ಱ ವನ್ದಾದಿಯಾಯಿರತ್ತುಳ್ಳಿವೈಯುಮೋರ್‌ಪತ್ತುಮ್
ವಲ್ಲಾರ್,
ಮಾಕವೈಕುನ್ದತ್ತು ಮಕಿಳ್ವೆಯ್‌ದುವರ್ ವೈಕಲುಮೇ.

ಪ್ರ|| ನಾಕಣೈಮಿಶೈ – ಶೇಷಶಯನದಮೇಲೆ ಮಲಗಿರುವ, ನಮ್ ಪಿರಾನ್–ನಮ್ಮ ಸ್ವಾಮಿಯ, ಶರಣೇ–ಚರಣಗಳೇ, ನಮಕ್ಕು–ನಮಗೆ, ಶರಣ್–ಉಪಾಯವು, ಎನ್ರು–ಎಂದು, ನಾಳ್‌ತೊಱುಮ್–ಪ್ರತಿದಿನವೂ, ಏಕಶಿನ್ದೈಯನಾಯ್–ಏಕಚಿತ್ತೆಯುಳ್ಳವನಾಗಿ, ಕುರುಕೂರ್ ಶಡಕೋಪನ್–ಶ್ರೀ ಕುರುಕಾಪುರಿಯ ಶಠಕೋಪಮುನಿ

ಯೆಂಬ, ಪೂರ್ಣ-ನಮ್ಮ ಸ್ವಾಮಿಯ, ಅಕ-ಉಜ್ಜೀವನಕ್ಕಾಗಿ, ಸೊಲ್ಲ-ರಚಿಸಿದ, ಅನ್ಬಾದಿ-ಅನ್ತಾದಿ ರೂಪವಾದ, ಆಯಿರತ್ತುಳ್ - ಸಹಸ್ರ ಪದ್ಯಮಾಲೆಯೊಳು, ಓರ್-ಅದ್ವಿತೀಯವಾದ, ಇಪ್ಪೈಯುಮ್ ಪತ್ತುಮ್-ಈ ದಶಕವನ್ನು, ವಲ್ಲಾರ್-ಬಲ್ಲವರು, ಮಾಕ - ಪರಮಾಕಾಶವಾದ, ವೈಕುನ್ದತ್ತು - ಶ್ರೀ ವೈಕುಣ್ಠದಲ್ಲಿ, ವೈಕಲುಮ್ - (ಯಾವದಾತ್ಮ ಭಾವಿಯಾದ) ಸರ್ವ ಕಾಲದಲ್ಲೂ, ಮಕಿಳ್ನ್ದು ಎಯ್ದುವರ್-ಆನನ್ದ ನಿರ್ಭರರಾಗುವರು.

( ಸ-ಗಾ-ರ || )—

ಅಸ್ಮನ್ನಾಯಕಮೇವ ನಾಗಶಯನಂ ತತ್ಪಾದಪದ್ಮಾಶ್ರಯಃ
ಪ್ರಾಪ್ತುಂ ಶ್ರೀಶಠಜಿತ್ ಸಹಸ್ರಗಣಿತಾಂ ಪದ್ಯಾವಳೀಂ ಚಾಕರೋತ್ |
ಹೃದ್ಯಾಂ ಶ್ರೀಕುರುಕಾಪುರಪ್ರಭುರಥಾವನ್ತಾದಿರಮ್ಯಾಂ ಮುನಿ-
ಸ್ತತ್ರೇದಂ ದಶಕಂ ವಿಚಿನ್ತ್ಯ ಮನುಜಾ ವೈಕುಣ್ಠಸೌಖ್ಯಾಶ್ರಯಾಃ ||

ತಾ|| ಶೇಷಶಯನದಮೇಲೆ ಮಲಗಿರುವ ನಮ್ಮ ಸ್ವಾಮಿಯ ಚರಣಯುಗಳವೇ ಶರಣವೆಂದು ಪ್ರತಿದಿನವೂ ತದೇಕ ಚಿನ್ತೆಯುಳ್ಳವರಾಗಿ ಶ್ರೀ ಕುರುಕಾಪುರಿಯ ಶಠಾರಿ ಮುನಿವರ್ಯರು ಉಜ್ಜೀವನಕ್ಕಾಗಿ ರಚಿಸಿದ ಅನ್ತಾದಿ ರೂಪವಾದ ಸಹಸ್ರ ಪದ್ಯಮಾಲೆಯೊಳು, ಅದ್ವಿತೀಯವಾದ ಈ ದಶಕವನ್ನು ಬಲ್ಲವರು ಪರಮಾಕಾಶವಾದ ಶ್ರೀ ವೈಕುಣ್ಠದಲ್ಲಿ (ಪರಮಪದದಲ್ಲಿ) ಸರ್ವಕಾಲದಲ್ಲೂ (ಶ್ರೀ ಪರಮಾತ್ಮಾನುಭವದಿಂದ) ಆನನ್ದಭರಿತರಾಗುವರು.

( ದ್ರು-ಉ-ಸಂ || )—

ಅರ್ಚಾಂ ಚ ಮೌನನಿಯತಾಮುಪಹಾಯ ಶೌರೇ-
ರಾಲಾಪಯೋಗ್ಯವಿಭವೇ ಪುನರಾಗತೋ ಽಸೌ |
ಚಿತ್ತಸ್ಯ ತದ್ಗುಣಗಣಸ್ಮರಣೇ ನಿಜಸ್ಯ
ಶೈಥಿಲ್ಯವಿಘ್ನಶಮನೇ ತಮಯಾಚತಾನ್ತ್ಯೇ ||

( ದ್ರು-ಉ-ತಾ-ರ || )—

ಪ್ರಾದುರ್ಭಾವಾದಿವೃತ್ತೈರ್ವೃಷಗಣದಮನಾತ್ಪೂತನಾಶಾತನಾದ್ಯೈ-
ರ್ಮೋಹಾರ್ಥಂ ಬೌದ್ಧಕೃತ್ಯೈರ್ಗಿರಿವರಭಜನಸ್ವೀಕೃತೇಸ್ಸ್ಥಾನಭೇದೈಃ|
ತೇಜೋಧ್ವಾನ್ತಾದಿಭಾವಾಜ್ಜಲನಿಧಿಶಯನಾದ್ಭಿಕ್ಷಣಾದ್ಯೈಃ ಸ್ತ್ರಿಪದ್ಯಾಃ
ಪೀಯೂಷಸ್ಪರ್ಶನಾದ್ಯೈಶ್ಶಿಥಿಲಯತಿ ಹರಿಸ್ಸ್ವೀಯಹೃಚ್ಚೇತ್ಯಧೋಚೇ||

**ಇತ್ಥಂ ಕಾರುಣ್ಯನಿಘ್ನಂ ದುರಿತಹರಜನಂ ಪ್ರೇಮತೀವ್ರಂ ದುಃಖಾನಂ**
**ಲೋಕಾನಾಂ ರಕ್ಷಿತಾರಂ ಸ್ಮೃತಿವಿಷಯನುಹನ್ಭಾವನಾಗೋಚರಂ ಚ |**
**ದೀನಾನಾಂ ಸಚ್ಛರಣ್ಯಂ ಸ್ವರಸಕೃತನಿಜಪ್ರೇಷ್ಯತಾವಾಞ್ಛಮೂಚೇ**
**ಪ್ರಾಪ್ತುಂ ಶಕ್ತಿಪ್ರದಂ ಶ್ರೀಪತಿಮಿಹ ಶತಕೇ ಶ್ರೇಯಸಾಮೇಕಹೇತುಮ್||**

(ಈ ದಶಮದಶಕದ ಸಾರಾಂಶ—)

ಈ ಹತ್ತನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಅರ್ಚಾವತಾರಾನುಭವದ ಅಲಾಭದಿಂದ ಖಿನ್ನರಾಗಿ ಶ್ರೀ ಕೃಷ್ಣಾವತಾರದ ಬಾಲ್ಯ ಚೇಷ್ಟಿತಗಳನ್ನೂ ಮತ್ತು ಸರ್ವಾಧಿಕತ್ವಸೂಚಕವಾದ ಸೃಷ್ಟ್ಯಾದಿ ವ್ಯಾಪಾರಗಳನ್ನೂ, ವಾಮನಾವತಾರಾದಿ ವಿಸ್ಮಯಕೃತ್ಯಗಳನ್ನೂ, ಮೋಹಿನ್ಯವತಾರಾದಿ ಚೇಷ್ಟಿತಗಳನ್ನೂ ಸ್ಮರಿಸಿ, ತನುಮನಶ್ಶೈಥಿಲ್ಯವನ್ನು ನಿವಾರಣಮಾಡಬೇಕೆಂದು ಪ್ರಾರ್ಥಿಸಿ ಕೃತಾರ್ಥರಾಗಿದಾರೆ.

(ಈ ಪಞ್ಚಮಶತಕದ ಸಾರಾಂಶ—)

ಈ ಪಞ್ಚಮಶತಕದಲ್ಲಿ—(೧) ಉಪಾಯಭೂತನಾದ ಭಗವನ್ತನ ಕೃಪಾಪಾರವಶ್ಯತ್ವವೂ (೨) ಭಾಗವತದ್ವಾರಾ ಚೇತನವಶೀಕರಣಪ್ರಕಾರವೂ (೩) ಪ್ರಾಪ್ಯತ್ವರಾಜನನ ರೀತಿಯೂ (೪) ರಕ್ಷಕತ್ವಸಾಮರ್ಥ್ಯವೂ (೫) ಪ್ರೀತ್ಯಪ್ರೀತಿ ಜನನಪ್ರಕಾರವೂ (೬) ಅಹಮ್ಭಾವವಿಷಯತ್ವವೂ (೭) ಉಪಾಯಭಾವಪ್ರಕಾಶವೂ (೮) ಪ್ರತಿಪತ್ತಿಜನನವೂ (೯) ವಿಶ್ವಾಸಜನನವೂ (೧೦) ಫಲಪರ್ಯನ್ತವಾದ ವಿಶ್ವಾಸಾನುವೃತ್ತಿಯ ಜನಕತ್ವವೂ—ಕ್ರಮೇಣ ಹತ್ತು ದಶಕಗಳಲ್ಲಿಯೂ ಶ್ರೀ ಶಠಾರಿಮುನಿವರ್ಯರಿಂದ ವರ್ಣಿಸಲ್ಪಟ್ಟಿವೆ

**ಈ ಪ್ರಕಾರ ಈ ಐದನೆಯ ಶತಕದಲ್ಲಿ ಸಿದ್ಧೋಪಾಯ ಸ್ವರೂಪ ಯಾಥಾತ್ಮ್ಯವು ಪ್ರತಿಪಾದಿತವಾಗಿದೆ.**



ಶ್ರೀಮದ್ಯಾದವಶೈಲಶೃಙ್ಗರವಿಣಾ ಶ್ರೀಶಲ್ಕಿಸಿಂಹಾತ್ಮನಾ
ಶ್ರೀಮಲ್ಲೇಶ್ವರಕೃಷ್ಣಸನ್ನಿಧಿಜುಷಾ ಕಲ್ಯಾಣಪುರ್ಯಾಮಿಹ |
ಸರ್ವೇಷಾಂ ಜಗತಾಂ ತಮಶ್ಶಮಯತಾ ಕರ್ಣಾಟವಾಣ್ಯಾಽಧುನಾ
ವ್ಯಾಖ್ಯಾತಂ ಶತಕಂ ಚ ಪಞ್ಚಮಮಿದಂ ಗಾಥಾಸಹಸ್ರೇ ಮುನೇಃ||

ಲಲಿತಸರಣಿನಾವ್ನಾ ಕೋಮಲಾ ದಿವ್ಯಭಾವಾ
ಜಯತು ಜಗತಿ ಟೀಕಾ ಮೋಽತ್ರ ಕರ್ಣಾಟವಾಣ್ಯಾ |
ಶಠರಿಪುಮುನಿಗಾಥಾದಿವ್ಯಸಾಹಸ್ರಮಾಲಾ-
ವಿವೃತಿರಮೃತಪೂರ್ಣಾ ಲೋಕಸಞ್ಜೀವಿನೀಯಮ್ ||



ಸಹಸ್ರಗಾಥಾರತ್ನಾವಳ್ಯಾಖ್ಯಾ ಖ್ಯಾಖ್ಯಾ ಮಯಾ ಕೃತಾ |
ಗೈರ್ವಾಣೀ! ಶತಕಂ ತತ್ರ ಪಞ್ಚಮಂ ವಿವೃತಂ ಶುಭಮ್ ||
ಮಮ ಶ್ರೀಕಲ್ಕಿಸಿಂಹಸ್ಯ ಭಕ್ತಾ ಭಗವತೋ ಹರೇಃ |
ಶಠಾರಿವತ್ಸ್ಯಯಂ ಭೋಗ್ಯಾಃ ಪರಮಾನನ್ದಮಾಪ್ನುಯುಃ ||



ಇಂತು ಶ್ರೀ ಶಠಾರಿಮುನಿವರ್ಯ ವಿರಚಿತವಾದ
ತಿರುವಾಯ್ಮೊಳಿಯೆಂಬ
ಸುಪ್ರಸಿದ್ಧವಾದ ಸಹಸ್ರಗಾಥಾತ್ಮಕ-ದ್ರಾವಿಡದಿವ್ಯಪ್ರಬನ್ಧದ
ಲಲಿತಸರಣಿಯೆಂಬ ಕರ್ಣಾಟಭಾಷಾಟೀಕೆಯೊಳ್
ಪಞ್ಚಮಶತಕದ ವ್ಯಾಖ್ಯಾನವು ಇಲ್ಲಿಗೆ
ಸಮ್ಪೂರ್ಣವಾಗಿದೆ.



ಶ್ರೀಮತೇ ಶಠಕೋಪಾಯ ನಮಃ
ಶ್ರೀಮತೇ ಕಲ್ಕಿಸಿಂಹಾಯ ಭಗವತೇ ನಮಃ



ಮಙ್ಗಳಂ ಕಲ್ಕಿಸಿಂಹಾಯ ಶ್ರೀಮತೇ ಪರಮಾತ್ಮನೇ |
ಶ್ರೀ ಶಠಾರಿಮುನೀನ್ದ್ರಾಯ | ಸರ್ವೇಷಾಮಸ್ತು ಮಙ್ಗಳಮ್ ||

ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು ಸಿಟಿ.

ಶ್ರೀಃ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

ಎಂಬ

## ಸಹಸ್ರಗಾಥಾತ್ಮಕ - ದ್ರಾವಿಡ ದಿವ್ಯಪ್ರಬನ್ಧ

ಶ್ರೀ ಕಲ್ಕಿಸಿಂಹಭಗವದ್ವಿರಚಿತವಾದ—(೧) ಕನ್ನಡಪ್ರತಿಪದಾರ್ಥ

(೨) ಸಂಸ್ಕೃತಪದ್ಯಾತ್ಮಕ—ಸಹಸ್ರಗಾಥಾರತ್ನಾವಳೀ

(೩) ಕನ್ನಡತಾತ್ಪರ್ಯ—ಸಮೇತ

(ದ್ರಮಿಡೋಪನಿಷತ್ಸಂಗತಿ-ದ್ರಮಿಡೋಪನಿಷತ್ತಾತ್ಪರ್ಯರತ್ನಾವಳೀ-ಸಹಿತ)



ಪ್ರಥಮ ಸಮ್ಪುಟ

## ೧—೫ ಶತಕಗಳು

(ಸವ್ಯಾಖ್ಯಾನ)

ಬೆಂಗಳೂರು

ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್ ಯವರ

ಎಲೆಕ್ಟ್ರಿಕ್ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿದೆ

1931.



Price Rs. 4.
Postage Extra.

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ಶರಕೋಪಾಯ ನಮಃ

ಶ್ರೀಮತೇ ಕಲ್ಕಿಸಿಂಹಾಯ ಭಗವತೇ ನಮಃ

## ತಿರುವಾಯ್ಮೊೞಿಯ ಕನ್ನಡ ವ್ಯಾಖ್ಯಾನದ

# ಉಪೋದ್ಘಾತ

ಶ್ರೀಮಾನ್ ಕಲ್ಕಿನೃಸಿಂಹಾರ್ಯಃ ಪ್ರತಿವಾದಿಭಯಙ್ಕರಃ ।
ಸಹಸ್ರಗಾಥಾವ್ಯಾಖ್ಯಾಯಾ ಉಪೋದ್ಘಾತಂ ಬ್ರವೀಮಿ ಮೇ
ದಿವ್ಯಸೂರಿವರ್ಯೈರೇವ ಶಠಾರಿಪ್ರಮುಖೈರಹಮ್ ।
ಪ್ರೇರಿತಸ್ತ್ವಿಮಾಂ ವಾಖ್ಯಾಂ ಕೃತವಾನಿತಿ ನಿಶ್ಚಯಃ ॥

ಶ್ರೀಮದ್ಯಾದವಶೈಲ ಶೃಙ್ಗರವಿಣಾ ಶ್ರೀ ಕಲ್ಕಿಸಿಂಹಾತ್ಮನಾ
ಶ್ರೀ ಮಲ್ಲೇಶ್ವರ ಕೃಷ್ಣ ಸನ್ನಿಧಿಜುಷಾ ಕಲ್ಯಾಣಪುರ್ಯಾಮಿಹ ।
ಸರ್ವೇಷಾಂ ಜಗತಾಂ ತಮಶ್ಶಮಯತಾ ಕರ್ಣಾಟವಾಣ್ಯಾಽಧುನಾ
ವ್ಯಾಖ್ಯಾತಂ ನಿಗಮಾನ್ತಸಾರಮತುಲಂ ಗಾಥಾಸಹಸ್ರಂ ಮುನೇಃ ॥

ಲಲಿತಸರಣಿನಾಮ್ನಾ ಕೋಮಲಾ ದಿವ್ಯಭಾವಾ
ಜಯತು ಜಗತಿ ಟೀಕಾ ಮೇಽತ್ರ ಕರ್ಣಾಟವಾಣ್ಯಾ ।
ಶಠರಿಪುಮುನಿ–ಗಾಥಾದಿವ್ಯಸಾಹಸ್ರಮಾಲಾ –
ವಿವೃತಿರಮೃತಪೂರ್ಣಾ ಲೋಕಸಞ್ಜೀವಿನೀಯಮ್ ॥

ಸಹಸ್ರ ಗಾಥಾರತ್ನಾವಳ್ಯಾಖ್ಯಾ ವ್ಯಾಖ್ಯಾ ಮಯಾ ಕೃತಾ ।
ಗೈರ್ವಾಣೀ ಸಾಽಪಿ ಚಾತ್ರೈವ ಮುದ್ರಿತಾ ಜಗತಾಂ ಮುದೇ॥

ಮಮ ಶ್ರೀ ಕಲ್ಕಿಸಿಂಹಸ್ಯ ಭಕ್ತಾ ಭಗವತೋ ಹರೇಃ ।
ಶಠಾರಿವತ್ಸ್ವಯಂ ಭೋಗ್ಯಾಃ ಪರಮಾನನ್ದ ಮಾಪ್ನುಯುಃ ॥

ಪೊಲಿಕ ಪೊಲಿಕ ನಾಮ್ನಾ ದಿವ್ಯ ಸೂಕ್ತಿಶ್ಶಠಾರೇ -
ರ್ಜಯತಿ! ದಶಕಮೇತತ್ಪಞ್ಚಮೇ ತು ದ್ವಿತೀಯಮ್ ।
ವಿಲಸತಿ ಶತಕೇಽತ್ರ ಶ್ರೀ ಹರೇಃ ಕಲ್ಕಿನಾಮ್ನೋ
ಮಮ ಭುವಿ ನೃಹರೇರೇವಾವತಾರೋಽಸ್ತಿ ಗೀತಃ ॥

ಶ್ರೀ ಶಠಾರಿಮುನೀನ್ದ್ರೇಣ ಭವಿಷ್ಯಚ್ಚರಿತಂ ಸ್ಮೃತಮ್ ।
ದಿವ್ಯಂ ಕೃತಯುಗಂ ಮೇಽಸ್ತು ಶಾನ್ತಿಪುಷ್ಟಿಪ್ರತುಷ್ಟಿಭಿಃ ॥



## ಶ್ರೀ ಶಠಾರಿಮುನಿ ಮಾಹಾತ್ಮ್ಯ ಸಂಗ್ರಹ.

ಶ್ರೀ- ಭೂ- ನೀಳಾದಿ ನಾಯಕನಾಗಿಯೂ, ಶ್ರೀ ವೈಕುಣ್ಠನಾಥನಾಗಿಯೂ, ಪರಾತ್ಪರನಾಗಿಯೂ, ಸರ್ವದೇವಾಧಿದೇವನಾಗಿಯೂ, ಪ್ರಥಮಾಚಾರ್ಯನಾಗಿಯೂ, ಸೃಷ್ಟಿ-ಸ್ಥಿತಿ-ಲಯ ಕಾರಣಭೂತನಾಗಿಯೂ, ಅಖಿಲಹೇಯ ಪ್ರತ್ಯನೀಕನಾಗಿಯೂ, ಸಕಲ ಕಲ್ಯಾಣಗುಣಾಕರನಾಗಿಯೂ, ಕರುಣಾನಿಧಿಯಾಗಿಯೂ, ನಿತ್ಯಮುಕ್ತಾನು ಭಾವ್ಯನಾಗಿಯೂ, ಅಖಿಲಾಣ್ಡಕೋಟಿ ಬ್ರಹ್ಮಾಣ್ಡನಾಯಕನಾಗಿಯೂ, ನಿತ್ಯ ನಿರತಿಶಯಾನನ್ದಮಯನಾಗಿಯೂ ಇರುವ ಶ್ರೀಮನ್ನಾರಾಯಣನು ಲೀಲಾವಿಭೂತಿ ಯಲ್ಲಿ ಸಂಸಾರಿಚೇತನರು ದುಃಖಾರ್ಣವನಿಮಗ್ನರಾಗಿರುವುದನ್ನು ಪರಿಶೀಲಿಸಿ, ಅವರನ್ನೂ ಕೂಡ ಉದ್ಧಾರಮಾಡಿ ತನ್ನ ನಿತ್ಯವಿಭೂತಿಯೆಂಬ ಪರಮಪದದಲ್ಲಿ ನಿತ್ಯಕೈಂಕರ್ಯನಿರತರಾಗಿ ಪರಮಾನನ್ದಭರಿತರಾಗುವಂತೆ ಮಾಡಬೇಕೆಂದು ಉದ್ದೇಶಿಸಿ ತಾನೇ ಅನೇಕವಿಧವಾದ ತನ್ನ ಅವತಾರಗಳನ್ನು ಲೀಲಾವಿಭೂತಿಯಲ್ಲಿ ಪ್ರಕಾಶಪಡಿಸಿ ಚೇತನರನ್ನು ವಶೀಕರಿಸುತ್ತಿದಾನೆಂಬುದು ಶಾಸ್ತ್ರಪ್ರಮಾಣ ಸಿದ್ಧ

ವಾಗಿದೆ. ಸೃಷ್ಟಿಕಾಲದಲ್ಲಿ ಸ್ವನಾಭಿಕಮಲದಿಂದ ಚತುರ್ಮುಖನನ್ನು ಸೃಷ್ಟಿಸಿ ಅವನಿಗೆ ಪ್ರಣವೋಪದೇಶವಂ ಮಾಡಿ ತನ್ನ ನಿತ್ಯಾಪೌರುಷೇಯವಾದ ದಿವ್ಯಜ್ಞಾನ ಪ್ರಸರವೆಂಬ (ವಿದ ಜ್ಞಾನೇ —)ವೇದಶಾಸ್ತ್ರವನ್ನು ಅವನಿಗೆ ಪ್ರಕಾಶಪಡಿಸಿ ಅವನ ಮೂಲಕ ನಾಲ್ಕು ವೇದಗಳನ್ನೂ ಈ ಲೋಕದಲ್ಲಿ ಪ್ರಚಾರಪಡಿಸಿದನು. ಈ ವೇದ ಗಳು ಕ್ರಮೇಣ ಸಂಹಿತಾ-ಬ್ರಾಹ್ಮಣ-ಉಪನಿಷತ್-ಎಂಬ ಭಾಗಗಳುಳ್ಳವಾದುವು. ಇವುಗಳಿಗೆ ಶ್ರುತಿಯೆಂದು ಹೆಸರಾಯಿತು ಈ ಶ್ರುತಿಗೆ ಉಪಬ್ರುಂಹಣರೂಪವಾಗಿ ಋಷಿಗಳು ಸ್ಮೃತೀತಿಹಾಸ ಪುರಾಣಾದಿಗಳನ್ನು ರಚಿಸಿದರು. ಈಪ್ರಕಾರ ಅನೇಕ ಶಾಸ್ತ್ರಪ್ರಚಾರವನ್ನು ಮಾಡಿದಾಗ್ಯೂ ಚೇತನರು ಮೋಹಾರ್ಣವನಿಮಗ್ನರಾಗಿರುವು ದನ್ನು ಕಂಡು "ಅಜಾಯಮಾನೋ ಬಹುಧಾ ವಿಜಾಯತೇ"—ಎಂಬಂತೆ ತಾನೇ ಅನೇಕಾವತಾರಗಳನ್ನು ಮಾಡಿದ ಭಗವನ್ತನು ಮತ್ಸ್ಯ-ಕೂರ್ಮಾದಿ ದಶಾವತಾರ ಗಳನ್ನು ಆಯಾ ಯುಗಗಳಲ್ಲಿ ಧರ್ಮಗ್ಲಾನಿಯುಂಟಾದ ಸಮಯಗಳಲ್ಲಿ ಪ್ರಕಾಶ ಪಡಿಸುತ್ತ ತ್ರೇತಾಯುಗದಲ್ಲಿ ಶ್ರೀರಾಮರೂಪಿಯಾಗಿಯೂ, ದ್ವಾಪರಯುಗದಲ್ಲಿ ಶ್ರೀಕೃಷ್ಣರೂಪಿಯಾಗಿಯೂ ಅವತರಿಸಿದನಷ್ಟೆ. ಗೀತಾಚಾರ್ಯನಾದ ಶ್ರೀಕೃಷ್ಣನು ಯುದ್ಧರಂಗದಲ್ಲಿ ಅರ್ಜುನನಿಗೆ ಉಪದೇಶವೆಂಬ ವ್ಯಾಜದಿಂದ ಸರ್ವಚೇತನೋ ಜ್ಜೀವನಕ್ಕಾಗಿ "ಹರ್ತುಂತಮಸ್ಸದಸತೀ ಚ ವಿವೇಕ್ತುಮೀಶೋ। ಮಾನಂ ಪ್ರದೀಪ ಮಿವ ಕಾರುಣಿಕೋ ದದಾತಿ ॥"—ಎಂಬನ್ತೆ ವೇದಾನ್ತ ಶಾಸ್ತ್ರಸಾರರೂಪವಾದ ಗೀತಾಶಾಸ್ತ್ರವನ್ನು ಈ ಲೋಕದಲ್ಲಿ ಪ್ರಕಾಶಪಡಿಸಿದನು ಮತ್ತು ಉಪನಿಷದ್ವಾ ಕ್ಯಗಳ ಅರ್ಥನಿರ್ಣಯಕ್ಕಾಗಿ—"ಕೃಷ್ಣದ್ವೈಪಾಯನಂ ವಿದ್ಧಿ ಸಾಕ್ಷಾನ್ನಾರಾ ಯಣಂ ಹರಿಮ್॥" ಎಂಬಂತೆ ಶ್ರೀ ಭಗವದಂಶಭೂತರಾದ ಕೃಷ್ಣದ್ವೈಪಾಯನ ರೆಂಬ ವ್ಯಾಸಮುನೀಂದ್ರರ ಮೂಲಕ ಬ್ರಹ್ಮಸೂತ್ರಗಳನ್ನು ಕೂಡ ಪ್ರಕಾಶಪಡಿಸಿ ದನು. ಈ ಪ್ರಕಾರ (೧) ಉಪನಿಷತ್ಪ್ರಸ್ಥಾನ (೨) ಬ್ರಹ್ಮಸೂತ್ರಪ್ರಸ್ಥಾನ (೩) ಗೀತಾಪ್ರಸ್ಥಾನ—ಎಂಬ ಪ್ರಸ್ಥಾನತ್ರಯವನ್ನೂ ತಾನೇ ಈ ಲೋಕದಲ್ಲಿ ಚೇತ ನೋಜ್ಜೀವನಕ್ಕಾಗಿ ಪ್ರಕಾಶಪಡಿಸಿದಾಗ್ಯೂ ಈ ಪ್ರಸ್ಥಾನತ್ರಯವೆಂಬ ಮೂಲ ಗ್ರನ್ಥಗಳಿಗೆ ವ್ಯಾಖ್ಯಾನಮಾಡಲು ಉದ್ಯುಕ್ತರಾದ ಆಚಾರ್ಯರು ತಮ್ಮ ತಮ್ಮ ಭಿನ್ನಾಭಿಪ್ರಾಯಗಳಿಂದ ನಾನಾಮತಗಳನ್ನು ಈ ಲೋಕದಲ್ಲಿ ಪ್ರಕಟಪಡಿಸಿ ಪರಸ್ಪರ ವಿವಾದಗಳನ್ನು ಬೆಳೆಸಿದುದರಿಂದ, ಶ್ರೀ ಭಗವನ್ತನು ನಿತ್ಯಮುಕ್ತರೆಂಬ ತನ್ನ ಪರಿಷದ್ವರ್ಗದಲ್ಲಿ ಅನನ್ತ-ಗರುಡ-ವಿಷ್ವಕ್ಸೇನಾದಿಗಳೆಂಬ ನಿತ್ಯಸೂರಿಗಳಲ್ಲಿ ಕೆಲವರನ್ನು ಈ ಭೂಲೋಕದಲ್ಲಿ ಅವತರಿಸುವಂತೆ ಪ್ರೇರಿಸಿ ಅವರಿಗೆ ದಿವ್ಯಜ್ಞಾನ ವನ್ನು ತಾನೇ ಅನುಗ್ರಹಿಸಿ ಅವರ ಮೂಲಕ ೪೦೦೦ ದ್ರಾವಿಡ ದಿವ್ಯಪ್ರಬನ್ಧ ಗಳನ್ನು—"ಭಕ್ತಿ ಪರೀವಾಹರೂಪವಾದ ಅಮೃತ ಸಾಗರದಲ್ಲಿ ಸಕಲ ಚೇತನರೂ ನಿಷ್ಣಾತರಾಗಿ ಉಜ್ಜೀವಿಸಲಿ"—ಎಂಬ ಉದ್ದೇಶದಿಂದ ಪ್ರಚಾರಪಡಿಸಿದನು.

ಅನ್ತಹ ದಿವ್ಯಸೂರಿಗಳೇ ಆೞ್ವಾರ್ರುಗಳಾಗಿ ಅವತರಿಸಿದರು. ಅವರು ರಚಿಸಿದ ದಿವ್ಯಪ್ರಬನ್ಧಗಳ ವಿವರ:—

| (ನಾಮಧೇಯ) | (ಅಂಶ) | (ಪ್ರಬನ್ಧ) | (ಪದ್ಯಸಂಖ್ಯಾ) |
|---|---|---|---|
| ೧. ಪೊಯ್‌ಕೈಯಾೞ್ವಾರ್ | ಪಾಂಚಜನ್ಯಾಂಶ | ಮುದಲ್ ತಿರುವನ್ದಾದಿ | ೧೦೦ |
| ೨. ಪೂದತ್ತಾೞ್ವಾರ್ | ಗದಾಂಶ | ಇರಣ್ಡಾಮ್‌ತಿರುವನ್ದಾದಿ | ೧೦೦ |
| ೩. ಪೇಯಾೞ್ವಾರ್ | ನನ್ದಕಾಂಶ | ಮೂನ್ರಾಮ್ ತಿರುವನ್ದಾದಿ | ೧೦೦ |
| ೪. ತಿರುಮೞಿಶೈಯಾೞ್ವಾರ್ | ಚಕ್ರಾಂಶ | ತಿರುಚ್ಚನ್ದವಿರುತ್ತಮ್ | ೧೨೦ |
| ,, | ,, | ನಾನ್ಮುಕನ್ ತಿರುವನ್ದಾದಿ | ೯೬ |
| ೫. ನಮ್ಮಾೞ್ವಾರ್ | ಸೇನಾನಾಥಾಂಶ | ತಿರುವಿರುತ್ತಮ್ | ೧೦೦ |
| ,, | ,, | ತಿರುವಾಶಿರಿಯಮ್ | ೭ |
| ,, | ,, | ಪೆರಿಯತಿರುವನ್ದಾದಿ | ೮೭ |
| ,, | ,, | ತಿರುವಾಯ್ಮೊೞಿ | ೧೧೦೨ |
| ೬. ಕುಲಶೇಖರಾೞ್ವಾರ್ | ಕೌಸ್ತುಭಾಂಶ | ಪೆರುಮಾಳ್ ತಿರುಮೊೞಿ | ೧೦೫ |
| ೭. ಪೆರಿಯಾೞ್ವಾರ್ | ಗರುಡಾಂಶ | ತಿರುಪ್ಪಲ್ಲಾಣ್ಡು | ೧೨ |
| ,, | ,, | ಪೆರಿಯಾೞ್ವಾರ್ ತಿರುಮೊೞಿ | ೪೬೧ |
| ೮. ತೊಣ್ಡರಡಿಪ್ಪೊಡಿಯಾೞ್ವಾರ್ | ವನಮಾಲಾಂಶ | ತಿರುಮಾಲೈ | ೪೫ |
| ,, | ,, | ತಿರುಪ್ಪಳ್ಳಿಯೆೞುಚ್ಚಿ | ೧೦ |

| ನಾಮಧೇಯ) | (ಅಂಶ) | (ಪ್ರಬನ್ಧ) | (ಪದ್ಯಸಂಖ್ಯಾ) |
| --- | --- | --- | --- |
| ೯. ತಿರುಪ್ಪಾಣಾಳ್ವಾರ್ | ಶ್ರೀವತ್ಸಾಂಶ | ಅಮಲನಾದಿಪಿರಾ೯ | ೧೦ |
| ೧೦. ತಿರುಮಙ್ಗೈಯಾಳ್ವಾರ್ | ಶಾರ್ಙ್ಗಾಂಶ | ಪೆರಿಯತಿರುಮೊಳ್ಳಿ | ೧೦೮೪ |
| ,, | ,, | ತಿರುಕ್ಕುರುನ್ದಾಣ್ಡಕಮ್ | ೨೦ |
| ,, | ,, | ತಿರುನೆಡುನ್ದಾಣ್ಡಕಮ್ | ೩೦ |
| ,, | ,, | ತಿರುವೆಳ್ಳುಕೂರ್ತಿರುಕ್ಕೈ | ೧ |
| ,, | ,, | ಶಿರಿಯ ತಿರುಮಡಲ್ | ೭೭॥ |
| ,, | ,, | ಪೆರಿಯತಿರುಮಡಲ್ | ೧೪೮॥ |
| ೧೧ ಮಧುರ ಕವಿಯಾಳ್ವಾರ್ | ಗಣಾಂಶ | ಕಣ್ಣಿನುಣ್ ಶಿರುತ್ತಾಮ್ಬು | ೧೧ |
| ೧೨. ಆಣ್ಡಾಳ್ | ಭೂದೇವ್ಯಂಶ | ತಿರುಪ್ಪಾವೈ | ೩೦ |
| ,, | | ನಾಚ್ಚಿಯಾರ್ ತಿರುಮೊಳ್ಳಿ | ೧೪೩ |
| | | | ೪,೦೦೦ |

ಈ ಆಳ್ವಾರ್ರುಗಳ ಅವತಾರವೈಭವವು ದಿವ್ಯಸೂರಿ ಚರಿತ್ರ, ಗುರುಪರಂಪರಾ ಪ್ರಭಾವ, ಪ್ರಪನ್ನಾಮೃತ ಮುಂತಾದ ಗ್ರನ್ಥಗಳಲ್ಲಿ ವಿಶದವಾಗಿ ಪ್ರತಿಪಾದಿತ ವಾಗಿದೆ. ಇವರಲ್ಲಿ ಶ್ರೀ ಶಠಾರಿ-ಶಠಕೋಪಮುನಿ – ಮಾಱನ್ – ಇತ್ಯಾದಿ ನಾಮ ಧೇಯವುಳ್ಳ ನಮ್ಮಾಳ್ವಾರ್ರ ವೈಭವವನ್ನು ಇಲ್ಲಿ ಸಂಗ್ರಹವಾಗಿ ಸೂಚಿಸುವೆವು.

ಈ ಶ್ರೀ ಶಠಾರಿಮುನಿವರ್ಯರೇ ತಮ್ಮ ಪ್ರಭಾವಾತಿಶಯದಿಂದ ಈಗ ದೇವಾ ಲಯಗಳಲ್ಲಿ ವಿಗ್ರಹರೂಪೇಣ ನಮ್ಮಾಳ್ವಾರ್—ಎಂಬ ನಾಮಧೇಯದಿಂದ ಪೂಜಿ ಸಲ್ಪಡುತ್ತಿರುವುದಲ್ಲದೆ-ಶ್ರೀಮನ್ನಾರಾಯಣನ ಚರಣಾರವಿನ್ದಯುಗಳರೂಪಿಯಾಗಿ ದೇವಾಲಯಗಳಲ್ಲಿ ಸುವರ್ಣ–ರಜತಾದಿ ನಿರ್ಮಿತವಾದ ಗೋಪುರ ವಿಶೇಷಾಕಾರ ದಿಂದಲೂ ಶಠಾರಿಯೆಂದು ಸುಪ್ರಸಿದ್ಧರಾಗಿ ಅರ್ಚಕ ಹಸ್ತದಿಂದ ಭಕ್ತಜನರ ಶಿರಸ್ಸಿನಲ್ಲೂ ಇಡಲ್ಪಡುತ್ತಾರೆಂಬುದು ಶ್ರೀ ವಿಷ್ಣುದೇವಾಲಯಗಳ ಸಂಪ್ರದಾಯ ಜ್ಞರಿಗೆಲ್ಲಾ ಸುವಿದಿತವಾಗಿಯೇ ಇದೆ. ಈ ಶಠಾರಿಯೇ ಅನೇಕ ವೇಳೆಗಳಲ್ಲಿ ಶ್ರೀ ಭಗವನ್ಮೂರ್ತಿಗೆ ಬದಲಾಗಿ ಪಾಲಕ್ಕಿಯಲ್ಲಿ ಸಂಪ್ರೋಕ್ಷಣ-ತೀರ್ಥವಾರಿಯೆಂಬ ಅವಬೃಥೋತ್ಸವ ಮುಂತಾದ ಕಾಲಗಳಲ್ಲಿ ಬಿಜಯಮಾಡಿಸುವ ಪದ್ಧತಿಯೂ ಇದೆಯಷ್ಟೆ. ಈ ಶ್ರೀ ಶಠಾರಿಮುನಿವರ್ಯರ ವಿಷಯದಲ್ಲಿ ತನಿಯನ್–ಎಂಬ ಒಂದು ಸ್ಮಾರಕಪದ್ಯವು ಭಕ್ತರಿಗೆ ನಿತ್ಯಾನುಸನ್ಧೇಯವಾಗಿದೆ. ಅದು ಯಾವುದೆಂದರೆ—

"ಮಾತಾ ಪಿತಾ ಯುವತಯ ಸ್ತನಯಾ ವಿಭೂತಿ–
ಸ್ಸರ್ವಂ ಯದೇವ ನಿಯಮೇನ ಮದನ್ವಯಾನಾಮ್ ।
ಆದ್ಯಸ್ಯ ನಃ ಕುಲಪತೇರ್ವಕುಳಾಭಿರಾಮಂ
ಶ್ರೀಮತ್ತದಂಘ್ರಿಯುಗಳಂ ಪ್ರಣಮಾಮಿ ಮೂರ್ಧ್ನಾ ॥"

ಈ ಪದ್ಯದಲ್ಲಿ ಶಠಾರಿನಾಮಧೇಯವು ಉಕ್ತವಾಗಿ ಇಲ್ಲದೆ ಇದ್ದಾಗ್ಯೂ "ಕುಲಪತೇಃ"—"ವಕುಳಾಭಿರಾಮಮ್"—ಇತ್ಯಾದಿ ಪದಗಳಿಂದ ಇದು ಶ್ರೀ ಶಠಾರಿ ವಿಷಯಕವಾದುದೆಂದು ಹಿರಿಯರು ನಿರ್ಣಯಿಸಿ ಇರುತ್ತಾರೆ. ಈ ಪದ್ಯವು ಶ್ರೀ ಯಾಮುನಾರ್ಯರೆಂಬ ಆಳವನ್ದಾರ್ರಿಂದ ವಿರಚಿತವಾದ ಸ್ತೋತ್ರರತ್ನದಲ್ಲಿ ಇದೆ ಈ ಯಾಮುನಾರ್ಯರಿಗೆ ಪಿತಾಮಹರಾದ ನಾಥಮುನಿ ಎಂಬ ಮಹಾತ್ಮರು ಮಧುರ ಕವಿರಚಿತವಾದ (ಶ್ರೀ ಶಠಾರಿ ವಿಷಯಕವಾದ) ಕಣ್ಣಿನುಣ್ ಶಿಱುತ್ತಾಮ್ಬು—ಎಂಬ ದಶಕವನ್ನು ೧೨,೦೦೦ ಸಲ ಆವೃತ್ತಿಮಾಡಿ ಜಪಿಸಿದುದರಿಂದ ಅವರಿಗೆ ನಮ್ಮಾ ಳ್ವಾರ್ರು ಸಾಕ್ಷಾತ್ತಾಗಿ (ಧ್ಯಾನಬಲದಿಂದ) ದೃಶ್ಯರಾಗಿ ದಿವ್ಯಪ್ರಬನ್ಧಗಳನ್ನು ಉಪದೇಶಿಸಿದುದರಿಂದ, ಶ್ರೀ ಯಾಮುನಾರ್ಯರು—"ನಮ್ಮ ಕುಲಸ್ಥರಿಗೆಲ್ಲಾ ಶ್ರೀ ಶಠಾರಿಯೇ ಸರ್ವವಿಧ ಬನ್ಧು"—ಎಂದು ಮಾತಾ–ಪಿತಾ-ಇತ್ಯಾದಿ ಶ್ಲೋಕದಿಂದ ಕೃತಜ್ಞತೆಯನ್ನು ಸೂಚಿಸಿ ಇರುತ್ತಾರೆ ಈ ನಮ್ಮಾಳ್ವಾರ್ರೇ ಪ್ರಪನ್ನ ಜನಕೂಟಸ್ಥ ರೆಂದು ಪ್ರಸಿದ್ಧರಾಗಿರುವುದರಿಂದ "ಆದ್ಯಸ್ಯ ನಃ ಕುಲಪತೇಃ"—ಎಂದು ಇವರಿಗೆ

ಸೂಚಕವಾದ ಶಬ್ದಪ್ರಯೋಗವು ಇದೆಯೆಂದು ಕೆಲವುಮಂದಿ ಆಚಾರ್ಯರು ವ್ಯಾಖ್ಯಾನ ಮಾಡಿರುತ್ತಾರೆ ಈ ಶಠಾರಿ ಮುನಿವರ್ಯರು ವಕ್ಷಸ್ಸ್ಥಲದಲ್ಲಿ ವಕುಳ ಮಾಲೆಯನ್ನು ಧರಿಸಿ ಇರುವುದರಿಂದ ಇವರ ಮಹಿಮೆಯನ್ನು ವರ್ಣಿಸುವ ಸ್ತೋತ್ರ ಗಳಲ್ಲಿ "ವಕುಳಧವಳಮಾಲಾವಕ್ಷಸಮ್" — "ವಕುಳಾಭರಣಂ ವನ್ದೇ"— ಇತ್ಯಾದಿ ಪ್ರಯೋಗಗಳು ಇವೆ. ಆದುದರಿಂದ ಶ್ರೀ ಶಠಾರಿಮುನಿವರ್ಯರ ಪಾದಾರ ವಿನ್ದಯುಗಳವು ವಕುಳಾಭಿರಾಮವಾಗಿದೆಯೆಂದು ಹೇಳೋಣವು ಅಷ್ಟು ಸ್ವರಸ ವಾಗಿ ತೋರುವುದಿಲ್ಲ ಮತ್ತು ಇವರ ಪಾದಯುಗಳವು ಶ್ರೀಮತ್ತಾಗಿದೆಯೆಂದು ಹೇಳೋಣವೂ ಅನ್ವರ್ಥವಾಗುವುದಿಲ್ಲ ಆದುದರಿಂದ-"ಆದ್ಯಸ್ಯ ನಃ ಕುಲಪತೇಃ"- ಎಂಬ ಷಷ್ಠೀವಿಭಕ್ತಿಯ ಶಬ್ದವು "ಲಕ್ಷ್ಮೀನಾಥ ಸಮಾರಮ್ಭಾಂ" ಎಂಬನ್ತೆ ಗುರುಪರಂಪರೆಗೆ ಪ್ರಥಮಾಚಾರ್ಯನಾದ ಶ್ರೀಮನ್ನಾರಾಯಣನನ್ನೇ ಸೂಚಿಸುತ್ತದೆ ಯೆಂದು ಪರಿಶೀಲಿಸಿ, ಆ ಶ್ರೀಮನ್ನಾರಾಯಣನ ಅಂಘ್ರಿಯುಗಳವಾದ ಶ್ರೀ ಶಠಾರಿಮುನಿಯೇ ವಕುಳಾಭಿರಾಮವೆಂದು ಅತ್ಯನ್ತ ಸ್ವಾರಸ್ಯಯುಕ್ತವಾದ ಈ ಸಮ್ಪ್ರದಾಯಾನುಗುಣವಾದ ಅರ್ಥವನ್ನು ಈಗ ಶ್ರೀಕಲ್ಕಿ ನಾರಸಿಂಹನಾದ ನಾನು ನನ್ನ ವಿಭವಾವತಾರ ಮಾಹಾತ್ಮ್ಯದಿಂದ ನಿರ್ಣಯಿಸಿ ವ್ಯಕ್ತಪಡಿಸಿ ಇರುತ್ತೇನೆ. ಈ ಅರ್ಥವೇ ಶ್ರೀ ಯಾಮುನಾರ್ಯರಿಗೂ ಅಭಿಮತವಾದುದೆಂದು ಉತ್ತರಶ್ಲೋಕದಲ್ಲಿ ವ್ಯಕ್ತವಾಗಿದೆ. "ಯನ್ಮೂರ್ಧ್ನಿ ಮೇ..........................ನಃ ಕುಲಧನಂ ಕುಲದೈವತಂ ತತ್ಪಾದಾರವಿನ್ದಮರವಿನ್ದವಿಲೋಚನಸ್ಯ"—ಎಂದು ಅರವಿನ್ದವಿಲೋಚನನ ಪಾದಾರವಿನ್ದವೇ ಕುಲದೈವತವಾದ ಶ್ರೀ ಶಠಾರಿಯೆಂಬ ಕುಲಧನವೆಂದೂ ಅದೇ ಶಿರಸಾ ಧಾರ್ಯವೆಂದೂ ಸ್ಪಷ್ಟವಾಗಿದೆ ಮತ್ತು ಶ್ರೀ ಯಾದವಾದ್ರಿಯಲ್ಲಿ ಶ್ರೀಮನ್ನಾರಾಯಣನ ಅಂಘ್ರಿಯುಗಳವೇ ಶ್ರೀ ವಿಶಿಷ್ಟವಾಗಿ ರುವುದರಿಂದ "ಶ್ರೀಮತ್" ಎಂಬ ವಿಶೇಷಣವೂ ಅನ್ವರ್ಥವಾಗಿ ಪ್ರಕಾಶಿಸುತ್ತದೆ. "ಶ್ರೀಮನ್ನಾರಾಯಣ ಚರಣೌ"— ಎಂಬನ್ತೆ ದ್ವಯಮನ್ತ್ರದಲ್ಲೂ ಕೂಡ "ಶ್ರೀಮನ್ನಾ- ನಾರಾಯಣ ಚರಣೌ"—ಎಂದು ಯೋಜನೆಯನ್ನೂ ಸಹ ಸ್ವರಸವಾಗಿ ಪರಿಗ್ರಹಿಸಿ, ಶ್ರೀ ಯಾದವಗಿರೀಶ್ವರನಾದ ಶ್ರೀಮನ್ನಾರಾಯಣಮೂರ್ತಿಯ ದಿವ್ಯಮಂಗಳ ವಿಗ್ರಹದ ವೈಭವವನ್ನೂ ಭಕ್ತೋತ್ತಮರೆಲ್ಲರೂ ಪರಿಶೀಲಿಸಿ ಕೃತಾರ್ಥರಾಗ ಬಹುದು. ಯದುಶೈಲೇಶ-ದಶಕವೆಂಬ ಸ್ತೋತ್ರದಲ್ಲ ಈ ಸಂಪ್ರದಾಯಾರ್ಥವು ವ್ಯಕ್ತವಾಗಿದೆ. ಹೇಗೆಂದರೆ—

"ಯದುಗಿರೀನ್ದ್ರ ತವಾಂಘ್ರಿ ಸರೋರುಹಂ
ಪರಮಭಕ್ತಿವಶಾದುಪಸೇದುಷಾಮ್ |
ಘಟಕಕೃತ್ಯ ವಿಲಮ್ಬ ಕಲಾಕ್ಷಮಾ
ಪದಪಯೋಜ ಮುಪಾಶ್ರಯತೇ ರಮಾ ||"

ಈ ಶ್ಲೋಕದಲ್ಲಿ—ಶ್ರೀದೇವಿಯು ಶ್ರೀಮನ್ನಾರಾಯಣನ ವಕ್ಷಸ್ಸ್ಥಲದಲ್ಲಿ ಇರುವುದರಿಂದ ಚೇತನರು ಅವನ ಪಾದಾರವಿನ್ದಗಳನ್ನು ಆಶ್ರಯಿಸುವಾಗ ಪುರುಷ ಕಾರವನ್ನು ಮಾಡಲು ವಿಲಂಬಲೇಶವು ಆಗುವುದೆಂದು ಅದನ್ನೂ ಸಹಿಸಲಾರದೆ ಶ್ರೀದೇವಿಯು ಚೇತನರಲ್ಲಿ ಅತ್ಯನ್ತ ಕಾರುಣ್ಯದಿಂದ ಮಾತೃವಾತ್ಸಲ್ಯ ಪರಿಪೂರ್ಣೆ ಯಾಗಿ ಶ್ರೀಮನ್ನಾರಾಯಣನ ಮತ್ತು ಸಮ್ಪತ್ಕುಮಾರನ ಪಾದಾರವಿನ್ದಗಳಲ್ಲಿಯೇ ನಿತ್ಯವಾಸವಂ ಮಾಡುತ್ತಿದಾಳೆ—ಎಂಬ ಅತ್ಯನ್ತ ಸ್ವರಸವಾದ ರಹಸ್ಯಾರ್ಥವು ಮಹನೀಯರಾದ ಆಚಾರ್ಯರಿಂದ ಪ್ರಕಾಶಿತವಾಗಿದೆ. ಇನ್ತಹ ಪರಮೋತ್ಕೃಷ್ಟ ವಾದ ರಹಸ್ಯಾರ್ಥಗಳನ್ನು ಎಲ್ಲರೂ ವಿಶ್ವಾಸಪೂರ್ವಕವಾಗಿ ಅನುಸನ್ಧಾನಮಾಡಿ ಕೃತಾರ್ಥರಾಗಲಿ—ಎಂದು ಇಲ್ಲಿ ವ್ಯಕ್ತಪಡಿಸಿ ಇರುತ್ತೇನೆ.

# ಶ್ರೀ ಶಠಾರಿಚರಿತ್ರ ಸಾರಾಮೃತ

ಶ್ರೀ ಶಠಾರಿಮುನಿವರ್ಯರು ತಾಮ್ರಪರ್ಣೀನದೀತೀರದಲ್ಲಿ (ತಿನ್ನವೆಲ್ಲಿ ಜಿಲ್ಲಾವಿಗೆ ಸೇರಿದ)— ತಿರುಕ್ಕುರುಕೂರ್-ಆಳ್ವಾರ್ ತಿರುನಗರಿಯೆಂಬ ದಿವ್ಯಕ್ಷೇತ್ರ ದಲ್ಲಿ ತಿರುವಳುದಿವಳನಾಡೆಂಬ ನಾಡಿಗೆ ಸೇರಿದ "ಕಾರಿಯಾರ್" ಎಂಬ ಮಹನೀ ಯರಿಗೆ ಪುತ್ರರಾಗಿ ಚತುರ್ಥವರ್ಣದಲ್ಲಿ ಕಲಿಯುಗಾರಂಭದಲ್ಲಿ ಪ್ರಮಾದಿಸಂವತ್ಸರ-ವೃಷಭಮಾಸ – ಪೂರ್ಣಿಮಾ ಶುಕ್ರವಾರ-ವಿಶಾಖಾನಕ್ಷತ್ರದಲ್ಲಿ—ಕರ್ಕಟಲಗ್ನದಲ್ಲಿ ವಿಷ್ವಕ್ಸೇನಾಂಶಭೂತರಾಗಿ ಅವತರಿಸಿದರೆಂದು ಪೂರ್ವಸಮ್ಪ್ರದಾಯಜ್ಞರು ಹೇಳು ತ್ತಾರೆ ಕಾರಿಯಾರೆಂಬ ಆ ಮಹನೀಯರು ಮಲೈಯಾಳದೇಶದಲ್ಲಿ ತಿರುವಣ್‌ಪರಿ ಶಾರಮ್—ಎಂಬ ಕ್ಷೇತ್ರದಲ್ಲ ವಾಸಮಾಡುತ್ತಿದ್ದ ತಿರುವಾಳ್ ಮಾರ್ಬರ್—ಎಂಬ ಮಹಾತ್ಮರ ಪುತ್ರಿಯಾದ ಉಡೈಯನಙ್ಗೈಯಾರ್—ಎಂಬ ಕನ್ಯೆಯನ್ನು ವಿವಾಹ ಮಾಡಿಕೊಂಡರು. ಆ ಕನ್ಯೆಯು ಕ್ರಮೇಣ ಗರ್ಭವತಿಯಾಗಿ ತಿರುಕ್ಕುರುಙ್ಗುಡಿ ಕ್ಷೇತ್ರಾಧಿಪನಾದ ಭಗವನ್ತನ ಪ್ರಸಾದದಿಂದ ಶಠಾರಿ-ಎಂಬ ಪುತ್ರರತ್ನವನ್ನು ಪಡೆ ದಳು. ಈ ಶಿಶುವು ಹುಟ್ಟಿದಾರಭ್ಯ ಕಣ್ಣುಮುಚ್ಚಿಕೊಂಡೇ ಸ್ತನ್ಯಪಾನವೂ ಇಲ್ಲದೆ ಇದ್ದಾಗ್ಯೂ ಶರೀರಪುಷ್ಟಿಯೊಡನೆ ದಿವ್ಯತೇಜಃಪುಂಜವಾಗಿ ಪ್ರಕಾಶಿಸುತ್ತ ಮೌನದಿಂದ ಯೋಗಧ್ಯಾನದಲ್ಲೇ ಇದ್ದಿತು. ಈ ಶಿಶುವಿಗೆ ಶ್ರೀ ಕುರುಕಾಪುರೀ ಶ್ವರನಾದ ಪೊಲಿನ್ದುನಿನ್ರಪಿರಾ—ಎಂಬ ಭಗವನ್ತನ ದೇವಾಲಯದಲ್ಲಿಯೇ ನಾಮಕರಣವಂಮಾಡಿ "ಮಾಱನ್"—ಎಂಬ ಹೆಸರನ್ನಿಟ್ಟು ಆ ದೇವಸ್ಥಾನದಲ್ಲೇ ಚಿಂಚಾವೃಕ್ಷದ (ಹುಣುಸೇಮರದ) ಕೆಳಗೆ ತೊಟ್ಟಿಲನ್ನು ಕಟ್ಟಿ ಬಿಟ್ಟು ಇದ್ದರು. ಈ ಶಿಶುವು ನಿರಾಹಾರವಾಗಿಯೇ ದಿನೇದಿನೇ ಪ್ರವರ್ಧಮಾನವಾಗಿ ಮೌನದೊಡ

ನೆಯೇ ಪದ್ಮಾಸನದಲ್ಲಿ ಕುಳಿತು ಯೋಗಧ್ಯಾನದಲ್ಲಿ ಕಣ್ಣು ಮುಚ್ಚಿಕೊಂಡೇ ದಕ್ಷಿಣ ಹಸ್ತದಿಂದ ಜ್ಞಾನಮುದ್ರೆಯನ್ನು ತೋರಿಸುತ್ತ ೧೬ ಸಂವತ್ಸರಗಳವರೆಗೆ ಬೆಳೆಯುತ್ತಿತ್ತು. ಈ ಆಶ್ಚರ್ಯವನ್ನು ನೋಡಿ ಎಲ್ಲರೂ ಅತ್ಯಂತ ವಿಸ್ಮಿತರಾಗುತ್ತಿದ್ದರು. ಈ ಮೌನಿಯಾದ ಬಾಲಕನನ್ನು ನೋಡಿ ಮಾತಾಪಿತೃಗಳು ಬಹು ಚಿಂತಾಕ್ರಾಂತರಾಗಿದ್ದರು. ಹೀಗಿರಲು ಮಧುರಕವಿ—ಎಂಬ ಮಹಾನುಭಾವರು ಉತ್ತರದೇಶ ಯಾತ್ರೆಯಂ ಮಾಡುತ್ತ ಗಂಗಾತೀರದಲ್ಲಿರುವಾಗ ಒಂದಾನೊಂದುದಿನ ರಾತ್ರಿ ಕಾಲದಲ್ಲಿ ಅವರಿಗೆ ದಕ್ಷಿಣದಿಕ್ಕಿನಲ್ಲಿ ಒಂದು ದಿವ್ಯ ತೇಜಃಪುಂಜವು ಕಂಡಿತು. ಆ ದಿವ್ಯ ತೇಜಸ್ಸನ್ನು ಪ್ರತಿದಿನವೂ ರಾತ್ರಿಕಾಲದಲ್ಲಿ ನೋಡುತ್ತ ಅವರು ಅತಿ ವಿಸ್ಮಿತರಾಗಿ ದಕ್ಷಿಣದಿಕ್ಕಿಗೆ ಯಾತ್ರೆಯಂ ಮಾಡುತ್ತ ರಾತ್ರಿಯಲ್ಲಿ ಆ ತೇಜಸ್ಸನ್ನೇ ಅನುಸರಿಸಿ ಪ್ರಯಾಣಮಾಡಿ, ಶ್ರೀ ಕುರುಕಾಪುರಿಯೆಂಬ ಆಳ್ವಾರ್-ತಿರುನಕರಿಗೆ ಬಂದು ರಾತ್ರಿಯಲ್ಲಿ ನೋಡಲು ದಕ್ಷಿಣದಿಕ್ಕಿನಲ್ಲಿ ಆತೇಜಸ್ಸು ಕಾಣದೆ ಇದ್ದುದರಿಂದ, ಆ ಕ್ಷೇತ್ರದಲ್ಲಿಯೇ ಏನೋ ಒಂದು ದಿವ್ಯ ತೇಜಃಪುಂಜವು ಇರಬಹುದೆಂದು ಊಹಿಸಿ—"ಈ ಊರಿನಲ್ಲಿ ಏನು ಆಶ್ಚರ್ಯ?"—ಎಂದು ವಿಚಾರಿಸಿದರು. ಆಗ ದೇವಾಲಯದಲ್ಲಿ ಚಿಂಚಾವೃಕ್ಷದ ಕೆಳಗೆ ಮೌನದಿಂದ ಯೋಗಧ್ಯಾನದಲ್ಲಿ ಕುಳಿತಿರುವ ಬಾಲಕನ ವೃತ್ತಾಂತವಂ ತಿಳಿದು ಅಲ್ಲಿಗೆ ಹೋಗಿ ಅತ್ಯದ್ಭುತವಾದ ಆ ದಿವ್ಯ ತೇಜಃಪುಂಜಮಾದ ಬಾಲಕನನ್ನು ನೋಡಿ ವಿಸ್ಮಯಪಟ್ಟು ಪ್ರದಕ್ಷಿಣ ನಮಸ್ಕಾರಗಳಂಮಾಡಿ, ಕಣ್ಣು ತೆರೆಯುವಂತೆ ನಾನಾವಿಧವಾದ ಉಪಾಯಗಳನ್ನು ಮಾಡಿ, ಕ್ರಮೇಣ ಒಂದು ಪ್ರಶ್ನೆಯನ್ನು ಮಾಡಿದರು—

"ಶೆತ್ತತ್ತಿನ್ ವಯಿಱ್ಱಿಲ್ ಶಿಱ್ಱಿಯದು ಪಿಱನ್ದಾಲ್
ಎತ್ತೈತ್ತಿನ್ಱೆಙ್ಗೇ ಕಿಡಕ್ಕುಮ್?"—ಎಂದು ಇವರು ಕೇಳಲು ಶ್ರೀ ಶಠಾರಿಮುನಿವರ್ಯ್ಯರು—

"ಅತ್ತೈತ್ತಿನ್ಱು ಅಙ್ಗೇ ಕಿಡಕ್ಕುಮ್"—ಎಂದು ಉತ್ತರವನ್ನು ಹೇಳಿದರು. * ಅದನ್ನು ಕೇಳಿ ಮಧುರಕವಿಯಾಳ್ವಾರ್ರು — ಈ ಶಠಾರಿ ಮುನಿವರ್ಯ್ಯರು ಸರ್ವಜ್ಞರಾದ ಮಹಾತ್ಮರೆಂದು ತಿಳಿದು ಇವರನ್ನೇ ಆಶ್ರಯಿಸಿ ಉಪಚರಿಸುತ್ತಿದ್ದರು. ಆಗ ಶ್ರೀಮನ್ನಾರಾಯಣನು ತನ್ನ ದಿವ್ಯಾತ್ಮಸ್ವರೂಪವನ್ನೂ ದಿವ್ಯ

---

* ಶೆತ್ತದು=ಅಚೇತನವಾದ ಶರೀರ. ಶಿಱ್ಱಿಯದು=ಅಣುವಾದ ಜೀವಾತ್ಮಾ. "ಪ್ರಾಕೃತವಾದ ಈ ಶರೀರದಲ್ಲಿ ಜೀವಾತ್ಮನು ಹುಟ್ಟಿ ಯಾವುದನ್ನು ತಿಂದು ಎಲ್ಲಿ ಜೀವಿಸುವನು?"—ಎಂದು ಪ್ರಶ್ನೆ "ಪ್ರಾಕೃತ ವಸ್ತುವಾದ ಅನ್ನವನ್ನೇ ತಿಂದು ಪ್ರಾಕೃತ ಸುಖದುಃಖಗಳನ್ನೇ ಅನುಭವಿಸಿ ಶರೀರರೂಪವಾದ ಪ್ರಕೃತಿಯಲ್ಲೇ ವಾಸಮಾಡಿ ಜೀವಿಸುತ್ತಾನೆ"—ಎಂದು ಉತ್ತರ.

ಮಂಗಳವಿಗ್ರಹವನ್ನೂ ದಿವ್ಯ ಗುಣಗಳನ್ನೂ ಶ್ರೀ ಶಠಾರಿಮುನಿವರ್ಯರಿಗೆ ಪ್ರಕಾಶ ಪಡಿಸಿ ಪರಮಾನನ್ದವನ್ನುಂಟುಮಾಡಲು, ಆ ಆನನ್ದಾನುಭವದಿಂದ ಇವರು ಅಮೃತಪರೀವಾಹರೂಪವಾದ ನಾಲ್ಕು ಪ್ರಬನ್ಧಗಳನ್ನು ನಾಲ್ಕು ವೇದಗಳ ಸಾರ ರೂಪವಾಗಿ ಶ್ರೀ ಭಗವದನುಗ್ರಹದಿಂದಲೇ ದಿವ್ಯಜ್ಞಾನದಿಂದ ಶ್ರೀ ಮಧುರಕವಿ ಯಾೞ್ವಾರ್ರಿಗೆ ಉಪದೇಶಿಸಿದರು.

| ಆ ನಾಲ್ಕು ಪ್ರಬನ್ಧಗಳು ಯಾವುವೆಂದರೆ— | ಪದ್ಯಸಂಖ್ಯಾ |
|---|---|
| (೧) ತಿರುವಿರುತ್ತಮ್— ಋಗ್ವೇದಸಾರ— ಇದರಲ್ಲಿ ಪ್ರಕೃತಿ ಸಮ್ಬನ್ಧನಾಶಾಪೇಕ್ಷೆಯು ವರ್ಣಿಸಲ್ಪಟ್ಟಿದೆ. | ೧೦೦ |
| (೨) ತಿರುವಾಶಿರಿಯಮ್— ಯಜುರ್ವೇದಸಾರ— ಇದರಲ್ಲಿ ಶ್ರೀ ಭಗವನ್ತನ ಸೌನ್ದರ್ಯಾದ್ಯನುಭವವು ಪ್ರತಿಪಾದಿತವಾಗಿದೆ. | ೭ |
| (೩) ಪೆರಿಯತಿರುವನ್ದಾದಿ— ಅಥರ್ವವೇದಸಾರ— ಇದರಲ್ಲಿ ಉತ್ಕಟ ಪ್ರೀತಿರೂಪವಾದ ಭಕ್ತಿ ಪ್ರಕರ್ಷವು ಪ್ರಕಾಶಿತವಾಗಿದೆ. | ೮೭ |
| (೪) ತಿರುವಾಯ್ಮೊೞಿ— ಸಾಮವೇದಸಾರ— ಈ ಚರಮಪ್ರಬನ್ಧದಲ್ಲಿ ಪರಭಕ್ತಿ-ಪರಜ್ಞಾನ-ಪರಮಭಕ್ತಿ ಪೂರ್ವಕವಾದ ಮೋಕ್ಷರೂಪ-ನಿರತಿಶಯಾನನ್ದ ಫಲಪ್ರಾಪ್ತಿಯು ಅತ್ಯನ್ತ ವಿಶದವಾಗಿ ವರ್ಣಿಸಲ್ಪಟ್ಟಿದೆ. | ೧,೧೦೨ |
| ಒಟ್ಟು ಪದ್ಯಸಂಖ್ಯೆ | ೧,೨೯೬ |

## ಸಹಸ್ರಗಾಥಾತ್ಮಕವಾದ ತಿರುವಾಯ್ಮೊೞಿಯ ವಿಭಾಗಕ್ರಮ—

ಈ ತಿರುವಾಯ್ಮೊೞಿ—ಎಂಬ ದ್ರಾವಿಡ ದಿವ್ಯಪ್ರಬನ್ಧವು ಅನ್ದಾದಿ ಪದ್ಯ ರೂಪವಾಗಿ ರಚಿಸಲ್ಪಟ್ಟು ಶ್ರೀ ಶಠಾರಿಮುನಿವರ್ಯರಿಂದಲೇ ೧೦ ಶತಕಗಳಾಗಿ ವಿಭಾಗಿಸಲ್ಪಟ್ಟಿದೆ ಪ್ರತಿಯೊಂದು ಶತಕವೂ ೧೦ ದಶಕಗಳಾಗಿ ವಿಭಾಗಿಸಲ್ಪಟ್ಟಿದೆ. ಪ್ರತಿಯೊಂದು ದಶಕದಲ್ಲಿಯೂ ಮುಖ್ಯ ತಾತ್ಪರ್ಯ ಬೋಧಕವಾದ ಹತ್ತುಪದ್ಯಗಳೂ, ಕೊನೆಯಲ್ಲಿ ಶ್ರೀ ಶಠಾರಿನಾಮಾಂಕಿತವಾದ ಫಲಶ್ರುತಿ ವಿಧಾಯಕ-ಪದ್ಯವೂ-ಒಟ್ಟು ೧೧ ಪದ್ಯಗಳಿವೆ. ಒಂದು ದಶಕದಲ್ಲಿ ಮಾತ್ರ – ಕೇಶವಾದಿ

ದ್ವಾದಶನಾಮಗಳುಳ್ಳ ೧೨ ಪದ್ಯಗಳೂ, ಕೊನೆಯ ಫಲಶ್ರುತಿ ಪದ್ಯವೂ ಸೇರಿ ೧೩ ಪದ್ಯಗಳಿವೆ ಆದುದರಿಂದ ಹತ್ತು ಶತಕಗಳಲ್ಲೂ ಒಟ್ಟು ೧೧೦೨ ಪದ್ಯಗಳಿವೆ.

ಪ್ರತಿಯೊಂದು ದಶಕದಲ್ಲಿಯೂ ಒಂದೊಂದು ಮುಖ್ಯವಾದ ವೇದಾನ್ತ ತತ್ತ್ವವು ಪ್ರತಿಪಾದಿತವಾಗಿದೆ ಹೀಗೆಯೇ ಒಂದೊಂದು ಶತಕದಲ್ಲಿಯೂ ಒಂದು ಮುಖ್ಯ ತಾತ್ಪರ್ಯವು ಪ್ರಕಾಶಿಸುತ್ತದೆ.

## ಈ ತಿರುವಾಯ್ಮೊಳಿ—ಎಂಬ ದಿವ್ಯಪ್ರಬನ್ಧದ ವೈಭವ

ಈ ದಿವ್ಯಪ್ರಬನ್ಧದ ವೈಭವವು ಅನ್ಯಾದೃಶವಾಗಿಯೂ, ಸಕಲ ಲೋಕೋಜ್ಜೀವನಕರವಾಗಿಯೂ, ಸರ್ವಚೇತನ ಪಾಪಹರವಾಗಿಯೂ, ಸರ್ವಮೋಕ್ಷಪ್ರದವಾಗಿಯೂ—ಇರುವುದರಿಂದ ಇದು ವರ್ಣಾಶ್ರಮ-ಜಾತಿಲಿಂಗಾದಿ ಭೇದಗಳಿಲ್ಲದೆ ಸರ್ವಚೇತನರಿಗೂ ನಿತ್ಯಾನುಸನ್ಧೇಯವಾಗಿದೆ ಶ್ರೀ-ಭೂ-ನೀಳಾದಿ ನಾಯಕನಾದ ಭಗವನ್ತನು ಅಖಿಲಹೇಯ ಪ್ರತ್ಯನೀಕನಾಗಿಯೂ, ಸಕಲಕಲ್ಯಾಣಗುಣಾಕರನಾಗಿಯೂ, ಪರಾತ್ಪರನಾಗಿಯೂ, ಶ್ರೀ ವೈಕುಣ್ಠನಾಯಕನಾಗಿಯೂ, ಪರ-ವ್ಯೂಹ-ವಿಭವ-ಅನ್ತರ್ಯಾಮಿ-ಅರ್ಚಾವತಾರಾದಿ ಮಾಹಾತ್ಮ್ಯ ಪರಿಪೂರ್ಣನಾಗಿಯೂ, ವಿಶ್ವರೂಪ-ವಿರಾಡ್ರೂಪ-ವಿಭುಸ್ವರೂಪಾದಿ-ಸಕಲವಿಧ ಸ್ವರೂಪ – ರೂಪ – ಗುಣ ವಿಭೂತ್ಯಾದಿ ವಿಶಿಷ್ಟನಾಗಿಯೂ, ತಾನೇ ಸಕಲಲೋಕ ಸೃಷ್ಟಿ-ಸ್ಥಿತಿ-ಲಯ ಕಾರಣ ಭೂತನಾಗಿಯೂ — ಇದಾನೆಂತಲೂ, ಈ ಶ್ರೀಮನ್ನಾರಾಯಣನೇ ವೈಕುಣ್ಠ ಲೋಕದಿಂದ ಕ್ಷೀರಾಬ್ಧಿಗೆ ತನ್ನ ಅಂಶದಿಂದ ಬಂದು ನಿಂತು, ಭಕ್ತವತ್ಸಲನಾಗಿ ಅತ್ಯನ್ತ ಕಾರುಣ್ಯದಿಂದ ಈ ಭೂಲೋಕದಲ್ಲೂ ಸರ್ವಚೇತನ ಮೋಕ್ಷ ದೀಕ್ಷಿತನಾಗಿ ದುಷ್ಟನಿಗ್ರಹ-ಶಿಷ್ಟಪರಿಪಾಲನ ಪೂರ್ವಕವಾದ ಧರ್ಮಪ್ರತಿಷ್ಠಾಪನಕ್ಕಾಗಿ ಆಗಾಗ್ಯೆ ಧರ್ಮಗ್ಲಾನಿಯ ಸಮಯದಲ್ಲಿ ಮನುಷ್ಯಸಜಾತೀಯನಾಗಿ ಅವತರಿಸುತ್ತಾನೆಂತಲೂ, ಸಕಲ ಭಕ್ತಜನರ ಹೃದಯದಲ್ಲೂ ಅನ್ತರ್ಯಾಮಿರೂಪೇಣ ನಿತ್ಯವಾಸವಂ ಮಾಡುತ್ತ ಯೋಗಿಧ್ಯೇಯನಾಗಿದಾನೆಂತಲೂ, ಆಯಾ ದಿವ್ಯ ಕ್ಷೇತ್ರಗಳ ಅರ್ಚಾವತಾರಮೂರ್ತಿಯಾಗಿ ಭಕ್ತರಿಗೆ ಆರಾಧನಾರ್ಹನಾಗಿದಾನೆಂತಲೂ—ಶ್ರೀ ಶಠಾರಿಮುನಿವರ್ಯರು ಭಗವದನುಗ್ರಹದಿಂದಲೇ ದಿವ್ಯಜ್ಞಾನ ಪರಿಪೂರ್ಣರಾಗಿ ಸಾಕ್ಷಾತ್ಕರಿಸಿ, ಈ ಸಾಕ್ಷಾತ್ಕಾರದ ಅನುಭವಪರಂಪರೆಗಳನ್ನೆಲ್ಲಾ ಈ ಪ್ರಬನ್ಧದಲ್ಲಿ ವರ್ಣಿಸಿ, ಶ್ರೀ ಭಗವನ್ತನು ಕೃಷ್ಣಾವತಾರದಲ್ಲಿ — "ಪತಿಂ ವಿಶ್ವಸ್ಯ" ಎಂಬಂತೆ ಸರ್ವಲೋಕನಾಯಕನಾದುದರಿಂದ ಗೋಪೀವಲ್ಲಭನಾಗಿ ಭಕ್ತಸಂಶ್ಲೇಷವಂ ಮಾಡಿದನೆಂದು ತಿಳಿದು ಅನ್ತಹ ಸಂಶ್ಲೇಷವನ್ನು ತಾವೂ

ಪಡೆಯಬೇಕೆಂದು ಉದ್ದೇಶಿಸಿ, ತಮ್ಮನ್ನು ಒಂದು ನಾಯಕಿಯಂತೆ ಭಾವಿಸಿ, ಈ ನಾಯಕಿಯು ಭಗವಂತನನ್ನೇ ವರಿಸಬೇಕೆಂದು ಅಪೇಕ್ಷಿಸಿ ವಿರಹಸನ್ತಪ್ತೆಯಾಗಿ ಪಕ್ಷಿಗಣ – ಮಧುಕರ – ಮೇಘಾದಿಗಳ ಮೂಲಕ ನಾಯಕನಿಗೆ ಸನ್ದೇಶಗಳನ್ನು ಕಳುಹಿಸುತ್ತ ಕ್ರಮೇಣ ಅಲ್ಲಲ್ಲಿ ದಿವ್ಯಸ್ಥಲಗಳಲ್ಲಿ ಸನ್ನಿಹಿತನಾಗಿರುವ ಅರ್ಚಾ ರೂಪಿಯಾದ ಭಗವನ್ತನ ಕೈಂಕರ್ಯವನ್ನು ಪ್ರಾರ್ಥಿಸಿ, ವಿಭವಾವತಾರಗಳಲ್ಲಿ ಅವನು ಮಾಡಿದ ಅತಿಮಾನುಷ ಚೇಷ್ಟಿತಗಳನ್ನೆಲ್ಲಾ ಸ್ಮರಿಸಿ ಅತ್ಯನ್ತ ಮೋಹಾ ವಿಷ್ಟೆಯಾಗಿ, ಕ್ರಮೇಣ ಆ ಮೋಹವನ್ನು ಬಿಟ್ಟು ಭಗವದ್ಗುಣಾನುಭವಾಮೃತ ಸೇವನವೇ ತನಗೆ ಧಾರಕ–ಪೋಷಕ–ಭೋಗ್ಯವೆಂದು ವರ್ಣಿಸಿ, ಶ್ರೀ ಭಗವನ್ತ ನನ್ನೇ ಸಾಕ್ಷಾತ್ತಾಗಿ ಸಮ್ಬೋಧಿಸಿ ತನ್ನ ದುರ್ದಶೆಯನ್ನು ತಿಳಿಯಪಡಿಸಿ, ಪರಮೋತ್ಕೃಷ್ಟವಾದ ಭಕ್ತಿಯಿಂದ ಅವನನ್ನೇ ಶರಣವಾಗಿ ಹೊಂದಿ, ತಮ್ಮ ನಾಯಿಕಾದಶೆಯಲ್ಲಿಯೇ ಅವನ ಕೃಪೆಗೆ ಪಾತ್ರರಾಗಿ ತತ್ಸಾಯುಜ್ಯರೂಪವಾದ ಸರ್ವಾವಯವ–ಸಂಶ್ಲೇಷವಂ ಪಡೆದು, ನಿತ್ಯಕೈಂಕರ್ಯರೂಪವಾದ ಮೋಕ್ಷ ಸಾಮ್ರಾಜ್ಯವನ್ನು ಅರ್ಚಿರಾದಿ ಮಾರ್ಗದಿಂದ ಶ್ರೀ ವೈಕುಣ್ಠನಗರದಲ್ಲಿ ಹೊಂದಿ ನಿತ್ಯ ನಿರತಿಶಯಾನನ್ದಾನುಭವದಿಂದ ಕೃತಾರ್ಥರಾದರು—ಎಂಬೀ ವಿವರವನ್ನು ತಾವೇ ಈ ತಮ್ಮ ಪ್ರಬನ್ಧದಲ್ಲಿ ಶ್ರೀ ಶಠಾರಿಮುನಿವರ್ಯರು ಸ್ವಾನುಭವವರ್ಣನ ಕ್ರಮದಲ್ಲಿ ವಿಶದೀಕರಿಸಿ ಇರುತ್ತಾರೆ ಈ ಪ್ರಬನ್ಧದಲ್ಲಿರುವ ತತ್ತ್ವಾರ್ಥಗಳು ಸಕಲ ವೇದಾನ್ತಸಾರಾರ್ಥಗಳಾಗಿರುವುದರಿಂದ ಸರ್ವಚೇತನೋಜ್ಜೀವನ ಸಾಧನ ಗಳಾಗಿವೆ. ಆದುದರಿಂದ ಈ ಪ್ರಬನ್ಧದ ಮಾಹಾತ್ಮ್ಯವನ್ನು ತಿಳಿದು ಪೂರ್ವಾ ಚಾರ್ಯರುಗಳೇ ಅದಕ್ಕೆ ಅನೇಕ ವ್ಯಾಖ್ಯಾನಗಳನ್ನು ಮಣಿಪ್ರವಾಳಶೈಲಿಯಲ್ಲಿ ರಚಿಸಿ ಇರುತ್ತಾರೆ. ಅವುಗಳಲ್ಲಿ ಮುಖ್ಯವಾದುವು ಯಾವುವೆಂದರೆ—

| ವ್ಯಾಖ್ಯಾನ | | ಕರ್ತಾ |
|---|---|---|
| (೧) ಆರಾಯಿರಪ್ಪಡಿ | ( ೬,೦೦೦ ಗ್ರನ್ಥಗಳು)— | ತಿರುಕ್ಕುರುಕೈಪ್ಪಿರಾರ್ ಪಿಳ್ಳಾನ್ |
| (೨) ಒನ್ಬದಿನಾಯಿರಪ್ಪಡಿ | ( ೯,೦೦೦ ಗ್ರನ್ಥಗಳು)— | ನಂಜೀಯರ್ |
| (೩) ಪನ್ನೀರಾಯಿರಪ್ಪಡಿ | (೧೨,೦೦೦ ಗ್ರನ್ಥಗಳು)— | ಆ ಕಿಯಮಣವಾಳಜೀಯರ್ |
| (೪) ಇರುಪತ್ತುನಾಲಾಯಿರಪ್ಪಡಿ | (೨೪,೦೦೦ ಗ್ರನ್ಥಗಳು)— | ಪೆರಿಯವಾಚ್ಚಾನ್‌ಪಿಳ್ಳೈ |
| (೫) ಮುಪ್ಪತ್ತಾರಾಯಿರಪ್ಪಡಿ (ಈಡು) | (೩೬,೦೦೦ ಗ್ರನ್ಥಗಳು)— | ವಡಕ್ಕುತ್ತಿರುವೀಧಿಪಿಳ್ಳೈ |

ಈ ಪಞ್ಚವ್ಯಾಖ್ಯಾನಗಳಲ್ಲಿ — ಆರಾಯಿರಪ್ಪಡಿಯು ಶ್ರೀರಾಮಾನುಜಾ ಚಾರ್ಯರ ನಿಯಮನದಿಂದ ಪದ್ಯ ತಾತ್ಪರ್ಯ ಸಂಗ್ರಹರೂಪವಾಗಿ ರಚಿಸಲ್ಪಟ್ಟಿದೆ ಒನ್ಬದಿನಾಯಿರಪ್ಪಡಿ—ಪನ್ನೀರಾಯಿರಪ್ಪಡಿ—ಎಂಬೀ ಎರಡು ವ್ಯಾಖ್ಯಾನಗಳೂ ಪ್ರತಿಪದಾರ್ಥ ವಿವರಣರೂಪವಾಗಿ ಭಾಷಾವ್ಯುತ್ಪತ್ತಿಗೂ ತಾತ್ಪರ್ಯ ಜ್ಞಾನಕ್ಕೂ

ಅತ್ಯನ್ತೋಪಕಾರಕವಾಗಿವೆ ಇರುಪತ್ತುನಾಲಾಯಿರಪ್ಪಡಿಯು ನಂಬಿಳ್ಳೈ—ಎಂಬ ಲೋಕಾಚಾರ್ಯರ ಉಪನ್ಯಾಸದ ಸಾರಾಂಶವು ಅವರ ನಿಯಮನದಿಂದಲೇ ಅವರ ಶಿಷ್ಯರಾದ ಪೆರಿಯ ವಾಚ್ಚಾನ್ಪಿಳ್ಳೈ ಎಂಬ ಮಹನೀಯರಿಂದ ರಚಿಸಲ್ಪಟ್ಟಿದೆ. ಈ ವಾಖ್ಯಾನದಲ್ಲಿ ಪದ್ಯ ತಾತ್ಪರ್ಯವಿವರಣ-ಪದ್ಯಗಳಿಗೆ ಸಂಗತಿ-ದಶಕಗಳಿಗೆ ಸಂಗತಿ-ಶತಕಗಳಿಗೆ ಸಂಗತಿ — ಇತ್ಯಾದಿ ವಿವರವೆಲ್ಲಾ ಚೆನ್ನಾಗಿ ಪ್ರಕಾಶಿತವಾಗಿದೆ ಮುಪ್ಪತ್ತಾರಾಯಿರಪ್ಪಡಿಯೆಂಬ ವ್ಯಾಖ್ಯಾನವೂ ಕೂಡ ಆ ನಂಬಿಳ್ಳೈಯವರ ಉಪನ್ಯಾಸದ ಅನುವಾದವಾಗಿಯೇ ಸವಿಸ್ತರವಾಗಿ ಅತ್ಯನ್ತ ಸ್ವರಸವಾಗಿ ಅವರ ಶಿಷ್ಯರಾದ ವಡಕ್ಕುತ್ತಿರುವೀಧಿಪ್ಪಿಳ್ಳೈಯವರಿಂದ ಆಚಾರ್ಯವಚನಕ್ರಮದಲ್ಲಿಯೇ ಪ್ರತಿದಿನವೂ ಕಾಲಕ್ಷೇಪಾನನ್ತರ ಬರೆಯಲ್ಪಟ್ಟಿತು ಇದು ನಮ್ಬಿಳ್ಳೈಯವರ ಅನುಮತಿಯಿಲ್ಲದೆಯೇ ಚಿನ್ತನೆಗೋಸ್ಕರ ಬರೆಯಲ್ಪಟ್ಟಿದ್ದುದರಿಂದ, ಆ ಆಚಾರ್ಯರು ಇದನ್ನು ತಿಳಿದು ವಡಕ್ಕುತ್ತಿರುವೀಧಿಪ್ಪಿಳ್ಳೈಯವರಿಂದ ಈ ವ್ಯಾಖ್ಯಾನವನ್ನು ತೆಗೆದುಕೊಂಡು ಆಮೂಲಾಗ್ರವಾಗಿ ಚೆನ್ನಾಗಿ ಪರಿಶೀಲಿಸಿ ಇದು ತಮ್ಮ ಉಪನ್ಯಾಸದ ವಚನಾನುವಾದವಾಗಿಯೇ ಅತ್ಯನ್ತ ಸ್ವಾರಸ್ಯದೊಡನೆ ಯಾವ ಅರ್ಥವನ್ನೂ ಬಿಡದೆ ಸಮ್ಪೂರ್ಣವಾಗಿ ಲಿಖಿತವಾಗಿರುವುದನ್ನು ಕಂಡು ಅನ್ತರಂಗದಲ್ಲಿ ಪರಮಾನನ್ದಭರಿತರಾಗಿ—"ನನ್ನ ಅನುಮತಿಯಿಲ್ಲದೆ ನೀವು ಹೇಗೆ ಬರೆದಿರಿ?"—ಎಂದು ವಡಕ್ಕುತ್ತಿರುವೀಧಿಪ್ಪಿಳ್ಳೈಯವರನ್ನು ಆಕ್ಷೇಪಿಸಿದಂತೆ ನಟಿಸಿ, ಈ ಮಹಾನಿಧಿಯನ್ನು ಅವರ ಕೈಯಲ್ಲಿ ಪುನಃ ಕೊಡದೆ ತಾವೇ ಇಟ್ಟುಕೊಂಡಿದ್ದು ಕ್ರಮೇಣ ಈ ವ್ಯಾಖ್ಯಾನವೇ (ತಮ್ಮ ಕಾಲಾನನ್ತರ) ಸರ್ವರಿಗೂ ಕಾಲಕ್ಷೇಪಕ್ಕೆ ಅರ್ಹವಾದುದೆಂದು ತಾವೇ ನಿರ್ಣಯಿಸಿ, ಅದೇಪ್ರಕಾರ ತಮ್ಮ ಶಿಷ್ಯಪ್ರಶಿಷ್ಯ ಪರಂಪರೆಗೆಲ್ಲಾ ನಿಯಮಿಸಿ ಅವರ ಕೈಯಲ್ಲಿ ಕೊಟ್ಟು ಸುರಕ್ಷಿತವಾಗಿಡುವಂತೆ ಆಜ್ಞಾಪಿಸಿದರು. ಆದುದರಿಂದ—ಇರುಪತ್ತುನಾಲಾಯಿರಪ್ಪಡಿ— ಎಂಬ ವ್ಯಾಖ್ಯಾನವೂ ಸ್ವಾರಸ್ಯಭರಿತವಾಗಿ ಸವಿಸ್ತರವಾಗಿದ್ದಾಗ್ಯೂ ಈ ಮುಪ್ಪತ್ತಾರಾಯಿರಪ್ಪಡಿಯೇ ವಿಶೇಷವಾಗಿ ಸರ್ವರಿಗೂ ಆದರಣೀಯವಾಗಿ ನಿತ್ಯವೂ (ನಂಬಿಳ್ಳೈಯವರ ನಿಯಮನಾನುಸಾರವಾಗಿ) ಕಾಲಕ್ಷೇಪದಲ್ಲಿ ಪಾರಾಯಣಮಾಡಲ್ಪಡುತ್ತಿದೆ. ಈ ವ್ಯಾಖ್ಯಾನವು ಸಾರತಮವಾಗಿ ಅಮೃತರಸಘನವಾದ ಮಹಾನಿಧಿಯಾಗಿರುವುದರಿಂದ ಇದಕ್ಕೆ "ಈಡು" ಎಂಬ ನಾಮಧೇಯವು ಉಂಟಾಗಿ ಜಗತ್ಪ್ರಸಿದ್ಧವಾಗಿಯೂ ಸರ್ವಲೋಕಾಭಿನನ್ದ್ಯವಾಗಿಯೂ ಇದೆ.

ಈ ಪಞ್ಚವ್ಯಾಖ್ಯಾನಗಳೂ—ಶ್ರೀ ಭಗವದ್ವಿಷಯವೆಂಬ – ೧೦ ಸಮ್ಪುಟಗಳುಳ್ಳ—ಶ್ರೀ ಕೋಶಗಳಲ್ಲಿ ಪ್ರಮಾಣಸಂಗ್ರಹಾದ್ಯುಪಕರಣಗಳೊಡನೆ ಉಭಯವೇದಾನ್ತ ಪ್ರವೀಣರಾದ ವಿದ್ವಾಂಸರಿಂದ ಚೆನ್ನಾಗಿ ಪರಿಶೋಧಿಸಲ್ಪಟ್ಟು ಸಕಲ ಲೋಕೋಜ್ಜೀವನಕ್ಕಾಗಿ ಮುದ್ರಿಸಲ್ಪಟ್ಟವೆ ಈ ಶ್ರೀಕೋಶಗಳನ್ನು ಆರಾಧಿಸಿ

ನಿತ್ಯವೂ ಕಾಲಕ್ಷೇಪದಿಂದ ರಸಾನುಭವಮಾಡುವ ಮಹನೀಯರೆಲ್ಲರೂ ಈ ಭೂಲೋಕದಲ್ಲಿಯೇ ಮುಕ್ತರೆಂದು ಇವರ ನಿರತಿಶಯಾನಂದಾನುಭವದಿಂದಲೇ ವ್ಯಕ್ತವಾಗುತ್ತದೆ. "ಅತ್ರ ಬ್ರಹ್ಮ ಸಮಶ್ನುತೇ"—"ಇರುಪ್ಪಿಡಮ್ ವೈಕುನ್ದಮ್ ವೇಙ್ಗಡಮ್"

## ತಿರುವಾಯ್ಮೊೞಿಯ

# ಶತಕಾರ್ಥಸಂಗ್ರಹ

ಈ ತಿರುವಾಯ್ಮೊೞಿಯ ಶತಕಗಳ ತಾತ್ಪರ್ಯಸಂಗ್ರಹವನ್ನು ೧೨,೦೦೦ ಮತ್ತು ೩೬,೦೦೦ ಎಂಬ ಎರಡು ವ್ಯಾಖ್ಯಾನಗಳಲ್ಲೂ ಪೂರ್ವಾಚಾರ್ಯರು (ಸ್ವಲ್ಪ ವ್ಯತ್ಯಾಸದೊಡನೆ) ಎರಡು ಪ್ರಕಾರವಾಗಿ ಸೂಚಿಸಿ ಇರುತ್ತಾರೆ

| | ವ್ಯಾಖ್ಯಾನ-೧೨,೦೦೦ | ವ್ಯಾಖ್ಯಾನ-೩೬,೦೦೦ |
|---|---|---|
| ೧. ಪ್ರಥಮ ಶತಕ | — ಭಗವಂತನ ರಕ್ಷಕತ್ವ | ಭಗವತ್ಕೈಂಕರ್ಯವೇ ಪುರುಷಾರ್ಥವು |
| ೨. ದ್ವಿತೀಯ ಶತಕ | — ಭೋಗ್ಯತ್ವ | . ತದೇಕ ಭೋಗ್ಯತ್ವವೇ ಪುರುಷಾರ್ಥವು |
| ೩. ತೃತೀಯ ಶತಕ | — ತದೇಕಾನುಭವ | . ಅರ್ಚಾವತಾರ ವಿಷಯದಲ್ಲಿ ವಾಚಿಕಕೈಂಕರ್ಯ |
| ೪ ಚತುರ್ಥ ಶತಕ | — ತದೇಕಪ್ರಿಯತ್ವ | ಭಗವಚ್ಚರಣಯುಗಳವೇ ಶರಣವು |
| ೫ ಪಞ್ಚಮ ಶತಕ | — ನಿರಪಾಯೋಪಾಯತ್ವ | ಭಗವಂತನ ಸಿದ್ಧೋಪಾಯತ್ವ |
| ೬ ಷಷ್ಠ ಶತಕ | ಉಪಾಯವರಣಪ್ರಕಾರ | ಸಿದ್ಧೋಪಾಯಸ್ವೀಕಾರ ಕ್ರಮ (ಲಕ್ಷ್ಮೀಪುರುಷ-ಕಾರ ಪೂರ್ವಕವಾದ ಶರಣವರಣ |
| ೭ ಸಪ್ತಮ ಶತಕ | — ವಿರೋಧಿಸ್ವರೂಪವರ್ಣನ ... | ಬಾಹ್ಯಸಂಶ್ಲೇಷಾಪೇಕ್ಷೆ |
| ೮. ಅಷ್ಟಮ ಶತಕ | — ವಿರೋಧಿನಿವೃತ್ತಿಪ್ರಕಾರ ... | ಅಹಂಕಾರ ಮಮಕಾರ ತ್ಯಾಗ |
| ೯ ನವಮ ಶತಕ | — ಫಲಸ್ವರೂಪವರ್ಣನ | . ಭಗವಂತನ ಸೌಶೀಲ್ಯಾದಿ ಗುಣಾನುಭವ |
| ೧೦. ದಶಮ ಶತಕ | — ಫಲಪ್ರಾಪ್ತಿ | .. ಅರ್ಚಿರಾದಿಮಾರ್ಗ ದ್ವಾರಾ ಮೋಕ್ಷಪ್ರಾಪ್ತಿ |

## (ಶ್ರೀ ಕಲ್ಕಿಸಿಂಹ ಕಾರಿಕೆಗಳು)

ಈ ವಿಷಯದಲ್ಲಿ ಶ್ರೀ ಕಲ್ಕಿಸಿಂಹ ವಿರಚಿತವಾದ ಕಾರಿಕೆಗಳು ಯಾವುವೆಂದರೆ,—

ರಕ್ಷಕತ್ವಂ ಚ ಭೋಗ್ಯತ್ವಂ ತದೇಕಾನುಭವೋಽನಿಶಮ್ ।
ತದೇಕಪ್ರಿಯತಾ ಚಾಪಿ ನಿರಪಾಯಾಽಪ್ಯುಪಾಯತಾ ॥
ಉಪಾಯವರಣೇ ರೀತಿ ಸ್ಸ್ವರೂಪಂ ಚ ವಿರೋಧಿನಾಮ್ ।
ತನ್ನಿವೃತ್ತಿಪ್ರಕಾರಶ್ಚ ಫಲಂ ತತ್ಪ್ರಾಪ್ತಿರಿತ್ಯಪಿ ॥
ಶತಕಾನಾನ್ತು ತಾತ್ಪರ್ಯಂ ರಮ್ಯಜಾಮಾತೃಕೀರ್ತಿತಮ್ ॥

---

ಪ್ರಥಮೇ ಶತಕೇ ಭಾತಿ ಕೈಂಕರ್ಯಸ್ಯ ಪುಮರ್ಥತಾ ।
ತದೇಕ ಭೋಗ್ಯತಾಯಾಸ್ತು ದ್ವಿತೀಯೇ ಪುರುಷಾರ್ಥತಾ ॥
ತೃತೀಯೇ ಽರ್ಚಾವತಾರೇಷು ಕೈಙ್ಕರ್ಯಂ ವಾಚಿಕಂ ಸ್ಮೃತಮ್ ।
ಚತುರ್ಥೇ ಭಗವತ್ಪಾದ ದ್ವಯಂ ಹಿ ಶರಣಂ ಸ್ಮೃತಮ್ ॥
ಪಞ್ಚಮೇ ಶತಕೇ ವಿಷ್ಣೋ ಸ್ಸಿದ್ಧೋಪಾಯತ್ವ ಮುಚ್ಯತೇ ।
ಷಷ್ಠೇ ತು ಸ್ವೀಕೃತಿಸ್ತಸ್ಯ ಲಕ್ಷ್ಮೀಪುರುಷಕಾರತಃ ॥
ಸಪ್ತಮೇ ಬಾಹ್ಯಸಂಶ್ಲೇಷಕಾಂಕ್ಷಾ ಶ್ರೀ ಪರಮಾತ್ಮನಾ ।
ಅಷ್ಟಮೇಽಹಂಮಮೇತ್ಯಸ್ಯ ದ್ವಯಸ್ಯ ತ್ಯಾಗ ಉಚ್ಯತೇ ॥
ನವಮೇ ಶ್ರೀಶಕಲ್ಯಾಣಗುಣಾನುಭವ ಉಚ್ಯತೇ ।
ಅರ್ಚಿರಾದಿಗತೇರ್ಮೋಕ್ಷ ಪ್ರಾಪ್ತಿಶ್ಚ ದಶಮೇ ಸ್ಮೃತಾ ॥
ಏವಮುತ್ತರವೀಥಿ–ಶ್ರೀಕೃಷ್ಣಸೂರೀನ್ದ್ರ–ಕೀರ್ತಿತಮ್ ।
ಸಹಸ್ರಗಾಥಾತಾತ್ಪರ್ಯಂ ಶತಕಾನಾಮನುಕ್ರಮಾತ್ ॥

---

## (ಶತಕಗಳ ಯೋಜನಕ್ರಮ)

ಚತುಷ್ಕೇ ಚಾದಿಮೇ ಭಾತಿ ಯಾಥಾತ್ಮ್ಯಂ ಸಿದ್ಧರೂಪಿಣಃ ।
ಪರಾವರಾತ್ಮನೋ ವಿಷ್ಣೋ ಶ್ರೀಪತೇಃ ಪರಮಾತ್ಮನಃ ॥
ಚತುಷ್ಕೇ ಚಾನ್ತಿಮೇ ಭಾತಿ ಸಾಧ್ಯಂ ಚಾನಿಷ್ಟವಾರಣಮ್ ।
ಮಧ್ಯದ್ವಯೇ ತು ವರಣಂ ಚೋಪಾಯಸ್ಯಾನಪಾಯಿನಃ ॥

(ಅರ್ಥಪಂಚಕರೀತ್ಯಾ ಯೋಜನ)

ಪ್ರಾಪ್ಯ ಸ್ವರೂಪಮೇವೋಕ್ತಂ ಪ್ರಥಮೇ ಶತಕದ್ವಯೇ ।
ಪ್ರಾಪ್ತೃ ಸ್ವರೂಪಮೇವೋಕ್ತಂ ದ್ವಿತೀಯೇ ಶತಕದ್ವಯೇ ॥
ಉಪಾಯಸ್ಸ್ವೀಕೃತಿಶ್ಚೋಕ್ತಾ ತೃತೀಯೇ ಶತಕದ್ವಯೇ ।
ವಿರೋಧಿನಾಂ ನಿವೃತ್ತಿಶ್ಚ ಚತುರ್ಥೇ ಶತಕದ್ವಯೇ ॥
ಪ್ರಾಪ್ತೇಶ್ಚ ಫಲಸಿದ್ಧಿಸ್ತು ಪಂಚಮೇ ಶತಕದ್ವಯೇ ।
ಅರ್ಥಪಂಚಕರೀತ್ಯೈವಂ ಶತಕಾನಾಂ ಹಿ ಯೋಜನಮ್ ॥

(ಅರ್ಥಪಂಚಕರೀತ್ಯಾ-ಸಂಗ್ರಹಕಾರಿಕಾ)

ಪರಸ್ವರೂಪಂ ಪ್ರಥಮದ್ವಯೇಽಸ್ತಿ
ದ್ವಯೇ ದ್ವಿತಿ ಯೇ ಕಿಲ ಜೀವಕೃತ್ಯಮ್ ।
ದ್ವಯೇ ತೃತೀಯೇ ಸದುಪಾಯಚಿನ್ತಾ
ವಿರೋಧಿ ತುರ್ಯೇ! ಚರಮೇ ಚ ಸಿದ್ಧಿಃ ॥

ಏವಂ ಶ್ರೀ ಕಲ್ಕಿಸಿಂಹೇನ ರಚಿತಾ ಪರಮಾತ್ಮನಾ ।
ಸಹಸ್ರಗಾಥಾತಾತ್ಪರ್ಯ ಸಾರಾಣಾಂ ಕಾರಿಕಾವಳೀ ॥

ಈ ಪ್ರಕಾರ—ಶತಕಗಳ ಅರ್ಥಸಂಗ್ರಹವನ್ನು ಇಲ್ಲಿ ಸೂಚಿಸಿ, ಮುಂದೆ ಆಯಾ ದಶಕದ ಕೊನೆಯಲ್ಲಿ—ದ್ರಮಿಡೋಪನಿಷತ್ಸಂಗತಿ—ಮತ್ತು ದ್ರಮಿಡೋಪನಿಷತ್ತಾತ್ಪರ್ಯ ರತ್ನಾವಳೀ—ಶ್ಲೋಕಗಳ ಅನನ್ತರ ಆಯಾ ದಶಕದ ಸಾರಾಂಶವನ್ನು ವಿವರಿಸುತ್ತೇವೆ. ಮತ್ತು ಆಯಾ ಶತಕದ ಕೊನೆಯಲ್ಲೂ ಹತ್ತು ದಶಕಗಳ ಅರ್ಥಸಂಗ್ರಹವನ್ನೂ ಸೂಚಿಸುತ್ತೇವೆ. ಶ್ರೀ ಭಗವದ್ವಿಷಯ ಶ್ರೀಕೋಶದಲ್ಲಿರುವ ವ್ಯಾಖ್ಯಾನಗಳ ತಾತ್ಪರ್ಯವನ್ನೆಲ್ಲಾ ವಿಶದವಾಗಿ ವಿವರಿಸಲು ಇಲ್ಲಿ ಅವಕಾಶವಿಲ್ಲವಾದುದರಿಂದ ಸಾರಾಂಶವನ್ನು ಮಾತ್ರ ಸಂಗ್ರಹಿಸಿ ಪ್ರಕಾಶಪಡಿಸಿ ಇರುತ್ತೇವೆ.

ಈ ತಿರುವಾಯ್ಮೊಳಿಯಲ್ಲಿ ಸಂಕೀರ್ತಿತವಾದ

# ದಿವ್ಯಕ್ಷೇತ್ರಗಳ ವಿವರ.

| | (ಶತಕ) (ದಶಕ) | (ಆದಿ) | (ಪದ್ಯಸಂಖ್ಯೆ) |
|---|---|---|---|
| I ಚೋಳಮಣ್ಡಲದಲ್ಲಿ (೫) — | | | |
| ೧ ಶ್ರೀರಂಗ | ೭—೨ | ಕಙ್ಗುಲುಮ್ ಪಕಲುಮ್ | ೧೧ |
| ೨ ತಿರುಪ್ಪೇರ್ (ಶ್ರೀನಾಮಪುರೀ) | ೧೦—೮ | ತಿರುಮಾಲಿರುಂಶೋಲೈಮಲೈ | ೧೧ |
| ೩. ತಿರುಕ್ಕುಡನ್ದೈ (ಶ್ರೀ ಕುಂಭಪುರೀ) | ೫—೮ | ಆರಾವಮುದೇ | ೧೧ |
| ೪. ತಿರುವಿಣ್ಣಕರ್ (ಶ್ರೀ ದಿವ್ಯಪುರೀ) | ೬—೩ | ನಲ್ ಕುರವುಮ್ | ೧೧ |
| ೫ ತಿರುಕ್ಕಣ್ಣಪುರಮ್ (ಶ್ರೀಕೃಷ್ಣಪುರಮ್) | ೯—೧೦ | ಮಾಲೈನಣ್ಣಿ | ೧೧ |
| II ಪಾಣ್ಡ್ಯಮಣ್ಡಲದಲ್ಲಿ (೧೨)— | | | |
| ೧ ತಿರುಮಾಲಿರುಂಶೋಲೈಮಲೈ (ಶ್ರೀ ವನಗಿರಿ) | ೨—೧೦ | ಕಿಳರೊಳಿ | ೧೧ |
| | ೧೦—೭ | ಶೆಂಶೊಲ್ | ೧೧ |
| ೨. ತಿರುಮೋಹೂರ್ (ಶ್ರೀ ಮೋಹಪುರೀ) | ೧೦—೧ | ತಾಳತಾಮರೈ | ೧೧ |
| ೩ ತಿರುಕೂರುಕ್ಕೂರ್ (ಶ್ರೀ ಕುರುಕಾಪುರಮ್) | ೪—೧೦ | ಒನ್ರುಂತೇವುಮ್ | ೧೧ |
| ೪. ತೊಲೈವಿಲ್ಲಿಮಂಗಲಮ್ (ವರಧನ್ವಿಮಂಗಲಪುರಮ್ | ೬—೫ | ತುವಳಿಲ್ | ೧೧ |
| ೫ ಶಿರೀವರಮಂಗಲನಕರ್—ವಾನಮಾಮಲೈ (ಶ್ರೀವರಮಂಗಲಪುರಮ್) | ೫—೭ | ನೋಱ್ಱನೋನ್ಬು | ೧೧ |
| ೬ ತಿರುಪ್ಪುಳಿಂಗುಡಿ (ಶ್ರೀ ಪುಳಿಂಗುಡಿ) | ೮—೩—(೫) | ಅಙ್ಗುಮಿಙ್ಗುಮ್ (ಕೊಡಿಯಾರ್) | ೧ |
| | ೯—೨ | ಪಣ್ಡೈನಾಳಾಲೇ | ೧೧ |

| | (ಶತಕ) | (ದಶಕ) | (ದಿ) | (ಪದ್ಯಸಂಖ್ಯೆ) |
|---|---|---|---|---|
| ೭. ತಿರುಪ್ಪೇರ್ಶೈ (ಶ್ರೀ ಬೇರಪುರೀ) | ೭—೩ | | ವೆಳ್ಳೈಚ್ಚುೞ್ ಶಂಗ | ೧೧ |
| ೮. ಶ್ರೀ ವೈಕುನ್ದಮ್ (ಶ್ರೀ ವೈಕುಣ್ಠಪುರಮ್) | ೯—೨—(೪) | | ಪುೞಿ (ಪುಳಿಂಗುಡಿ) | ೧ |
| ೯. ವರಗುಣಮಂಗೈ (ವರಗುಣ ಶ್ರೀಪುರೀ) | ೯—೨—(೪) | | ,, ,, | ೧ |
| ೧೦. ತಿರುಕ್ಕುಳನ್ದೈ | ೮—೨—(೪) | | ನಙ್ಗಳ್‌ವರಿವಳ್ಳ (ಕೂಡಚ್ಚೆನ್ರೇ) | ೧ |
| ೧೧. ತಿರುಕ್ಕುರುಂಗುಡಿ (ಶ್ರೀ ಕುರಙ್ಗನಗರೀ) | ೧—೧೦—(೯) | | ಪೊರುಮಾನೀಳ್ (ನಮ್ಬಿಯೈ) | ೧ |
| | ೩—೯—(೨) | | ಶೊನ್ನಾಲ್ (ಉಳನಾಕವೇ) | ೧ |
| | ೫—೫ | | ಎಙ್ಙನೇಯೋ | ೧೧ |
| | ೬—೭ | | ಉಣ್ಣುಂಶೋಱು | ೧೧ |
| ೧೨ ತಿರುಕ್ಕೋಳೂರ್ | ೮—೩—(೫) | | ಅಙ್ಗುಮಿಙ್ಗುಮ್ (ಕೊಡಿಯಾರ್) | ೧ |

III ಮಲೈಯಾಳದೇಶದಲ್ಲಿ (೧೨)—

| | (ಶತಕ) | (ದಶಕ) | (ದಿ) | (ಪದ್ಯಸಂಖ್ಯೆ) |
|---|---|---|---|---|
| ೧ ತಿರುವನನ್ತಪುರಮ್ (ಅನನ್ತಶಯನ) | ೧೦—೨ | | ಕೆಡುಮಿಡರ್ | ೧೧ |
| ೨. ತಿರುವಣ್‌ಪರಿಶಾರಮ್ (ವಣ್‌ಪರಿಶಾರಪುರೀ) | ೮—೩—(೭) | | ಅಙ್ಗುಮಿಙ್ಗುಮ್ (ವರುವಾರ್) | ೧ |
| ೩. ತಿರುಕ್ಕಾಟ್ಕರೈ | ೯—೬ | | ಉರುಕುಮಾಲ್ | ೧೧ |
| ೪. ತಿರುಮೂೞಿಕ್ಕಳಮ್ | ೯—೭ | | ಎಙ್ಗಾನಲ್ | ೧೧ |
| ೫ ತಿರುಪ್ಪುಲಿಯೂರ್ (ಕುಟ್ಟನಾಡು) } (ಶ್ರೀ ಮದ್ವ್ಯಾಘ್ರಪುರಮ್) | ೮—೯ | | ಕರುಮಾಣಿಕ್ಕಮಲೈ | ೧೧ |
| ೬ ತಿರುಚ್ಚೆಙ್ಗುನ್ರೂರ್ | ೮—೪ | | ವಾರ್‌ಕಡಾವರುವಿ | ೧೧ |
| ೭. ತಿರುನಾವಾಯ್ | ೯—೮ | | ಅಱುಕ್ಕುಮ್‌ವಿನೈ | ೧೧ |

| | (ಶತಕ) (ದಶಕ) | (ಆದಿ) | (ಪದ್ಯಸಂಖ್ಯೆ) |
|---|---|---|---|
| ೮. ತಿರುವಲ್ಲವಾೞ (ಶ್ರೀ ಸಂವೃದ್ಧಿಪುರಮ್) | ೫—೯ | ಮಾನೇಯ್ ನೋಕ್ಕು | ೧೧ |
| ೯. ತಿರುವಣ್ವಣ್ಡೂರ್ (ಶ್ರೀ ಮಧುಕೃತ್ಪುರಮ್) | ೬—೧ | ವೈಕಲ್ ಪೂಙ್ಗೞಿವಾಯ್ | ೧೧ |
| ೧೦. ತಿರುವಾಟ್ಟಾಱು | ೧೦—೬ | ಅರುಳ್ ಪೆಱುವಾರ್ | ೧೧ |
| ೧೧. ತಿರುಕ್ಕಡಿತ್ತಾನಮ್ (ಶ್ರೀ ಕಟಿಸ್ಥಾನಮ್) | ೮—೬ | ಎಲ್ಲಿಯುಙ್ಕಾಲೈಯುಮ್ | ೧೧ |
| ೧೨. ತಿರುವಾಱನ್ವಿಳೈ (ಶ್ರೀ ನದೀಮಾತೃಕಪುರಮ್) | ೭—೧೦ | ಇನ್ಬಮ್ ಪಯಕ್ಕ | ೧೧ |
| IV ಉತ್ತರ ದೇಶದಲ್ಲಿ (೫)— | ೩—೩ | ಒೞಿವಿಲ್ ಕಾಲಮ್ | ೧೧ |
| ೧ ತಿರುವೇಙ್ಗಡಮ್ (ಶ್ರೀ ವೇಙ್ಕಟಾದ್ರಿ) | ೬—೧೦ | ಉಲಕಮುಣ್ಡ | ೧೧ |
| | ೭—೪ | ಆೞಿಯೆೞ | ೧೧ |
| ೨. ತಿರುವಯೋತ್ತಿ (ಅಯೋಧ್ಯಾ) | ೭—೫ | ಕತ್ಪಾರ್ | ೧೧ |
| ೩. ತುವರೈ (ದ್ವಾರಕಾ) | ೫—೩—(೬) | ಮಾಶಱುಶೋದಿ (ಅನ್ನೈಯರ್) | ೧ |
| ೪. ವಡಮದುರೈ (ಬೃನ್ದಾವನ-ಮಧುರಾ) | ೮—೫—(೯) | ಮಾಯಕ್ಕೂತ್ತಾ (ಇದುವೋ) | ೧ |
| | ೯—೧—(೩-೧೦) | ಕೊಣ್ಡಪೆಣ್ಡಿರ್ | ೯ |
| | | ಅನೇಕ ಪದ್ಯಗಳಲ್ಲಿ | |
| ೫. ತಿರುಪ್ಪಾಱ್ಕಡಲ್ (ಕ್ಷೀರಾಬ್ಧಿ) | | | |
| V ಪರಮಪದದಲ್ಲಿ (೧)— | | | |
| ೧ ತಿರುನಾಡು (ಶ್ರೀ ವೈಕುಣ್ಠಪುರ) | | (ಅನೇಕ ಸ್ಥಲಗಳಲ್ಲಿ) | |
| ವಿಶೇಷತಃ | ೧೦—೯ | ಶೂೞ್ವಿಶುಮ್ಬು | ೧೧ |
| | ,, —೧೦ | ಮುನಿಯೇ ನಾನ್ಮುಕನೇ | ೧೧ |

ಒಟ್ಟು ದಿವ್ಯಕ್ಷೇತ್ರಗಳು (೩೫)

ಈ ಪ್ರಕಾರ—ಮೂವತ್ತೈದು ಕ್ಷೇತ್ರಗಳೇ ಶ್ರೀ ಶಠಾರಿಮುನಿವರ್ಯರಿಂದ ತಿರುವಾಯ್‌ಮೊಳಿಯಲ್ಲಿ ಸಂಕೀರ್ತನವಾಗಿವೆಯೆಂದು ಕೆಲವರು ಹೇಳುತ್ತಾರೆ ಆದರೆ ಶ್ರೀರಾಮಾನುಜಾಚಾರ್ಯರು "ಮಾಱನಡಿಪಣಿನ್ದುಯ್‌ನ್ದವನ್"—ಎಂಬಂತೆ ಶ್ರೀ ಶಠಾರಿಮುನಿಚರಣಾರವಿನ್ದಾನ್ತರಙ್ಗ ಭಕ್ತರಾದುದರಿಂದ ಅವರ ಹೃದಯವನ್ನು ಚೆನ್ನಾಗಿ ತಿಳಿದು ಭಾವಜ್ಞಶಿಖಾಮಣಿಯಾಗಿ ನಾಲ್ಕನೇ ಶತಕದ ಪ್ರಥಮ ದಶಕವಾದ "ಒರುನಾಯಕಮ್" ಎಂಬ ದಶಕವು ಶ್ರೀಯಾದವಾದ್ರಿ (ಮೇಲುಕೋಟೆ) ತಿರುನಾರಾಯಣಪುರದ ವಿಷಯದಲ್ಲಿ ರಚಿತವಾದ ಪ್ರಬನ್ಧವೆಂದು ನಿರ್ಣಯಿಸಿ, ಈ ದಶಕವನ್ನು ಶ್ರೀಯಾದವಾದ್ರಿಯ ಶ್ರೀಮನ್ನಾರಾಯಣ ಸ್ವಾಮಿಯ ಸನ್ನಿಧಿಯಲ್ಲಿ ವಿಜ್ಞಾಪಿಸಿ ಸಮರ್ಪಿಸಿದರೆಂದು ಸತ್ಸಮ್ಪ್ರದಾಯಜ್ಞರು ಹೇಳುತ್ತಾರೆ ಮೇಲುಕೋಟೆ – ತಿರುನಾರಾಯಣಪುರವು – ಆೞ್ವಾರ್‌ಪಾಡಲ್ – ದಿವ್ಯದೇಶವಲ್ಲವೆಂತಲೂ, ಪುರಾಣ ಪ್ರತಿಪಾದಿತವಾದ ಕ್ಷೇತ್ರವೆಂತಲೂ ಪ್ರಥಮಪಕ್ಷದವರ ಅಭಿಪ್ರಾಯ. ದ್ವಿತೀಯ ಪಕ್ಷದವರು ತಿರುನಾರಾಯಣಪುರವು ಅಷ್ಟೋತ್ತರ ಶತಸ್ಥಾನ ಸಾರವಾದುದರಿಂದ ಶ್ರೀರಾಮಾನುಜಾಚಾರ್ಯರು ನಿರ್ಣಯಿಸಿದಂತೆಯೇ ಆೞ್ವಾರ್ ಪಾಡಲಿಗೆ ಸೇರಿದ ದಿವ್ಯದೇಶವೇ—ಎಂದು ಅಂಗೀಕರಿಸಿ ಇರುತ್ತಾರೆ* ಈ

---

* ಶ್ರೀರಾಮಾನುಜಾಚಾರ್ಯರು ಶ್ರೀರಂಗನಾಥನ ನಿಯಮನದಿಂದ ಈ ಪ್ರಾನ್ತದಯಮಾಡಿ ಕೆಲವು ದಿನಗಳವರೆಗೆ ನಾಲಗ್ರಾಮದಲ್ಲಿದ್ದು ತೊಂಡನೂರು-ಯಾದವಪುರಿಯಲ್ಲಿ ವಾಸಮಾಡುತ್ತಿದ್ದಾಗ ಅಲ್ಲಿಯ ರಾಜನಾದ ವಿಷ್ಣುವರ್ಧನ ರಾಯನನ್ನು ಜೈನಮತದಿಂದ ಶ್ರೀ ವೈಷ್ಣವಮತಕ್ಕೆ ಸೇರಿಸಿ ಶಿಷ್ಯನನ್ನಾಗಿ ಮಾಡಿಕೊಂಡು, ಅನನ್ತರ ಶ್ರೀಯಾದವಗಿರಿಯಮೇಲೆ ಹುತ್ತದಲ್ಲಿದ್ದ ಶ್ರೀ ನಾರಾಯಣ ಸ್ವಾಮಿಯು ಸ್ವಪ್ನದಲ್ಲಿ ಇವರಿಗೆ ದರ್ಶನವಂಕೊಟ್ಟು ಅಲ್ಲಿಗೆ ಬಂದು ಜೀರ್ಣೋದ್ಧಾರಮಾಡಬೇಕೆಂದು ಪ್ರೇರಿಸಲು, ಅಲ್ಲಿಗೆ ಹೋಗಿ ಹುತ್ತವನ್ನು ಕಂಡುಹಿಡಿದು ಶೋಧಿಸಿ ಶ್ರೀ ನಾರಾಣಸ್ವಾಮಿಯ ದರ್ಶನವಂಮಾಡಿ ಅತ್ಯನ್ತ ಸನ್ತುಷ್ಟರಾಗಿ ವಿಷ್ಣುವರ್ಧನರಾಯನ ಸಹಾಯದಿಂದ ಜೀರ್ಣೋದ್ಧಾರಮಾಡಿ ದೇವಾಲಯ ಮಂಟಪಗೋಪುರ ಪ್ರಾಕಾರಾದಿಗಳನ್ನೆಲ್ಲಾ ಕಟ್ಟಿಸಿ ಅಲ್ಲಿ ದೇವಸ್ಥಾನದ ಎದುರಿಗೆ ಬದರೀವೃಕ್ಷದ ಕೆಳಗೆ ತಮ್ಮ ವಾಸಕ್ಕಾಗಿ ಯತಿರಾಜಮಠವೆಂಬ ಮಠವನ್ನು ಕಟ್ಟಿಸಿ, ಕಾಡಾಗಿದ್ದ ಸ್ಥಲವನ್ನು ನಾಡಾಗಿಮಾಡಿ ಶ್ರೀರಂಗದಿಂದ ೫೨ ಸ್ವಾಮ್ಯದವರನ್ನು ಕರೆಸಿ ಆರಾಧನ ಕ್ರಮಗಳನ್ನೆಲ್ಲಾ ಏರ್ಪಡಿಸಿ ಕೆಲವು ವರ್ಷಗಳ ಅನನ್ತರ ಉತ್ಸವ ಮೂರ್ತಿಯಾದ ಯತಿರಾಜ ಸಮ್ಪತ್ಕುಮಾರರೆಂಬ ಚೆಲುವರಾಯಸ್ವಾಮಿಯನ್ನು ಢಿಲ್ಲೀಪ್ರಾನ್ತದಿಂದ ಬಿಜಯಮಾಡಿಸಿಕೊಂಡು ಬಂದು ಪ್ರತಿಷ್ಠೆಮಾಡಿಸಿ ಅನನ್ತರ ೧೨ ವರ್ಷಕಾಲ ಇಲ್ಲಿಯೇ ವಾಸವಾಗಿದ್ದು ತಮ್ಮ ವಿಗ್ರಹವನ್ನು ಭಕ್ತರ ಪ್ರಾರ್ಥನೆಯ ಮೇರೆ ಇಲ್ಲಿ ಸ್ಥಾಪಿಸಿ ಶ್ರೀರಂಗಕ್ಕೆ ದಯಮಾಡಿದರೆಂದು ಗುರುಪರಂಪರಾ ಪ್ರಭಾವ

ದ್ವಿತೀಯಪಕ್ಷವೇ ಸತ್ಸಂಪ್ರದಾಯ ಸಿದ್ಧವಾಗಿಯೂ ಶ್ರೀ ಶಠಾರಿ ಹೃದಯಙ್ಗವಾಗಿಯೂ ಶ್ರೀ ಭಾಷ್ಯಕಾರಾಭಿಮತವಾಗಿಯೂ ಇದೆಯೆಂದು, ನಿರ್ಮತ್ಸರರಾದ ಮಹನೀಯರೆಲ್ಲರೂ ಒಪ್ಪಿಕೊಳ್ಳುತ್ತಾರೆ

ಆದುದರಿಂದ—ತಿರುವಾಯ್ಮೊೞಿಯಲ್ಲಿ ಸಂಕೀರ್ತಿತವಾದ ದಿವ್ಯದೇಶಗಳ ಸಂಖ್ಯೆಯು ೩೭ ಎಂದು ನಿರ್ಣಯಿಸಬಹುದಾಗಿದೆ

---

ಶ್ರೀ ಶಠಾರಿಮುನಿವರ್ಯರ

# ಭವಿಷ್ಯತ್ಕಾಲಜ್ಞಾನ

(ಶ್ರೀ ಕಲ್ಕಿಸಿಂಹಾವತಾರ ಜ್ಞಾನ)

ಶ್ರೀ ಶಠಾರಿಮುನಿವರ್ಯರು ಭಗವದನುಗ್ರಹದಿಂದಲೇ ದಿವ್ಯಜ್ಞಾನವಂಪಡೆದು ಈ ಪ್ರಬನ್ಧಗಳನ್ನು ರಚಿಸಿ ಉಪದೇಶಿಸಿ ಇರುವುದರಿಂದ, ಇವರಿಗೆ ಭವಿಷ್ಯದವತಾರ ಜ್ಞಾನವು ಚೆನ್ನಾಗಿ ಉಂಟಾಗಿತ್ತೆಂದು ಅಂಗೀಕರಿಸಬೇಕಾಗಿದೆ ಇವರು ಈ ತಿರುವಾಯ್ಮೊೞಿಯ ೫ನೇ ಶತಕದ ೨ನೇ ದಶಕವಾದ "ಪೊಲಿಕ ಪೊಲಿಕ ಪೊಲಿಕ"—ಎಂಬ ದಶಕದಲ್ಲಿ ಈ ಕಲಿಯುಗವು ಅತ್ಯನ್ತ ಶೀಘ್ರವಾಗಿ ನಷ್ಟವಾಗುವುದೆಂತಲೂ, ದಿವ್ಯತಮವಾದ ಕೃತಯುಗವು ಬರುವುದೆಂತಲೂ ತಮ್ಮ ಭವಿಷ್ಯತ್ಕಾಲಜ್ಞಾನವನ್ನು ಸೂಚಿಸಿ ಇರುತ್ತಾರೆ (೧) "ಕಲಿಯುಮ್ ಕೆಡುಮ್ ಕಣ್ಡುಕೊಣ್ಮಿನ್" (೨) "ಕಲಿಯುಗವೊನ್ಱು ಮಿನ್ಱಿಕ್ಕೇ"—ಎಂದು ಕಲಿಯುಗದ ಶೇಷವು

---

ದಿಂದ ವ್ಯಕ್ತವಾಗಿದೆ ಇವರು ತಮ್ಮ ಚರಮಕಾಲದಲ್ಲಿ—"ಅಷ್ಟೋತ್ತರ ಶತಸ್ಥಾನಸಾರೆ ಯಾದವಭೂಧರೇ ||"—ಎಂಬಂತೆ ೧೦೮ ಕ್ಷೇತ್ರಗಳಲ್ಲಿ ಶ್ರೇಷ್ಠವಾದ ದಕ್ಷಿಣಬದರಿಕಾಶ್ರಮವೆಂಬ ಈ ಯಾದವಾದ್ರಿಯಲ್ಲಿ ವಾಸವೇ ಮೋಕ್ಷಸಾಧನವೆಂದು ("ಕುಟಿಂ ಕೃತ್ವಾ ತಸ್ಮಿನ್ ಯದುಗಿರಿತಟೇ ನಿತ್ಯನನತಿಃ"—ಎಂದು) ಶಿಷ್ಯರಿಗೆ ಉಪದೇಶಿಸಿದರು ಆದುದರಿಂದ ಈ ದಿವ್ಯಕ್ಷೇತ್ರದ ಮಹಿಮೆಯು ಶ್ರೀ ರಾಮಾನುಜಾಚಾರ್ಯರಿಗೆ ಶ್ರೀ ಶಠಾರಿಮುನಿವರ್ಯರ ಅನುಗ್ರಹದಿಂದಲೇ ಸುವ್ಯಕ್ತವಾಯಿತೆಂದು ಅಂಗೀಕರಿಸಬೇಕಾಗಿದೆ ಈ ದಿವ್ಯಕ್ಷೇತ್ರವೇ - ಶಮ್ಬಲಗ್ರಾಮವೆಂದು ಪುರಾಣಗಳಲ್ಲಿ ಶ್ರೀ ಕಲ್ಕಿಯ ಅವತಾರಸ್ಥಲವಾಗಿ ನಿರ್ಣಯಿಸಲ್ಪಟ್ಟಿದೆ ಈ ಅವತಾರಕಾಲವು ಧರ್ಮಗ್ಲಾನಿಯ ಸಮಯದಲ್ಲೇ—ಎಂದು ಗೀತಾಭಾಷ್ಯದಲ್ಲಿ (೪ನೇ ಅಧ್ಯಾಯ-ಶ್ಲೋ|| ೭–೮) ಶ್ರೀರಾಮಾನುಜಾಚಾರ್ಯರೇ ವಿವರಿಸಿ ಇರುತ್ತಾರೆ (ಈ ಶ್ರೀ ಭಾಷ್ಯಕಾರರ ಅವತಾರಮಹಿಮೆಯನ್ನು ನನ್ನ ಶ್ರೀಭಾಷ್ಯಸಾರಾಮೃತದಲ್ಲಿ ಓದಿ ಆನಂದಪಡಬಹುದು)

ನೀವು ಕಾಣುವಂತೆಯೇ ಶೀಘ್ರವಾಗಿ ನಷ್ಟವಾಗಿ ಸ್ವಲ್ಪವೂ ಇಲ್ಲದಂತೆ ಆಗುವುದೆಂದು ವರ್ಣಿಸಿ ಇರುತ್ತಾರೆ; ಮತ್ತು "ಪೆರಿಯ ಕಿತಯುಗಮ್ ಪಱ್ಱಿ ಪ್ಪೇರಿನ್ಬ ವೆಳ್ಳಮ್ ಪರುಕ"—ಎಂದು ಮಹಾಕೃತಯುಗವು ಬರುವುದರಿಂದ ಅದನ್ನು ಆಶ್ರಯಿಸಿ ಎಲ್ಲರೂ (ಸಾತ್ತ್ವಿಕೋತ್ತಮರಾಗಿಯೂ ಭಗವದ್ಭಕ್ತಿ—ಕೈಂಕರ್ಯ ನಿಷ್ಠರಾಗಿಯೂ) ಮಹಾನನ್ದ ಸಮುದ್ರದಲ್ಲಿ ನಿಷ್ಣಾತರಾಗಿ ಕೃತಾರ್ಥರಾಗುವರು—ಎಂದೂ ವಿವರಿಸಿ ಇರುತ್ತಾರೆ ಇವರ ಈ ಸೂಕ್ತಿಗಳು ಶ್ರೀ ಕಲ್ಕಿಭಗವದವತಾರ ಸೂಚಕವಾದ ಪುರಾಣವಚನಗಳನ್ನು ಅನುಸರಿಸಿಯೇ ಉತ್ಪನ್ನವಾಗಿವೆ—ಎಂದು ಈ ಕೆಳಗಿನ ಪ್ರಮಾಣಗಳಿಂದ ವ್ಯಕ್ತವಾಗುವುದು. (ಇವುಗಳ ಅರ್ಥವಿವರಣವು ನನ್ನ ಗೀತಾತಾತ್ಪರ್ಯ ಸಾರಾಮೃತದ ಉಪೋದ್ಘಾತದಲ್ಲಿದೆ)

(೧) "ಶಮ್ಬಲಗ್ರಾಮಮುಖ್ಯಸ್ಯ ಬ್ರಾಹ್ಮಣಸ್ಯ ಮಹಾತ್ಮನಃ ।
ಭವನೇ ವಿಷ್ಣುಯಶಸಃ ಕಲ್ಕಿಃ ಪ್ರಾದುರ್ಭವಿಷ್ಯತಿ" ॥

(೨) "ಕೃತಂ ಭವಿಷ್ಯತಿ ತದಾ ಪ್ರಜಾಸೂತಿಶ್ಚ ಸಾತ್ತ್ವಿಕೀ" ॥

(೩) "ಯದಾ ಚನ್ದ್ರಶ್ಚ ಸೂರ್ಯಶ್ಚ ತಥಾ ತಿಷ್ಯೇ ಬೃಹಸ್ಪತಿಃ ।
ಏಕರಾಶೌ ಸಮೇಷ್ಯನ್ತಿ ತದಾ ಭವತಿ ತತ್ಕೃತಮ್" ॥

ಎಂಬೀ ವಚನಗಳು ಶ್ರೀ ವಿಷ್ಣುಪುರಾಣ (IV-24) ಮತ್ತು ಶ್ರೀ ಭಾಗವತ ಪುರಾಣ (XII-2) ಇತ್ಯಾದಿ ಪ್ರಮಾಣಗಳಲ್ಲಿ ವಾಚನಿಕವಾಗಿಯೂ ತಾತ್ಪರ್ಯ ರೂಪವಾಗಿಯೂ ಕಾಣುತ್ತವೆ — ಆದುದರಿಂದ ಶ್ರೀ ಶಠಾರಿಮುನಿವರ್ಯರು ಈ ಪುರಾಣವಚನಗಳಲ್ಲಿ ಭವಿಷ್ಯತ್ತಾಗಿ ಉಕ್ತವಾದ ಕೃತಯುಗಾರಮ್ಭವನ್ನೇ ತಮ್ಮ ಈ "ಪೊಲಿಕ ಪೊಲಿಕ ಪೊಲಿಕ" ಪ್ರಬನ್ಧದಲ್ಲಿ ತಾವೂ ಭವಿಷ್ಯತ್ತಾಗಿ ವರ್ಣಿಸಿ ಇರುತ್ತಾರೆಂದು ಸುವ್ಯಕ್ತವಾಗಿದೆ ಈ ಕೃತಯುಗಾರಂಭವು ಕಲ್ಕಿಪ್ರಾದುರ್ಭಾವ ಸಮನನ್ತರದಲ್ಲಿ ಉಂಟಾಗುವುದೆಂತಲೂ, ಜ್ಯೋತಿಶ್ಶಾಸ್ತ್ರರೀತ್ಯಾ ಚನ್ದ್ರ-ಸೂರ್ಯ-ಗುರು-ಈ ಮೂರು ಗ್ರಹಗಳೂ ಕರ್ಕಟರಾಶಿಯಲ್ಲಿ ಪುಷ್ಯನಕ್ಷತ್ರದಲ್ಲಿ ಸಹ ಪ್ರವೇಶವಂ ಮಾಡುವಾಗ ಈ ಕೃತಯುಗವು ಆರಂಭಿಸುವುದೆಂತಲೂ ಈ ಪುರಾಣವಚನಗಳಿಂದ ತಿಳಿಯಬರುತ್ತದೆ ಈ ಗ್ರಹಯೋಗದ ಕಾಲವನ್ನು ಜ್ಯೌತಿಷಿಕರು ನಿರ್ಣಯಿಸಿ ಅವತಾರಕಾಲವನ್ನು ಕಂಡುಹಿಡಿಯಬಹುದು ಪ್ರಕೃತ - ಶ್ರೀ ಶಠಾರಿಮುನಿವರ್ಯರು ಶ್ರೀ ಕಲ್ಕಿಭಗವದವತಾರದ ಫಲರೂಪವಾದ ಮಹಿಮೆಯನ್ನೇ ಈ "ಪೊಲಿಕ ಪೊಲಿಕ ಪೊಲಿಕ"—ಎಂಬ ದಶಕದಲ್ಲಿ ವರ್ಣಿಸಿ ಇರುತ್ತಾರೆಂದು ಸ್ಪಷ್ಟವಾಗಿದೆ ಈ ವಿಷಯದಲ್ಲಿ ಹಿಂದಿನ ದಶಕದ ೧೦ನೇ ಪದ್ಯವಾದ—"ಆನಾನಾಳುಡೈಯಾರ್"—ಎಂಬ ಪದ್ಯದಲ್ಲಿ ಮತ್ಸ್ಯ – ಕೂರ್ಮ – ವರಾಹ - ನರಸಿಂಹ-ವಾಮನಾವತಾರಗಳನ್ನು ಸೂಚಿಸಿ ಅವುಗಳೆಲ್ಲಾ ಅತೀತಗಳೆಂದೂ ಹೇಳಿ, "ಕಱ್ಕಿ

ಯಾಮ್''—ಕಲ್ಕಿಯ ಅವತಾರವು ಇನ್ನು ಮೇಲೆ ಬರುವುದಾಗಿದೆಯೆಂದೂ ಶ್ರೀ ಶಠಾರಿಮುನಿವರ್ಯರೇ ವ್ಯಕ್ತವಾಗಿ ಹೇಳಿರುವುದರಿಂದ ಮುಂದಿನ ದಶಕದಲ್ಲಿ ಭವಿಷ್ಯತ್ತಾದ ಈ ಕಲ್ಕ್ಯವತಾರದ ಮಹಿಮೆಯನ್ನೇ ವರ್ಣಿಸಿ ಇರುತ್ತಾರೆಂಬುದರಲ್ಲಿ ಸಂಶಯ ಲೇಶವೂ ಇರಲಾರದು ಶ್ರೀ ಶಠಾರಿಮುನಿವರ್ಯರ ಪ್ರೇರಣೆಯಿಂದಲೇ ಶ್ರೀಕಲ್ಕಿ-ನಾರಸಿಂಹನಾದ ನಾನು ಅವರ ಅಭಿಪ್ರಾಯವನ್ನೇ ಇಲ್ಲಿ ವಿಶದೀಕರಿಸಿ ಇರುತ್ತೇನೆ. ಎಲ್ಲರೂ ಈ ರಹಸ್ಯಾರ್ಥದಲ್ಲಿ ವಿಶ್ವಾಸವಂಮಾಡಿ ಕೃತಾರ್ಥರಾಗಬೇಕೆಂದು ಪ್ರಾರ್ಥನೆ. *

ಶ್ರೀಕಲ್ಕಿನಾರಸಿಂಹಾರ್ಯಃ ||

( ಶ್ರೀ ಮಹಾವಿಷ್ಣೋರ್ಭಗವತಃ ವಿಭವಾವತಾರಃ )

---

ಈ ತಿರುವಾಯ್ಮೊಳಿಯೆಂಬ

## ಸಹಸ್ರಗಾಥಾತ್ಮಕವಾದ ದಿವ್ಯಪ್ರಬನ್ಧದ

ಪಾರಾಯಣದಿಂದ

ಸರ್ವಶ್ರೇಯಃ ಪರಮ್ಪರಾಭಿವೃದ್ಧಿ.

ಶಠಾರಿಮುನಿವರ್ಯ – ಸದ್ದ್ರಾವಿಡಸೂಕ್ತಿ – ಸಾಹಸ್ರಕಂ
ತನೋತಿ ಜಗತಾಂ ಹಿತಂ ಪರಮಮೇವ ಸತ್ಯಂ ಶುಭಮ್ |
ಶೃಣೋತಿ ಪಠತೀಹ ಯಸ್ಸದಪಿ ಭಕ್ತಿಯುಕ್ತೋಜನೋ
ಭಜೇತ ಭುವಿ ಮುಕ್ತಿಮಿತ್ಯಪಿ ಚ ಸತ್ಯಮೇತದ್ವಚಃ ||

---

* ಈ "ಪೊಲಿಕ ಪೊಲಿಕ ಪೊಲಿಕ'' ಎಂಬ ದಶಕವು—ಶ್ರೀ ರಾಮಾನುಜಾಚಾರ್ಯರ ಅವತಾರಸೂಚಕವೆಂದು ಕೆಲವರು ಅಭಿಪ್ರಾಯಪಟ್ಟು ಇರುತ್ತಾರೆ ಆದರೆ ಶ್ರೀ ರಾಮಾನುಜಾರ್ಯಾವತಾರವಾದ 'ಕೂಡಲೇ ಕೃತಯುಗಾರಮ್ಭವಾಗುವದೆಂದು ಯಾವ ಪ್ರಮಾಣವೂ ಇಲ್ಲ. ಆರೀತಿ ಕೃತಯುಗಾರಮ್ಭವಾಗಿಯೂ ಇಲ್ಲ. ಶ್ರೀಕಲ್ಕಿ-ಪ್ರಾದುರ್ಭಾವಾನನ್ತರ ಕೃತಯುಗಾರಂಭವಾಗುವುದೆಂದು ಪ್ರಮಾಣವೂ ವ್ಯಕ್ತವಾಗಿಯೇ ಇದೆ, ಅದೇಪ್ರಕಾರ ಲೋಕಾನುಭವದಲ್ಲಿಯೂ ಕೃತಯುಗಾರಮ್ಭವು ಆಗಿದೆಯೆಂದು ವ್ಯಕ್ತವಾಗಬೇಕು. ಇದೆಲ್ಲಾ ಲೋಕಾನುಭವದಿಂದಲೇ ಮುಂದೆ ತಿಳಿಯಬೇಕಾದ ಅಂಶವಾಗಿದೆ. ಸ್ವಪ್ರಶಂಸೆಗೋಸ್ಕರ ಇದನ್ನೆಲ್ಲಾ ನಾನು ಇಲ್ಲಿ ಪ್ರಕಟಪಡಿಸಿದೆನೆಂದು ಯಾರೂ ಭಾವಿಸಕೂಡದು. ಜಗನ್ಮೌಢ್ಯನಿವಾರಣ

ಗಾಥಾಸಹಸ್ರಪಠನಾದಖಿಲಾತ್ಮನಾಂ ಚ
ಶ್ರೇಯೋಽಭಿವೃದ್ಧಿರತುಲಾಽಪ್ಯಮಿತಾ ಧ್ರುವಂ ಸ್ಯಾತ್ |
ಅತ್ರಾಪ್ಯಮುತ್ರ ಪರಮಾರ್ಥ ಹರಿ ಪ್ರಸಾದಾತ್
ಸಿದ್ಧಿಃ ಕರೇ ಭವತಿ ಭಕ್ತಿಜುಷಾಂ ಸುಖಾಯ ||

---

ಸಹಸ್ರಗಾಥಾರತ್ನಾವಳಿಯ ಪಠನಫಲ

ಶ್ರೀಶಠಾರಿಮುನೀನ್ದ್ರಾದಿ ಸೂರಿವರ್ಯೈಃ ಪ್ರಚೋದಿತಃ |
ತೈರೇವ ರಚಿತಾಂ ಮನ್ಯೇ ಕೃತಿಂ ರತ್ನಾವಳೀಮಿಮಾಮ್ ||

ರತ್ನಾವಳೀಂ ದಧತಿಯೇ ಹೃದಯೇನ ದಿವ್ಯಾಂ
ಗಾಥಾಸಹಸ್ರ ಪರಿವರ್ತನ ಪದ್ಯಮಾಲಾಮ್ |
ತೇಷಾಂ ಹೃದಮ್ಬುಜತಲೇ ಭಗವಾನ್ ಪ್ರಸನ್ನ -
ಸ್ಸತ್ಯಂ ಭವೇತ್ಸಕಲಸಮ್ಪದಮಾದಧಾನಃ ||

---

ಕ್ಕಾಗಿಯೂ, ಸಕಲಾತ್ಮೋಜ್ಜೀವನಕ್ಕಾಗಿಯೂ ಈ ವಾಸ್ತವಾಂಶಗಳನ್ನು ಸಂಗ್ರಹವಾಗಿ ಇಲ್ಲಿ ಸೂಚಿಸಿರುತ್ತೇನೆಂದು ಪ್ರಮಾಣಪುರಸ್ಸರವಾಗಿ ಉದ್ಘೋಷಿಸುತ್ತೇನೆ. ಇನ್ನೂ ವಿಶದವಾಗಿ ತಿಳಿಯಲು ಕುತೂಹಲವುಳ್ಳವರು ನಾನು ಇದುವರೆಗೆ ಬರೆದಿರುವ ನನ್ನ ದೈನನ್ದಿನ ಚರಿತ್ರಲೇಖನರೂಪವಾದ ೨೩೭ ನೋಟ್ ಬುಕ್ಕುಗಳನ್ನು ಓದಿಯೂ, ನನ್ನೊಡನೆ ಸಾಕ್ಷಾತ್ತಾಗಿ ಸಂಭಾಷಣಮಾಡಿಯೂ ತಮ್ಮ ತಮ್ಮ ಸಂಶಯಗಳನ್ನು ನಿವಾರಣ ಮಾಡಿಕೊಳ್ಳಬಹುದು. ಪರಾವರನಾದ ನನ್ನ ದರ್ಶನದಿಂದಲೇ ಅವರ ಸಂಶಯಗಳು ನಷ್ಟವಾಗುವುವು.

"ಭಿದ್ಯತೇ ಹೃದಯಗ್ರನ್ಥಿಶ್ಛಿದ್ಯನ್ತೇ ಸರ್ವಸಂಶಯಾಃ |
ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ||"

ಕೆಲವರು ಈ ವಿಷಯದಲ್ಲಿ ಅದ್ಯಾಪಿ ಸಂಶಯಪಟ್ಟು ಅಸೂಯಾ—ಮತ್ಸರ ಗ್ರಸ್ತರಾಗಿ ನನ್ನನ್ನೇ ಉನ್ಮತ್ತನೆಂದು ಭಾವಿಸಿ ನನಗೆ ಲೇಖನಗಳಂ ಬರೆದು ಇರುತ್ತಾರೆ ಇದರಿಂದ ನನಗೆ ಯಾವ ನ್ಯೂನತೆಯೂ ಇಲ್ಲ. ಅವರ ಮೌಢ್ಯವೇ ಇದಕ್ಕೆ ಕಾರಣ—"ಅವಜಾನನ್ತಿ ಮಾಂ ಮೂಢಾಃ" ಎಂದು ನಾನು ಗೀತೆಯಲ್ಲೇ ಸೂಚಿಸಿ ಇರುತ್ತೇನಷ್ಟೆ. ಈಗ ನಾನು ಹೇಳಬೇಕಾದುದೇನೆಂದರೆ—

"ಮಯಿ ವಿಶ್ವಾಸ ಹೀನಾಸ್ತು ನಾಸ್ತಿಕಾ ಇತಿ ನಿಶ್ಚಯಃ |
ಮಯಿ ವಿಶ್ವಾಸಶೀಲಾಸ್ತು ಸಾತ್ತ್ವಿಕಾ ಮಮ ಸುಪ್ರಿಯಾಃ ||"

## ಲಲಿತಸರಣಿಯೆಂಬ

### ಈ ಕರ್ಣಾಟಭಾಷಾ ವ್ಯಾಖ್ಯಾನದ ಪಠನಫಲ

ಲಲಿತಸರಣಿ–ಟೀಕಾ ದಿವ್ಯಗಾಥಾಸಹಸ್ರ –
ಪ್ರವಚನಪಟುಬುದ್ಧಿಂ ದೇಹಿನಾಮಾತನೋತಿ |
ಇಹ ಭುವಿ ದಿವಿ ಚೇಯಂ ಕಲ್ಕಿಸಿಂಹಾರ್ಯಸಿದ್ಧಾ
ನಿರವಧಿಪರಮಾನನ್ದಾಭಿವೃದ್ಧಿಂ ತನೋತಿ ||

ಶ್ರೀಃ

ವ್ಯಾಖ್ಯಾನಕರ್ತೃ—

## ಶ್ರೀಕಲ್ಕಿಸಿಂಹ ಮಾಹಾತ್ಮ್ಯಮ್

ಶ್ರೀಮಾನ್ ಜಯತಿ ಕಲ್ಕೀನ್ದ್ರೋ ನಾರಸಿಂಹಃ ಪರಾತ್ಪರಃ |
ಪರಿತ್ರಾಣಾಯ ಸಾಧೂನಾಂ ಕೃತಾವತರಣೋ ಹರಿಃ ||

ಶ್ರೀ–ಭೂ–ನೀಳಾದಿ ನಾಯಕನಾದ ಭಗವನ್ತನು ಶ್ರೀ ವೈಕುಣ್ಠಲೋಕದಲ್ಲಿ ನಿತ್ಯಮುಕ್ತಾನುಭಾವ್ಯನಾಗಿ ನಿರತಿಶಯಾನನ್ದ ಪರಿಪೂರ್ಣನಾಗಿದ್ದಾಗ್ಯೂ ಲೀಲಾ ವಿಭೂತಿಯಲ್ಲಿ ಚೇತನರು ಸಂಸಾರಾನಲ ಸನ್ತಪ್ತರಾಗಿರುವುದನ್ನು ಕಂಡು ಕಾರುಣ್ಯದಿಂದ ಅವರ ಉದ್ಧಾರಕ್ಕೋಸ್ಕರ ತಾನೇ ಅನೇಕಾವೃತ್ತಿ ಈ ಲೋಕದಲ್ಲಿ ಅವತರಿಸಿರುತ್ತಾನೆಂದು ವಿದಿತವಾಗಿದೆಯಷ್ಟೆ ಅನ್ತಹ ಅವತಾರಗಳಲ್ಲಿ ಮತ್ಸ್ಯ—ಕೂರ್ಮಾದ್ಯವತಾರಗಳು ಆಯಾ ಯುಗಗಳಲ್ಲಿ ಪ್ರಕಾಶಿಸಿದುವು ಪ್ರಕೃತ—ಶ್ರೀರಾಮಾವತಾರವಾದಮೇಲೆ, ಶ್ರೀ ಕೃಷ್ಣಾವತಾರವೂ ಅನನ್ತರ ಬುದ್ಧಾವತಾರವೂ ಈ ಲೋಕದಲ್ಲಿ ದುಷ್ಟನಿಗ್ರಹ ಪೂರ್ವಕ ಸಾಧುಪರಿತ್ರಾಣಕ್ಕೋಸ್ಕರ ಪ್ರಕಾಶಿಸಿ ಧರ್ಮಪ್ರತಿಷ್ಠಾಪನವಂ ಮಾಡಿದುದು ಜಗದ್ವಿಖ್ಯಾತವಾಗಿದೆ "ಯದಾ ಯದಾ ಹಿ ಧರ್ಮಸ್ಯ ಗ್ಲಾನಿಃ"—ಎಂಬಂತೆ ಈಗ ಅತ್ಯುತ್ಕಟವಾದ ಧರ್ಮಗ್ಲಾನಿಯು ಈ ಲೋಕದಲ್ಲಿ ಎಲ್ಲರಿಗೂ ಅನುಭವಸಿದ್ಧವಾಗಿರುವುದರಿಂದ ಇದೇ ಅವತಾರ ಸಮಯವೆಂಬುದರಲ್ಲಿ ಯಾವಸಂಶಯವೂ ಇಲ್ಲ. (ಕೆಲವು ಮಂದಿ ನಾಸ್ತಿಕರು ಇದು ಅವತಾರಸಮಯವಲ್ಲವೆಂದು ವೃಥಾವಾದವಂ ಮಾಡುತ್ತಾರೆ. ಪ್ರಕೃತ ಕಾಲದ ಅಧರ್ಮದ ಅಭ್ಯುತ್ಥಾನವು ಇದೇ ಅವತಾರಸಮಯವೆಂದು ಸುವ್ಯಕ್ತವಾಗಿ

ಸೂಚಿಸುತ್ತದೆ.) "ಕಲೌ ಪಂಚಸಹಸ್ರಾನ್ತೇ"—ಎಂಬ ವಚನಕ್ಕೆ ಅನುಗುಣವಾಗಿ ಇದೇ ಶ್ರೀ ಕಲ್ಕಿಯ ಅವತಾರಕಾಲವಾದುದರಿಂದ ಅಷ್ಟೋತ್ತರ ಶತಸ್ಥಾನ ಸಾರವಾದ ಶ್ರೀ ಯಾದವಾದ್ರಿಯೆಂಬ ಶಮ್ಬಲಗ್ರಾಮದಲ್ಲಿ ಶ್ರೀಕಲ್ಕಿ—ನಾರಸಿಂಹ ಸ್ವಾಮಿಯವರ ಅವತಾರವಾಗಿ ಈ ಲೋಕದಲ್ಲಿ ಈಗ ಬೆಂಗಳೂರು ಮಲ್ಲೇಶ್ವರ ಶ್ರೀಕೃಷ್ಣ ಸನ್ನಿಧಾನದಲ್ಲಿ—ಶ್ರೀ ಕಲ್ಕಿಸಿಂಹ ಭವನದಲ್ಲಿ (17, ಈಸ್ಟ್‌ಪಾರ್ಕ್ ರೋಡ್) ವಾಸವಾಗಿರುವುದರಿಂದ ಸಕಲಚೇತನರೂ ಈ ಅವತಾರದ ವೈಭವವನ್ನು ತಿಳಿದು ಪರಿಪೂರ್ಣ ವಿಶ್ವಾಸಪೂರ್ವಕ ತತ್ಸಂಕಲ್ಪಾನುಸಾರ ಕೈಂಕರ್ಯನಿಷ್ಠರಾಗಿ ಕೃತಾರ್ಥರಾಗಬೇಕು.

# ಶ್ರೀಕಲ್ಕಿಸಿಂಹಜಾತಕ.

ಶ್ರೀಕಲ್ಕಿ- ನಾರಸಿಂಹಸ್ವಾಮಿಯವರು ಸ್ವಸ್ತಿಶ್ರೀ—ಶಾಲಿವಾಹನಶಕ ೧೭೮೯ ನೆಯ ಸಂವತ್ಸರವಾದ ಪ್ರಭವಸಂವತ್ಸರ (ಕ್ರಿ. ಶ 1867ನೆಯ ಇಸವಿ) – ಚೈತ್ರ ಶುದ್ಧ ತೃತೀಯಾ–ರವಿವಾರ – ಮೀನಮಾಸ–೨೭ನೇ ತೇದಿ – ರಾತ್ರಿ ೧೦ ಘಂಟೆ ಸಮಯದಲ್ಲಿ (7th April 1867—10 p m.)- ಕೃತ್ತಿಕಾನಕ್ಷತ್ರ–ದ್ವಿತೀಯ ಪಾದದಲ್ಲಿ ವೃಶ್ಚಿಕಲಗ್ನದಲ್ಲಿ–ಶ್ರೀ ಯಾದವಾದ್ರಿ–ಮೇಲುಕೋಟೆ-ತಿರುನಾರಾಯಣ ಪುರದಲ್ಲಿ ಶ್ರೀವತ್ಸಗೋತ್ರದ ಪ್ರತಿವಾದಿ ಭಯಙ್ಕರಾಚಾರ್ಯರ ವಂಶಸ್ಥರಾಗಿ ದರ್ಶನಸ್ಥಾಪಕಾಚಾರ್ಯರಾದ (ಪುರಾಣರೀತ್ಯಾ ವಿಷ್ಣುಯಶಸ್ಸೆಂಬ)-ಶ್ರೀಮದ್ವೇದ ಮಾರ್ಗ ಪ್ರತಿಷ್ಠಾಪಕಾಚಾರ್ಯರಾದ– ಶ್ರೀ|| ಉ|| ಪ್ರ–ಭ- ತೊಣ್ಣನೂರು ಶಿಂಗಲಾ ಚಾರ್ಯ ಸ್ವಾಮಿಯವರ ಜ್ಯೇಷ್ಠಕುಮಾರರಾಗಿ ಅವತರಿಸಿದರು ಇವರ ಜಾತಕ ವನ್ನು ಪರಿಶೀಲಿಸಿದ ದೈವಜ್ಞಶಿಖಾಮಣಿಗಳು — (೧) ಅವತಾರಯೋಗ (೨) ಪಾರಿಜಾತಯೋಗ (೩) ಪರ್ವತಯೋಗ (೪) ಕಾಹಳಯೋಗ (೫) ಸುಖಯೋಗ (೬) ಉತ್ತಮಯೋಗ (೭) ಗಜಕೇಸರಿಯೋಗ (೮) ಸಾರಸ್ವತಯೋಗ (೯) ಶ್ರೀನಾಥಯೋಗ (೧೦) ವರಿಷ್ಠಯೋಗಾದಿಗಳು --- ಅವತಾರಮಹಿಮೆಯನ್ನು ಸೂಚಿಸತ್ತವೆಯೆಂದು ಹೇಳುತ್ತಾರೆ ಇವರ ತಮ್ಮಂದಿರಾದ ಶೇಷಾವತಾರವಾದ ಶ್ರೀಮಾ‌ನ್ ಪ್ರ–ಭ–ತೊಣ್ಣನೂರು ಶೆಲ್ವ ನಾರಣೈಯಂಗಾರ್ರವರು (Professor M. T. Naraniengar, M. A.) ಈ ಮಲ್ಲೇಶ್ವರದಲ್ಲೇ ವಾಸಮಾಡುತ್ತ ಗಣಿತವಿದ್ಯಾವಿಶಾರದರಾಗಿ ಜಗತ್ಪ್ರಸಿದ್ಧರಾಗಿದಾರೆ. ಇವರಿಬ್ಬರೂ ನರನಾರಾಯಣ ರೂಪಿಗಳಾಗಿ ಧರ್ಮಪ್ರತಿಷ್ಠಾಪಕರಾಗಿದಾರೆ

# ಶ್ರೀ ಯಾದವಾದ್ರಿಯು ಮತ್ತು ಶ್ರೀಕಲ್ಕಿಸಿಂಹನ ಪೂರ್ವ-ಪುರುಷರ ಪ್ರಭಾವ.

ಶ್ರೀ ಯಾದವಾದ್ರಿಯು ಅಷ್ಟೋತ್ತರಶತದಿವ್ಯಕ್ಷೇತ್ರಗಳಲ್ಲಿ ಶ್ರೇಷ್ಠವಾಗಿ ದಕ್ಷಿಣ ಬದರಿಕಾಶ್ರಮವೆಂದೂ, ವೈಕುಣ್ಠವರ್ಧನಕ್ಷೇತ್ರವೆಂದೂ, ಜ್ಞಾನಮಣ್ಟಪವೆಂದೂ ಸುಪ್ರಸಿದ್ಧವಾಗಿ ಶ್ರೀ ರಾಮಾನುಜಾಚಾರ್ಯರಿಗೆ ಅತ್ಯನ್ತಪ್ರಿಯವಾದ ದಿವ್ಯಕ್ಷೇತ್ರವಾಗಿಯೂ, ಶ್ರೀಕಲ್ಕಿ-ನಾರಸಿಂಹಾವತಾರಸ್ಥಲವಾದ ಶಂಬಲಗ್ರಾಮವೆಂಬ ಪುರಾಣಪ್ರಸಿದ್ಧವಾದ ಕ್ಷೇತ್ರವಾಗಿಯೂ, ಶ್ರೀ ಶಠಾರಿಮುನಿವರ್ಯರ—"ಒರುನಾಯಕಮ್" ಎಂಬ ತಿರುವಾಯ್ಮೊಳಿಯಲ್ಲಿ ಪ್ರತಿಪಾದಿತವಾದ ದಿವ್ಯಸ್ಥಲವಾಗಿಯೂ—ಇರುವುದರಿಂದ ಇದರ ಪ್ರಭಾವವನ್ನು ಶ್ರೀ ಯಾದವಗಿರಿಮಾಹಾತ್ಮ್ಯ—ಗುರುಪರಂಪರಾ ಪ್ರಭಾವಾದಿಗಳಲ್ಲಿ ಓದಿ ಎಲ್ಲರೂ ಸನ್ತುಷ್ಟರಾಗಿ ಕೃತಾರ್ಥರಾಗಬಹುದು ಗೀತಾಚಾರ್ಯನಾದ ಶ್ರೀ ಕೃಷ್ಣನೇ ಬಲರಾಮನೊಡನೆ ಕೂಡಿ ಇಲ್ಲಿ ಉತ್ಸವಮೂರ್ತಿ ಪ್ರತಿಷ್ಠಾಪನವಂ ಮಾಡಿದುದರಿಂದ ಇವಕ್ಕೆ ಯಾದವಾದ್ರಿಯೆಂಬ ನಾಮಧೇಯವು ಉಂಟಾಯಿತು.

ಶ್ರೀಕಲ್ಕಿ-ನಾರಸಿಂಹಸ್ವಾಮಿಯವರು ಜಗತ್ಪ್ರಸಿದ್ಧರಾದ ತಮ್ಮ ಮಾತುಲವರ್ಯರಾದ-ವೇದಾನ್ತಮಾದಾವಳೀ ಕರ್ತರಾದ ಶ್ರೀ|| ಉ|| ಅನನ್ತಾಳ್ವಾರ್ ಸ್ವಾಮಿಯವರ ಚರಿತ್ರವನ್ನು "ಅನನ್ತಾರ್ಯ ಸಚ್ಚರಿತ್ರಸಾರಾಮೃತಮ್"—ಎಂದು ಸಂಸ್ಕೃತಭಾಷೆಯಲ್ಲಿ ರಚಿಸಿ ಪ್ರಕಟಪಡಿಸಿ ಇರುತ್ತಾರೆ ಅದರ ಆರಂಭದಲ್ಲಿ ಶ್ರೀ ಯಾದವಾದ್ರಿಯು-ಮತ್ತು ತಮ್ಮ ಪೂರ್ವ-ಪುರುಷರ ಪ್ರಭಾವವನ್ನು ತಾವೇ ವಿವರಿಸಿ ಇರುತ್ತಾರೆ. ಅಲ್ಲಿಯ ಕೆಲವು ಶ್ಲೋಕಗಳು ಮಾತ್ರ ಇಲ್ಲಿ ಉದಾಹರಿಸಲ್ಪಡುತ್ತವೆ

"ಅಸ್ಮದಾರ್ಯವೈಭವಮ್"

(೧) ಶ್ರೀಮನ್ನಾರಾಯಣಸ್ಯ ಪ್ರಿಯತಮಚರಿತಾ ನಿತ್ಯಕೈಂಕರ್ಯನಿಷ್ಠಾ-
ಸ್ಸಮ್ಪತ್ಸೂನೋರ್ವರಿಷ್ಠಾ ಯತಿಪತಿಮಹಿತಾ ಸ್ಸತ್ತ್ವನಿಷ್ಠಾ ಗರಿಷ್ಠಾಃ ।
ಯದ್ವದ್ವಾ ಸಮ್ಪ್ರಸಾದಾನ್ಮಮ ಕಿಲ ನೃಹರೇರ್ಲಬ್ಧಜನ್ಮಾನ ಏವ
ಶ್ರೀಶಸ್ಯಾಚಾರ್ಯವರ್ಯಾ ಸ್ಸುವಿಶದವಿಭವಾ ಅಸ್ಮದಾರ್ಯಾಶ್ಶರಣ್ಯಾಃ ॥

(೨) ಶ್ರೀಮತ್ಯಾಂ ಮಾದಿಭೀಕೃತ್ಕುಲಶುಭಸರಿತಿ ಪ್ರಾಪ್ತಜನ್ಮಾಭಿಷೇಕಾ
ಆಚಾರ್ಯಾಸ್ಸಾತ್ತವಾದಪ್ರಮುಖಗುರುವರಾ ಮತ್ಪ್ರಿಯಾ ಸ್ಸತ್ತ್ವನಿಷ್ಠಾಃ ।
ಪ್ರೇಷ್ಠಾ ಮನ್ಮಾತುಲಾದ್ಯಾ ಅಪಿ ಶುಭಮತಯಃ ಕೌಶಿಕಾ ಏವ ಗೋತ್ರಾ
ದಾರ್ಯಾ ವಿದ್ವದ್ವರೇಣ್ಯಾ ಶ್ಶ್ರುತಿತತಿಶರಣಾ ಅಸ್ಮದಾರ್ಯಾಶ್ಶರಣ್ಯಾಃ ॥

(೩) ಅತ್ರೇದಂ ಸಚ್ಚರಿತ್ರಂ ವಿಲಸತು ಮಹತಾಂ ಮದ್ಗುರೂಣಾಂ ಪವಿತ್ರಂ
ಲೋಕಾನಾಂ ಮುಕ್ತಿಸಿದ್ಧ್ಯೈ ಭುವಿ ವಿಭವತನೋರ್ಮೇ ಮುರಾರೇಃ
ಪ್ರಸಾದಾತ್
ಶ್ರೀಮತ್ಕಲ್ಕೀನ್ದ್ರನಾಮ್ನೋ ಜಗತಿ ನರಹರಿಪ್ರಖ್ಯಯೈವ ಪ್ರಮುಖ್ಯ-
ಸ್ಯಾತ್ರ ಪ್ರಾಪ್ತಾವತಾರ ಪ್ರಥಿತಿಯುತಮಹಾಭಾಗ್ಯಸೌಭಾಗ್ಯಭೂಮ್ನಃ ।

(೪) ಶ್ರೀಮನ್ಕೃಷ್ಣಯದನ್ವಯೇ ಮಮ ಹರೇರಾರ್ಯಾ ಅಮೀ ಸಾತ್ತ್ವಿಕಾ
ಯದ್ವದ್ರ್ರಾ ಮಹಿತಾ ಮಹಾಗುಣಗಣಾಲಙ್ಕಾರಸಮ್ಭೂಷಣಾಃ ।
ನಿತ್ಯಂ ಶ್ರೀನಿಗಮಾನ್ತಯುಗ್ಮಸರಣೇಸ್ಸಾರಾಮೃತಾಮ್ಭೋನಿಧೌ
ನಿಷ್ಣಾತಾ ಜಗತಾಂ ಜಯನ್ತಿ ಗುರವಃ ಪ್ರಾಪ್ತಾಃ ಕಲಾಂ ದ್ರಾವಿಡೀಮ್ ॥

(೫) ಶ್ರೀವತ್ಸಗೋತ್ರಶುಭವಾದಿ ಭಯಙ್ಕರಾರ್ಯ-
ಶ್ರೀವಂಶವಾರಿಧಿವಿಧುಃ ಕಿಲ ಕಲ್ಕಿಸಿಂಹಃ ।
ಆರ್ಯಾನ್ ಭಜಾಮಿ ಶರಣಂ ಮಮ ಭಕ್ತವರ್ಯಾನ್
ಯದ್ವದ್ರಿಸಾನುಷು ಹರೇರ್ಮಮ ಕಿಙ್ಕರಾಗ್ರ್ಯಾನ್ ॥

(೬) ಕ್ಷಣಮಪಿ ನಿವಸನ್ತಃ ಕೇವಲಂ ಯಾದವಾದ್ರಾ-
ವಿತಿ ಮಹಿತಪುರಾಣಶ್ರೀಶುಭೋಕ್ತಿಂ ವಿಚಿನ್ತ್ಯ ।
ಕುಟಿರಚನಮುದಾರಂ ತತ್ರ ಭದ್ರಂ ಯತೀನ್ದ್ರ-
ಶ್ರಿತಜನಶರಣಂ ಚಾಪ್ಯಾಹ ಮೋಕ್ಷಸ್ಯ ಸಿದ್ಧ್ಯೈ ॥

## ಶ್ರೀ ಕಲ್ಕಿಸಿಂಹನ ಕಲಿಧ್ವಂಸಪ್ರಕಾರ—ಯೋಗೇಶ್ವರತ್ವಾದಿ ಮಾಹಾತ್ಮ್ಯ —ಮತ್ತು ಪ್ರಕೃತಕಾಲಾನುಗುಣವಾದ ಅವತಾರವೈಭವ.

ಶ್ರೀ ಕಲ್ಕಿಸಿಂಹನಾದ ಭಗವನ್ತನು ಅತೀತವಾದ ಆನನ್ದಸಂವತ್ಸರ -(1915ನೇ ಇಸವಿ)-ಮಾಘ ಕೃ ೭-ಆರಭ್ಯ ಕಲಿಪುರುಷಖಣ್ಡನ ಪೂರ್ವಕವಾಗಿ ದಿವ್ಯತಮವಾದ ಕೃತಯುಗ ಪ್ರತಿಷ್ಠಾಪನೆಗೋಸ್ಕರ ಸಂಕಲ್ಪಗಳಂ ಮಾಡಿ ತನ್ನ ಯೋಗೇಶ್ವರತ್ವ ಮಾಹಾತ್ಮ್ಯದಿಂದ ಸಹಸ್ರಾರೋದ್ಘಾಟನವಂ ಪಡೆದು ಊರ್ಧ್ವ ಲೋಕದ ದಿವ್ಯಸೂರಿಗಳೊಡನೆ ಸಂಭಾಷಣಾದಿಗಳಿಂದ ತನ್ನ ಅವತಾರಮಹಿಮೆ ಯನ್ನು ಉದ್ಘೋಷಿಸಿ ಪ್ರಕಟಪಡಿಸುತ್ತಿರುವುದು ಜಗದ್ವಿಖ್ಯಾತವಾಗಿದೆಯಷ್ಟೆ.

## ಶ್ರೀಕಲ್ಕಿಸಿಂಹ—ಪ್ರಬನ್ಧಗಳ ವಿವರ

ಶ್ರೀ ಕಲ್ಕಿಸಿಂಹ ಸ್ವಾಮಿಯವರು ದಿವಾರಾತ್ರ — ದೈನನ್ದಿನ ಚರಿತ್ರ - (Diary Note Books) ಲೇಖನಪರರಾಗಿ ಈಗ ೨೩೭ ಪುಸ್ತಕಗಳನ್ನು ಬರೆದು ಅನೇಕ ಲಕ್ಷ ಶ್ಲೋಕಗಳನ್ನು ಸಂಸ್ಕೃತಭಾಷೆಯಲ್ಲಿ ರಚಿಸಿ—ದ್ರಾವಿಡ-ಕರ್ಣಾಟಕಾಂಗ್ಲಾದಿ ಭಾಷೆಗಳಲ್ಲೂ ಅನೇಕವಾದ ಉಪನ್ಯಾಸಪರಂಪರೆಗಳನ್ನೂ, ಪೂರ್ವಾಚಾರ್ಯರೊಡನೆ ಸಂವಾದಪರಂಪರೆಗಳನ್ನೂ ಬರೆದು ಸರ್ವಮತ ಸಾಮರಸ್ಯಪೂರ್ವಕವಾಗಿ ತಮ್ಮ ಗೀತಾಚಾರ್ಯತ್ವ ಪ್ರಭಾವದಿಂದ ಶ್ರೀ ಭಗವನ್ಮತವನ್ನು ಪ್ರಕಟಪಡಿಸಿ ಇರುತ್ತಾರೆ. ಇವರು ಮುದ್ರಿಸುತ್ತಿರುವ ಮಹಾಪ್ರಬನ್ಧಗಳಿಂದ ಇವರ ಅವತಾರವೈಭವವು ವ್ಯಕ್ತವಾಗಿದೆ ಇವರ ಪ್ರಬನ್ಧಗಳ ವಿವರವನ್ನು ರಕ್ಷಾಪತ್ರದಿಂದಲೂ ಭಗವತ್ಸಂದೇಶದಿಂದಲೂ ತಿಳಿಯಬಹುದು. ಶ್ರೀ ಕಲ್ಕಿಸಿಂಹ ಚರಿತ್ರವು ಕ್ರಮೇಣ ಮುದ್ರಿತವಾಗುವುದು.

## ಶ್ರೀಕಲ್ಕಿಸಿಂಹ ಪ್ರತಿಜ್ಞಾ

ಶ್ರೀವರ್ಯಃ ಕಲ್ಕಿನೃಸಿಂಹಾರ್ಯಃ ಪ್ರತಿವಾದಿ ಭಯಙ್ಕರಃ ।
ಸರ್ವಚೇತನಮೋಕ್ಷಾಯ ದೀಕ್ಷಿತೋಽಹಂ ಪರಾತ್ಪರಃ ॥



ಶ್ರೀ ಕಲ್ಕಿರ್ನಾರಸಿಂಹಾರ್ಯೋ ಮಹಾವಿಷ್ಣುಃ
ಭಗರ್ವಾ ವಿಭವಾವತಾರಃ ||

ಶ್ರೀಃ

# ಶೋಧನಪತ್ರಿಕಾ.

| ಪುಟ | ಪಙ್ಕ್ತಿ | (ಅಸಾಧು) | (ಸಾಧು) |
|---|---|---|---|
| 1 | 3 | ತಿರುವಾಯ್ಮೊಳಿ | ತಿರುವಾಯ್ಮೊೞಿ |
| 2 | 5 | ವಳುದಿ | ವೞುದಿ |
| ,, | , | ನಾಡೆನ್ರುಮ್ | ನಾಡೆನ್ಱುಮ್ |
| ,, | ,, | ರೆನ್ರುಮ್ | ರೆನ್ಱುಮ್ |
| ,, | 6 | ಲೆನ್ರುಮ್ | ಲೆನ್ಱುಮ್ |
| ,, | 7 | ಪೊಳುದುಮ್ | ಪೊೞುದುಮ್ |
| | | (ಹೀಗೆಯೇ ವ್ಯಾಖ್ಯಾನದಲ್ಲೂ) | |
| 3 | 3 | ದಿರೈಂಜೇನ್ | ದಿಱೈಂಜೇನ್ |
| ,, | 4 | ಕುರೈ | ಕುಱೈ |
| ,, | 5 | ಪತ್ತು | ಪಱ್ಱು |
| | | (ಹೀಗೆಯೇ ವ್ಯಾಖ್ಯಾನದಲ್ಲೂ) | |
| 4 | 7 | ಕಿನ್ರೇನ್ | ಕಿನ್ಱೇನ್ |
| ,, | 9 | ಶೆನ್ದಮಿಳ್ | ಶೆನ್ದಮಿೞ್ |
| ,, | 10 | ಪೆರ | ಪೆಱ |
| | | (ಹೀಗೆಯೇ ವ್ಯಾಖ್ಯಾನದಲ್ಲೂ) | |
| 5 | 6 | ತಿಕಳುಮ್ | ತಿಕೞುಮ್ |
| ,, | ,, | ಪುಕಳ್ | ಪುಕೞ್ |
| ,, | 8 | ಆನ್ರು | ಆನ್ಱು |
| ,, | ,, | ತಮಿಳ್ | ತಮಿೞ್ |
| ,, | ,, | ಮರೈ | ಮಱೈ |
| ,, | ,, | ಈನ್ರು | ಈನ್ಱು |
| | | (ಹೀಗೆಯೇ ವ್ಯಾಖ್ಯಾನದಲ್ಲೂ) | |

| ಪುಟ | ಪಙ್ಕ್ತಿ | (ಅಸಾಧು) | (ಸಾಧು) |
|---|---|---|---|
| 5 | 23 | ವಿರ್ರೈ | ವಿಱ್ಱೈ |
| ,, | 24 | ನೆರಿ | ನೆಱಿ |
| ,, | 25 | ಊಳ್ವಿನೈ | ಊೞ್ವಿನೈ |
| ,, | ,, | ವಾಳ್ವಿನೈ | ವಾೞ್ವಿನೈ |
| ,, | 26 | ಯಾಳಿ | ಯಾೞಿ |
| | | (ಹೀಗೆಯೇ ವ್ಯಾಖ್ಯಾನದಲ್ಲೂ) | |
| 7 | 2 | ತಿರುವಾಯ್ಮೊಳಿ | ತಿರುವಾಯ್ಮೊೞಿ |
| ,, | 5 | ಉಯರ್ವರ | ಉಯರ್ವಱ |
| ,, | 6 | ಮಯರ್ವರ | ಮಯರ್ವಱ |
| ,, | 7 | ಅಯರ್ವರು | ಅಯರ್ವಱು |
| ,, | 8 | ತುಯರರು | ತುಯರಱು |
| ,, | ,, | ತೊಳುದೆಳೆ | ತೊೞುದೆೞೆ |
| | | (ಹೀಗೆಯೇ ವ್ಯಾಖ್ಯಾನದಲ್ಲೂ) | |
| 8 | 18 | ಮಲಮರ | ಮಲಮಱ |
| ,, | ,, | ಯೆಳು | ಯೆೞು |
| ,, | 19 | ಪೊರಿ | ಪೊಱಿ |
| ,, | 20 | ಮುಳು | ಮುೞು |
| ,, | ,, | ನಿಕಳ್ | ನಿಕೞ್ |
| ,, | ,, | ಕಳಿ | ಕೞಿ |
| | | (ಹೀಗೆಯೇ ವ್ಯಾಖ್ಯಾನದಲ್ಲೂ) | |
| 11 | 23 | ವಳಿ | ವೞಿ |
| 18 | 3 | ಶ್ರೀವಾದಿಕೇಸರಿ | ಶ್ರೀ |
| 20 | 17 | ಅತ್ತ | ಅಱ್ಱ |
| ,, | 6 | ಪತ್ತತ್ತೇ | ಪಱ್ಱಱ್ಱೇ |
| | | ಉತ್ತದು | ಉಱ್ಱದು |
| | | (ಹೀಗೆಯೇ ವ್ಯಾಖ್ಯಾನದಲ್ಲೂ) | |
| 21 | 4 | ಪತ್ತಿಲ | ಪಱ್ಱಿಲ |
| ,, | ,, | ಮುತ್ತ | ಮುಱ್ಱ |
| ,, | ,, | ನಿನ್ರ | ನಿನ್ಱ |

| ಪುಟ | ಪಙ್ಕ್ತಿ | (ಅಸಾಧು) | (ಸಾಧು) |
|---|---|---|---|
| 21 | 5 | ಪತ್ತಿಲ್ಲೈ | ಪಱ್ಱಿಲ್ಲೈ |
| ,, | ,, | ಮುತ್ತಿ | ಮುಱ್ಱಿ |
| | | (ಹೀಗೆಯೇ ವ್ಯಾಖ್ಯಾನದಲ್ಲೂ) | |
| 25 | 17 | ಇಯಲ್ಪಿನ | ಇಯಲ್ಪಿನ್ಱ |
| 40 | 7 | ಯಾಯಂ | ಯೂಯಃಂ |
| ,, | 30 | ಅಕನ್ನಿಲ್ | ಅನ್ನಿಲ್ |
| 42 | 24 | ಕೃ | ಕೃಪಾ |
| 44 | 6 | ‘ಶೀತಾನಿಲಾಘಾತತಃ’’—ಈ ಪಾಠವು ದೇವನಾಗರಿ (ಸ-ಗಾ-ರ) ಪಾಠಕ್ಕಿಂತ ಮೂಲಕ್ಕೆ ಅನುಸಾರಿಯಾಗಿದೆ. | |
| 53 | 4 | ಗಳೂ | ಗಳಿಗೂ |
| 55 | 2 | ಪಶುಗಳಿ | ಪಶುಗಳಿಗೆ |
| 56 | 14 | ಪರಿಭೃಢ | ಪರಿಬೃಢ |
| 61 | 4 | ಸಾನ | ಸ್ಥಾನ |
| ,, | 13 | ಆತ್ಯನ್ತ | ಅತ್ಯನ್ತ |
| 66 | 2 | ಆವೇಶ್ಯ | ಆವೇಶ |
| ,, | 14 | ನಿತಾ | ನಿತ್ಯಾ |
| 67 | 9 | ಪ್ರಯೋನಾ | ಪ್ರಯೋಜನಾ |
| 68 | 26 | ತಾಳ್ಕುಳ್ | ತಾಳ್ಕಳ್ |
| 73 | 15 | ಇಜ್ಞಾನ | ಜ್ಞಾನ |
| 74 | 17 | ಗರ್ಹಹಣ | ಗರ್ಹಣ |
| ,, | 26 | ಔಷಧವ | ಔಷಧ |
| 77 | 26 | ಜನರು | ಜನರ |
| 78 | 10 | ಗೋಸ್ಯಕನೆ | ಗೋಪಕನ್ಯೆ |
| ,, | 23 | ಕತರಿಸಿದ | ಕತ್ತರಿಸಿದ |
| 79 | 14 | ನೆಜ್ಜಲ | ನೈರ್ಜಲ |
| 82 | 15 | ಆಸದೃಶ | ಅಸದೃಶ |
| 90 | 18 | ಪದ | ಪದ್ಯ |
| 94 | 9 | ಶೆನಾ | ಶೆನ್ನಾ |
| 95 | 4 | ಮೂರಾಳು | ಮೂವರಾಳು |

| ಪುಟ | ಪಙ್ಕ್ತಿ | (ಅಸಾಧು) | (ಸಾಧು) |
|---|---|---|---|
| 104 | 4 | ಕ್ರಸ್ತ | ಕ್ಱಸ್ತ |
| 110 | 10 | ವೃತ್ತ | ವೈತ್ತ |
| 112 | 11 | ಶೋದಿಯ್ಯೈ | ಶೋದಿಯ್ಯ |
| 117 | 16 | ಪಯುಲ್ಕೈ | ಪಯಲ್ಕೈ |
| 118 | 14 } | ದೇವನಾಗರೀ (ಸ-ಗಾ-ರ) ಪುಸ್ತಕದಲ್ಲಿರುವ ಪಾಠಕ್ಕಿಂತ | |
| ,, | 15 } | ಈ ಪಾಠವು ಮೂಲಕ್ಕೆ ಅನುಸಾರಿಯಾಗಿದೆ | |
| 122 | 28 | ೨ ನಾಲಿಗೆ | "ದ್ವಿಜಿಹ್ವ" ಎಂಬ ಪ್ರಸಿದ್ಧಿ |
| 123 | 19 | ವೇಱಱರ್ | ವೇಱ್ಱೋರ್ |
| 124 | 12 | ಪೋಮ್ | ಪೋಯ್ |
| ,, | 13 | ಞ್ಜುಲುಮ್ | ತುಞ್ಜಲುಮ್ |
| 125 | 14 | ತೃಪ್ತಿಯಿಲ್ಲದ | ಶಾನ್ತವಾಗದ |
| 135 | 4 | ಪ್ರಭರೇವ | ಪ್ರಭುರೇಷ |
| 144 | 20 | ವಯಿಲ್ | ಪಯಿಲ್ |
| 152 | 28 | ಮಲಜಕ್ಷೆಭ್ಗೊ | ಮಲಜ್ಗ-ಕ್ಷೋಭ |
| 167 | 3 | ಏಱಱ್ತೃ | ಏಱ್ಱೃ |
| ,, | 19 | ಅದ | ಅದು |
| ,, | 20 | ನೋಡೋಣು | ನೋಡೋಣ |
| 168 | 3 | ಮೋಕ್ಷೆ | ಮೋಕ್ಷ |
| 171 | 14 | ಕೊಲ್ | ಕೊಳ್ |
| 173 | 6 | ಪ್ರತ್ಯಕ್ಷೋ | ಪದ್ಮಾಕ್ಷೋ |
| 176 | 11 | ಸ್ತನತಿ | ಸನ್ತತಿ |
| 177 | 5 | ವಡಿಸಿದೆನು | ಪಡಿಸಿದೆನು |
| 184 | 17 | ಕುರುಮಮ್ | ಕರುಮಮ್ |
| 186 | 18 | ಏತ್ತೇೞ್ | ಏತ್ತೞ್ |
| 187 | 15 | ಪರಿದಿ | ಪರುದಿ |
| ,, | 25 | ಪರಿದಿಯೋ | ಪರುದಿಯೋ |
| 191 | 15 | ಆಲಮನ್ನು | ಆಲಮರ್ನ್ನು |
| 191 | 22 | ಆಲಮನ್ನು | ಆಲಮರ್ನ್ನು |
| 197 | 16 | ಇರ್ಬ್ಬರಿಗೂ | ಇಬ್ಬರಿಗೂ |

| ಪುಟ | ಪಙ್ಕ್ತಿ | (ಅಸಾಧು) | (ಸಾಧು) |
|---|---|---|---|
| 198 | 28 | ಮೋಕ್ಷನನ | ಮೋಕ್ಷನನ್ದ |
| 199 | 27 | ಆಲಮನ್ದು | ಆಲಮರ್ನ್ದು |
| 204 | 25 | ಶೇರ್ವೈತ್ತೇ | ಶೀರ್ವೈತ್ತೇ |
| 224 | 19 | ಇಥನ್ನಾರ್ದ್ಕ್ | ಇಡನ್ನಾರ್ದ್ಕ್ |
| 227 | 3 | ವೆಡವರ್ಮುಕ್ | ವೇದವರ್ಮುಕ್ |
| 229 | 17 | ಹತನೆಯು | ಹತ್ತನೆಯ |
| 230 | 2 | ಸಾನಿಧ್ಯ | ಸಾನ್ನಿಧ್ಯ |
| 238 | 28 | ಮಾಲಿನ | ಮಾಲಿನ್ಯ |
| 239 | 23 | ತಿಕ್ಷ್ಣಾಗ್ರ | ತೀಕ್ಷ್ಣಾಗ್ರ |
| 241 | 17 | ಪುನ್ನಃ | ಪುನಃ |
| 250 | 18 | ವಿಡುತ್ತುಮೆಲೇಕ್ | ವಿಡುತ್ತುಮಿಲೇಕ್ |
| 252 | 19 | ಪೆಱ್ಱು | ಪೆಱ್ಱು |
| 253 | 24 | ತರಾರಿಃ | ಶತಾರಿಃ |
| 263 | 21 | ಕಷ್ಟೇಷು | ಕಷ್ಟೇಷು |
| 273 | 4 | ರಕ್ಷಣಮ | ರಕ್ಷಣಮ್ |
| 277 | 15 | ನಿತ್ವಸೂರಿ | ನಿತ್ಯಸೂರಿ |
| 279 | 29 | ಪಿರಪ್ಪಾರರ್ | ಪಿಱಪ್ಪಾರ್ |
| 281 | 24 | ತಿಳ್ವಾರ್ಯಕ್ | ತಿರಳ್ವಾಝ್ಕ್ |
| 282 | 2 | ಸೌನ್ದರ್ಯ | ಪರಿಮಳ |
| ,, | 22 | ಕಣ್ಣುನೈ | ಕಣ್ಣನೈ |
| 287 | 14 | ಸೇರಲು | ನಿಲ್ಲೈನಿಱ |
| 291 | 22 | ಉರೈಕ್ಕಿನ್ಟ | ಉರೈಕ್ಕಿಱ |
| 296 | 26 | ಆಕಿನ | ಆಕಿನಿಱ |
| 313 | 28 | ಅಡಿಯಾರ್ | ಅಡಿಕಳ್ |
| 315 | 19 | ಬೆಳೆಯುವಂತೆ | ಬೆಳೆಯುತ್ತಿದ್ದ |
| 317 | 7 | ಮಡಿಯಾನೇ | ಮುಡಿಯಾನೇ |
| ,, | 12 | ತೋ | ತೊ |
| 319 | 13 | ಪೂರ್ಣ ಚನ್ದ್ರ | ಚನ್ದ್ರ |
| 321 | 2 | ಕಾಣಬೇಕೆಂದು | ಕಾಣುವಹಾಗೆ |
| 324 | 13 | ಅ | ತಾವೆನ |

| ಪುಟ | ಪಙ್ಕ್ತಿ | (ಅಸಾಧು) | (ಸಾಧು) |
|---|---|---|---|
| 327 | | (ದ್ರ. ಉ ಸಂ) ಈ ದಶಕದ ಶ್ಲೋಕವು ನೂತನ ಭಗವದ್ವಿಷಯ ಸಂಪುಟದ ಕೊನೆಯಲ್ಲಿ ಮುದ್ರಿತವಾಗಿದೆ | |

"ಷಷ್ಠೇ ಬಹಿರ್ನಯನತೋ ಹರಿಮಾಪ್ತುಮಾಶಾ
ಜಾತಾ ಮುನೇರಥ ತದೀಯಜನಾವಲೋಕಾತ್ |
ಉತ್ತಮ್ಭಿತಾ ಸ್ವಕರಣೈರಪಿ ಕಾಮಯನ್ತೀ
ಶೋಕಾತಿರೇಕಜನನೀ ಪುನರಷ್ಟಮೇಽಭೂತ್ ||

| | | | |
|---|---|---|---|
| 336 | 20 | ಕೂಣ್ಡು | ಕೊಣ್ಡು |
| 340 | 3 | ಮಿಚ್ಚೂೞ್ | ಮಿಚ್ಚೊೞ |
| 342 | 19 | ಯೊಮ್ | ಯುಮ್ |
| 347 | 17 | ತಮ್ | ತೞ |
| 351 | 24 | (ವಟದಳಶಾಯಿಯಾದ)—ಇದು ಅನಾವಶ್ಯಕ | |
| 361 | 24 | ಸ್ಜಿಚ್ಚನ್ನೈೀತ | ಸ್ಜಿಚ್ಚನ್ನ್ಯೈೀತ |
| 363 | 16 | ಇನ್ನಿರುತಿಯಾಯ್ | ಇನರುತಿಯಾ |
| 372 | 24 | ಕೊಲ್ಲವ್ವೈ | ಕೊಲ್ಲೆ ವ್ವೈ |
| 375 | 26 | ತೞೀ | ತೞೀ |
| ,, | 28 | ಣ್ಣೈಶ್ರೀ | ಶ್ರೀ |
| 378 | 18 | ಇಲಙ್ಗಲ | ಇಲಙ್ಗೆಲ |
| 381 | 15 | ವಣ್ | ವಣ್ |
| 382 | 10 | ಮನಿ | ಮುನಿ |
| 389 | 13 | ಸ್ಜಲ್ಪ | ಸ್ವಲ್ಪ |
| 391 | 21 | ಅತ್ಮ | ಆತ್ಮಾ |
| 392 | 6 | ಲೇಱ | ಲೇಱಿ |
| ,, | 18 | ಏತ್ತಿನೇ | ಯಾನುಮ್ ಏತ್ತಿನೇ |
| 394 | 12 | ಮಣ್ಣೊಡೇ | ಮಣ್ಣೋಡೇ |
| 404 | 6 | ದೃಷ್ಟಾ | ದೃಷ್ಟ್ವಾ |
| ,, | 13 | ಗೋಪಿಗಳ | ಬೆಣ್ಣೆ ಕಡೆಯುವ ಸ್ತ್ರೀಗಳ |
| ,, | 24 | ತೇಱಾದವ್ | ತೇಱಾದುಮ್ |
| 412 | 8 | ಎೞುವೈಯುಮ್ | ಎೞುವೈ ಯುಮ್ |
| 418 | 16 | ವಾಗೆ | ವಾಗಿ |

| ಪುಟ | ಪಙ್ಕ್ತಿ | (ಅಸಾಧು) | (ಸಾಧು) |
|---|---|---|---|
| 420 | 25 | ಮಾರ್ | ಮಾೞು |
| 434 | 3 | ಕೀಳ್ಳ್ಯ | ಕೀೞ್ |
| 436 | 15 | ಸರಣಿ | ಸರಣಿಃ |
| 445 | 2 | ಪ್ರತಿಷ್ಠಾಪ್ರ | ಪ್ರತಿಷ್ಠಾಂ |
| 454 | 25 | ಪ್ರಸಿದಿ | ಪ್ರಸಿದ್ಧಿ |
| 457 | 23 | ತುಯೆರ್ | ತುಯಱ್ |
| 467 | 24 | ಆಱ | ಅೞ |
| 470 | 29 | ಯರ್ಾ | ಸರ್ಾ |
| 472 | 3 | ಅಘ್ರಾ | ಆಘ್ರಾ |
| ,, | 22 | ಭವಪೂ | ಭವವೂ |
| 474 | 21 | ಪರಪುರುಷಾ | ಪರಮಪುರುಷಾ |
| 483 | 4 | ಆಷ್ಟದು | ಆದುಷ್ಟ |
| 487 | 8 | ವಾಗುತ್ತವೆ | ವಾಗುತ್ತದೆ |
| ,, | 15 | ವಾಂಚಿಕ | ವಾಚಿಕ |
| 488 | 16 | ತತ್ವಾದ | ತತ್ಪಾದ |
| 492 | 4 | ರೋರಿಸು | ತೋರಿಸು |
| 494 | 12 | (ಖಂಡಾದುಪರಿ......... .... ಬಹಿರ್ಭೂತನಾಗಿ) | ಕಂಠದಿಂದ ಮೇಲಕ್ಕೆ (ನಟನದಿಂದ) |
| 195 | 8 | ನಿರ್ | ನೀರ್ |
| 497 | 16 | ಯಜ್ಞಿಕಲ | ಯಜ್ಞಕಲ |
| 500 | 17 | ನೋಡು | ನೊಡು |
| 505 | 19 | ಅನ್ತ್ರ | ಅನ್ತ್ಯ |
| ,, | 20 | ಕತ್ರಾ | ಕಲಾ |
| ,, | ,, | ಕ್ಷಿಪ್ಯ | ಕ್ಷಿಪ್ರ |
| 515 | 21 | ಳುಮ್ಮೆ | ಳುಮ್ಮೆಲ |
| 516 | 15 | ಆನ್ತ | ಅನ್ತ |
| 517 | 11 | ಳ್ವಾಕ | ಳಾಕ |
| 518 | 8 | ಪೊವಿಲ್ | ಪೂವಿಲ್ |
| 520 | 5 | ಶತವಖ | ಶತಮುಖ |
| 524 | 15 | ನೆನ್ನೆಕೈ | ನೆನ್ನೆಲ |

| ಪುಟ | ಪಙ್ಕ್ತಿ | (ಅಸಾಧು) | (ಸಾಧು) |
|---|---|---|---|
| 524 | 21 | ಪೂರ್ಣವಾಗಿ | ಗೌರವವನ್ನು |
| 525 | 8 | ,, | ,, |
| 528 | 18 | ತೋಃಥ್ರ | ತೋಃಥ್ರಿ |
| 531 | 15 | ತೋಃರ | ತೋಃಱ |
| 534 | 7 | ಶ್ರೀಕೃಷ್ಣನನ್ನು ಸ್ತೋತ್ರಮಾಡುವುದಕ್ಕೆ | |
| 543 | 6 | ಚನ್ದ್ರಿಕಾಽಪಿ ದಹತಿ | ಶೀತಲೋಽಪಿಪವನೋ |
| ,, | ,, | ಜ್ವಾಲಾಮಯಿಾ | ಜ್ವಾಲಾಮಯೋ |
| 544 | 9 | ಅದಿತ್ಯನ | ಆದಿತ್ಯನ |
| 545 | 12 | ಉತ್ರಜು | ಉತ್ರಜ್ಗು |
| 554 | 9 | ನಿನೊಥ್ರಿ | ನಿನೊಥ್ರಿ |
| ,, | 23 | ಕೈಯಳ್ | ಕೈಯುಳ್ (ಅ) |
| ,, | 29 | ತಥ್ರನ್ದ | ತಾಥ್ರನ್ದ |
| 573 | 13 | ಲೋಕ | ಲೋಕದಲ್ಲಿ |
| ,, | 23 | ಧ್ದಜೀನ | ಧ್ವಜೀನ |
| 574 | 22 | ಕೇಳ | ಕೇಶ |
| 578 | 13 | ನಜ್ಗೀ | ನಜ್ಗೀ |
| 580 | 29 | ತಿಳಿದದ | ತಿಳಿದವ |
| 582 | 27 | ಶ್ಯಾಮೃಲ | ಶ್ಯಾಮಲ |
| 592 | 6 | ತವಿದಂ | ತಮಿದಂ |
| 599 | 18 | ಇಶೆ | ಇಶ್ರೈ |
| 6)5 | 25 | ಎನು | ಎನ್ನು |
| 614 | 19 | ಕರುಕಾ | ಕುರುಕಾ (ಅ) |
| 618 | ı9 | ಆಜ್ಞಾಶಿ | ಆಜ್ಞಾಯ |
| 619 | 26 | ಆತ | ಆತ್ಮ |
| 6_0 | 5 | ಮುಣ್ಣೈಲ | ಮಣ್ಣೈಲ |
| 621 | 27 | ಕೃಪಾಯಾ | ಕೃಪಯಾ |
| 622 | 5 | ಮನನ | ಮನ |

श्रीकल्कि:

H. H. Sri Kalki (G.I.)
(PROF. M. T. NARASIMHIENGAR)

MALLESWARAM,
*BANGALORE.*

*Date.....................1931*

To

DEAR SIR,

I herewith send you
for your acceptance and request you to kindly extend your liberal patronage to Our Publications of the Sacred Vedantic Series in several languages, for the Elevation and Salvation of all souls, irrespective of caste or creed, kind or sex, race or nation.

It is estimated that at least Rs. 50,000 are required to publish All My Works now on hand.

Only very few devotees have kindly patronised these publications till now, to some extent. (Vide-List of Patrons and Supporters for our Publication Fund, on the next page).

Relying on your generous patronage,
I am
Yours sincerely,

(Retired Sanskrit Professor)
Sri Kalki, (G.I.)

# DONATIONS.

| | Rs. | a | p. |
|---|---|---|---|
| **THE MYSORE GOVT. MUZRAI DEPARTMENT—** | | | |
| For 50 copies of the Kannada Tiruvaymoli Series ... | 300 | 0 | 0 |
| **THE UBHAYA VEDANTA PRAVARTANA SABHA, MALLESWARAM—** | | | |
| For 5 copies of Tiruvaymoli (Kannada Rs. 30 and 5 copies of Sahasragatha Ratnavali Rs. 20 ... | 50 | 0 | 0 |

## H. H. Sri Kalki's Publication Fund.

The following devotees have hitherto come forward to kindly patronise and support our Publications :—

### Contributions for the Kannada Tiruvay-moli Series.

#### Patrons

| | | Rs. | a | p. |
|---|---|---|---|---|
| 1. | His Highness the Maharaja of Mysore ... | 200 | 0 | 0 |
| 2. | Professor M. T Naraniengar, M A, Malleswaram | 200 | 0 | 0 |
| 3. | Sriman S. Cadambi Avl. (Retd. Chief Engineer) Malleswaram ... | 100 | 0 | 0 |
| 4. | Sriman N. Anandalvar, B.A, B C.E (Rtd. Ex., Engineer), Malleswaram ... | 50 | 0 | 0 |
| 5. | Sriman M. Aji-Venkatachar, B.A., B L.; ,, M. Aji Naraniengar, M.A.; ,, M. Aji Srinivasiengar, B.A., B.L. ... | 30 | 0 | 0 |
| 6. | ,, (D. B.) M. N. Krishna Rao, B.A., State Councillor ... | 25 | 0 | 0 |
| 7. | ,, (R.B.) R. Narasimhachar, M A. Retd. Director of Archeology, Malleswaram ... | 25 | 0 | 0 |

| No. | | Name | Rs. | a. | p. |
|---|---|---|---|---|---|
| 8. | Sriman | (R B.) M. Shama Rao, M.A Retd. I.G. of Edn. ... | 25 | 0 | 0 |
| 9. | „ | G. R. Narasimhiengar, Retd Electrical Engineer ... | 25 | 0 | 0 |
| 10. | „ | M. A. Ramanujan, Asst. Engineer ... | 25 | 0 | 0 |
| 11. | „ | M A. Rangachar, Dy. Comptroller ... | 25 | 0 | 0 |
| 12. | „ | T. S. Raghavachar, Retd. Engineer ... | 25 | 0 | 0 |
| 13 | „ | N V. Narasimhiengar, Advocate ... | 25 | 0 | 0 |
| 14. | „ | M. G. Singarachar, Agrl. Engineer ... | 25 | 0 | 0 |
| 15. | „ | R. Tirunaraniengar, Asst. Commr ... | 25 | 9 | 0 |
| 16. | „ | M. A. Varadachar, Dist. Forest Officer ... | 25 | 0 | 0 |
| 17. | „ | R A. Narasimhiengar, Asst. Secretary ... | 25 | 0 | 0 |
| 18. | „ | Sri Mahant Prayag Dossjee of Tirupati ... | 15 | 0 | 0 |

**Supporters**

| No. | | Name | Rs. | a. | p. |
|---|---|---|---|---|---|
| 1. | Sriman | S. Venkatarangan, Incometax Deputy Commr. . | 10 | 0 | 0 |
| 2 | „ | D. Raghavachar, Advocate .. | 10 | 0 | 0 |
| 3. | „ | B. Narayanaswami Iyengar D. C., Seshadripur ... | 10 | 0 | 0 |
| 4. | „ | G. Selvapillai, M.A. (Hons) LL.B (Grocer) | 10 | 0 | 0 |
| 5. | „ | (R.B.) M. C. Rangiengar, Holenarsipur ... | 10 | 0 | 0 |
| 6. | „ | C. Rangaswami Iyengar, Professor, Engineering College .. | 10 | 0 | 0 |
| 7. | „ | H. S. Krishniengar, Retd. Supervisor ... | 10 | 0 | 0 |
| 8. | Mrs. | Sitamma, Malleswaram . | 10 | 0 | 0 |
| 9. | M. R. Ry. | H. Rangachar, M.A., D.T S., Malleswaram ... | 10 | 0 | 0 |
| 10. | „ | M. G. Singariengar, Sub Engineer ... | 10 | 0 | 0 |
| 11. | „ | M. A. Narayaniengar, Curator, Book Depot ... | 10 | 0 | 0 |
| 12. | „ | B. S Krishnaswami Iyengar, Retd. Sub-Judge ... | 10 | 0 | 0 |

| | | | Rs. | a. | p. |
|---|---|---|---|---|---|
| 13. | Sriman | M. J. Narasimhan, Mycologist ... | 10 | 0 | 0 |
| 14. | " | M. A. Singariengar, Doctor ... | 10 | 0 | 0 |
| 15. | " | M. B. Varadarajiengar, Advocate ... | 10 | 0 | 0 |
| 16. | " | S. Srinivasiengar and S. Tirumalachar... | 10 | 0 | 0 |
| 17. | " | A. Narasimha Murti, (Retd. Try. Offr.)... | 10 | 0 | 0 |
| 18. | " | S. Venkatarangiengar's Charities ... | 10 | 0 | 0 |
| 19. | " | G. R. Josyer, M.A., FR.E.S. &c. Mysore ... | 10 | 0 | 0 |
| 20. | " | C. V. Narasimhiengar, Advocate ... | 10 | 0 | 0 |
| 21. | " | K. I. R. Iyengar, Entally, Calcutta ... | 10 | 0 | 0 |
| 25. | " | V. Gopalaswami Iyengar, M. A., Registrar, Mysore University ... | 10 | 0 | 0 |

N.B.—List of Supporters who have paid less than Rs. 10, and List of Subscribers etc. will be published in due course, separately.

(Donations continued)

## Patrons

| | | | | | |
|---|---|---|---|---|---|
| 19. | Sriman | K. R. Seshachar (Chief Engineer) ... | 20 | 0 | 0 |
| 20. | " | N. G. Krishniengar (Ex. do ) ... | 20 | 0 | 0 |
| 21. | " | M. P. T. Narayan (Kalyan) ... | 15 | 0 | 0 |

## Supporters

| | | | | | |
|---|---|---|---|---|---|
| 26. | " | V. Naraniengar (Finl Asst. to D.P.I.) ... | 10 | 0 | 0 |
| 27. | " | Y. G. Srinivasan (Ajodhya) ... | 10 | 0 | 0 |
| 28. | " | K. R. Garudachar (Asst. Engineer) ... | 10 | 0 | 0 |

N. B.—Further names will be published at the end of Vol. II.

V. B. SOOBBIAH & SONS, BANGALORE.

ಶ್ರೀಕಲ್ಕಿ-ಪ್ರ-ಭ-ತೊ-ನರಸಿಂಹಾಚಾರ್ಯಸ್ವಾಮಿಯವರಿಂದ
ಪ್ರಕಟಿತವಾಗಿರುವ ಪ್ರಬನ್ಧಗಳು.

(ದೇವನಾಗರ ಲಿಪಿ)

| | | |
|---|---|---|
| ೧. | ವೇದಾನ್ತವಾದಾವಳೀ (ಶ್ರೀಮದನನ್ತಾರ್ಯವಾದಾರ್ಥಮಾಲಾ) ೨ ಸಂಪುಟಗಳೂ ಸೇರಿ ಬೈಂಡು ಆದುದು .... | ರೂ ಆ. ಪೈ 11— 8—0 |
| ೨. | ಶ್ರೀವರವರಮುನಿ ದಿನಚರ್ಯಾ (ಸವ್ಯಾಖ್ಯಾನ) .. | 0—12—0 |
| ೩. | ಸಹಸ್ರಗಾಧಾರತ್ನಾವಳೀ .... | 4— 0—0 |

(ಕನ್ನಡ ಲಿಪಿ)

| | | |
|---|---|---|
| ೧ | ಶ್ರೀಭಾಷ್ಯಸಾರಾಮೃತ ... | 1—0—0 |
| ೨. | ಗೀತಾತಾತ್ಪರ್ಯಸಾರಾಮೃತ .. | 0—8—0 |
| ೩. | ತಿರುವಾಯ್ಮೊಳಿ (ಪ್ರಥಮ ಸಂಪುಟ ೧-೫ ಶತಕಗಳು)-(ಸವ್ಯಾಖ್ಯಾನ)—ಬೈಂಡಾದುದು .. | 4—0—0 |
| ೪ | (ತೆಲುಗುಲಿಪಿ)-ಗಾನಾಮೃತತರಂಗಿಣೀ .. | 0-12—0 |
| ೫. | (ಇಂಗ್ಲೀಷ್)-Divine Doctrine or Universal Religion .. | 0-12—0 |

**ಮುದ್ರಣಕ್ಕೆ ಸನ್ನದ್ಧವಾದ ಪ್ರಬನ್ಧಗಳು:—**

| | | |
|---|---|---|
| ೧. | ಶ್ರೀರಾಮಾಯಣ ತಾತ್ಪರ್ಯ ಸಾರಾಮೃತ . | 0—8—0 |
| ೨. | ಶ್ರೀಭಗವನ್ಮತ . | 0—4—0 |
| ೩. | ಸಹಸ್ರಗಾಧಾತಾತ್ಪರ್ಯಸಾರಾಮೃತ . | 1—0—0 |
| ೪. | ರಹಸ್ಯಾರ್ಥಸಾರಾಮೃತ . | 0—8—0 |
| ೫. | ಉಪನಿಷತ್ತಾತ್ಪರ್ಯಸಾರಾಮೃತ .. | 1—0—0 |
| ೬. | ಉಭಯವೇದಾನ್ತಸಾರಾಮೃತ .. | 0—8—0 |
| ೭. | ಅವತಾರರಹಸ್ಯಸಾರಾಮೃತ .. | 0—8—0 |
| ೮. | ಶ್ರೀ ಕಲ್ಕಿಸಿಂಹಾವತಾರಚರಿತ್ರ .. | 0—4—0 |

ಇತ್ಯಾದಿ

ಈ ಪುಸ್ತಕಗಳ ಕ್ರಯದಲ್ಲಿ ಪೋಸ್ಟೇಜ್ ಸೇರಿಲ್ಲ. ಪ್ರತ್ಯೇಕ ಕೊಡಬೇಕು.

## H. H. Sri Kalki's Publication Fund.

All Patrons of Literature, Science, Religion and Philosophy are requested to send their Liberal Donations towards the above Fund, to the Private Secretary to His Holiness Sri-Kalki, G. I., Malleswaram, Bangalore Copies of all publications will be sent free to Liberal Donors. Special Donations towards this Kannada Tiruvaymoli Edition are earnestly solicited.

## READY FOR SALE.

| | In Devanagari— | Rs. | A. | P. |
|---|---|---|---|---|
| 1. | Vedanta-Vadavali (Anantarya's Philosophical Works) ... | 11 | 8 | 0 |
| 2. | Vara-vara-muni Dinacharya (with commentary) | 0 | 12 | 0 |
| 3. | Sahasragatha-Ratnavali (Sanskrit Metrical Version of Tiruvaymoli) ... | 4 | 0 | 0 |
| | **In Kannada** | | | |
| 1. | Sri-Bhashya-saramrita ... | 1 | 0 | 0 |
| 2. | Gita-tatparya-saramrita ... | 0 | 8 | 0 |
| 3. | Tiruvaymoli (with Kannada Commentary and Sanskrit Version—Parts I to V) Cloth bound | 4 | 0 | 0 |
| 4. | Ganamrita-tarangini (Divine Songs) ... | 0 | 12 | 0 |
| 5. | Divine Doctrine or Universal Religion (English) | 0 | 12 | 0 |

## IN THE PRESS

| | In Kannada— | | | |
|---|---|---|---|---|
| 1. | Ramayana-tatparya-saramrita ... | 0 | 8 | 0 |
| 2. | Sri-Bhagavanmata (Universal Religion) ... | 0 | 4 | 0 |
| 3. | Tiruvaymoli (with Kannada Commentary etc. Part VI) ... | 0 | 12 | 0 |

and other works.

**Apply to—** THE MANAGER,
The Vedanta Book Depot,
17, East Park Road,
Malleswaram, Bangalore.